# ಕರ್ಣಾಟಕ ಕಾವ್ಯಮಂಜರಿ.

ಅಭಿನವ ಪಂಪಾಭಿಧ ನಾಗಚಂದ್ರ ವಿರಚಿತ

## — ಮ ಲ್ಲಿ ನಾ ಥ ಪು ರಾ ಣಂ —



[೧೧]

ಎಸ್. ಜಿ. ನರಸಿಂಹಾಚಾರ್,
ಮ. ಆ. ರಾಮಾನುಜಯ್ಯಂಗಾರ್,
ಇವರಿಂದ ಟಿಪ್ಪಣದೊಡನೆ ಪರಿಷ್ಕರಿಸಲ್ಪಟ್ಟು

ರ್ಣಾಟಕ ಕಾವ್ಯಮಂಜರಿ ಆಫೀಸ್ ಪ್ರೊಪ್ರೈಟರುಗಳಿಗಾಗಿ

ಮೈಸೂರು,
ಸದ್ವಿದ್ಯಾಮಂದಿರ ಮುದ್ರಾಶಾಲೆಯಲ್ಲಿ ಮುದ್ರಿತವಾಯಿತು.
೧೮೯೫

[ಕ್ರಯ ೩ ರೂಪಾಯಿ.

ಕರ್ಣಾಟಕ ಕಾವ್ಯಮಂಜರಿ ಆಫೀಸ್ ಮ್ಯಾ. ಪ್ರೊಪ್ರೈಟರಾದ
ಮ. ಕುಮಾರಸ್ವಾಮಿ, ತಿರುಮಲಾಚಾರ್, ಆ. ಅನಂದಾಳ್ವಾರ್,
ಇವರಲ್ಲಿ ದೊರೆಯುತ್ತ

# ಪೀಠಿಕೆ. §

—o—

## — ಕವಿಚರಿತ್ರವು —

ಈ ಕವಿಯ ಹೆಸರು ನಾಗಚಂದ್ರನು. ಈತನಿಗೆ ಅಭಿನವಪಂಪನೆಂಬ ಮತ್ತೊಂದು ಪ್ರಸಿದ್ಧವಾದ ಹೆಸರುಂಟು. ಈತನ ದೇಶವೂ, ವಂಶವೂ ಈತನ ಗ್ರಂಥಗಳಿಂದ ತಿಳಿವುದಿಲ್ಲ. ಆದರೆ

"ನಿಜವಿಭವೋದಯಂ ಸಫಲಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ ।
ವಿಜಯಪುರಕ್ಕಲಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮಂ ॥
ಸುಜನಸಭಾವತಂಸಮೆನೆ ಪೇಳ್ದುದಿತೋಚಿತಮಾಗೆ ಮಾಡಿದಂ ।
ನಿಜಕವಿತಾಗುಣೋದಯಮದೆಂಬಿನಮೀಕೃತಿ ನಾಗಚಂದ್ರನಾ ॥"

ಎಂಬ ಪದ್ಯದಲ್ಲಿ ಈತನು ವಿಜಯಪುರದಲ್ಲಿ ಮಲ್ಲಿನಾಥಜಿನಾಲಯವನ್ನು ಕಟ್ಟಿಸಿದಂತೆ ಹೇಳಿರುವುದರಿಂದ, ವಿಜಯಪುರವೇ ಇವನ ಊರಾಗಿರಬಹುದು. ಈ ವಿಜಯಪುರವು ಆವುದೋ ತಿಳಿಯದು. ಈತನು ಜೈನಮತಕ್ಕೆ ಸೇರಿದವನು. ಈತನ ಗುರು ಬಾಲಚಂದ್ರಮುನೀಂದ್ರನು. ಈತನಿಗೆ ಭಾರತೀಕರ್ಣಪೂರ, ಕವಿತಾಮನೋಹರ, ಸಾಹಿತ್ಯವಿದ್ಯಾಧರ, ಸಾಹಿತ್ಯಸರ್ವಜ್ಞ, ಚತುರಕವಿಜನಾಸ್ಥಾನರತ್ನಪ್ರದೀಪ, ಸೂಕ್ತಿಮುಕ್ತಾವತಂಸ ಎಂಬ ಬಿರುದುಗಳು ಉಂಟೆಂದು ತಿಳಿಯಬರುತ್ತದೆ. *

---

§ ಈ ಪೀಠಿಕೆಯು ಮ॥ ರಾ॥ ಎಸ್. ಜಿ. ನರಸಿಂಹಾಚಾರ್ ಮ॥ ರಾ॥ ಆರ್. ನರಸಿಂಹಾಚಾರ್ ಎಮ್.ಎ. ಇವರುಗಳಿಂದ ವಿರಚಿತವಾದ "ಕವಿಕಥಾಮೃತಶರಧಿ" ಎಂಬ ಗ್ರಂಥದಿಂದ ಸಂಗ್ರಹಿಸಲ್ಪಟ್ಟಿದೆ.

* ಮಲ್ಲಿನಾಥಪುರಾಣದ ೪ ನೆಯ ಆಶ್ವಾಸದ ೧ ನೆಯ ಪದ್ಯದಲ್ಲಿ "ನರೇಂದ್ರಚೂಡಾರತ್ನಂ" ಎಂದೂ ಷಷ್ಠಾಶ್ವಾಸದ ಕೊನೆಯ ಪದ್ಯದಲ್ಲಿ "ರಾಜವಿದ್ಯಾವಿನೋದಂ" ಎಂದೂ, ಅಷ್ಟಮಾಶ್ವಾಸದ ಕೊನೆಯ ಪದ್ಯದಲ್ಲಿ "ರಾಜವಿದ್ಯಾಧರಂ" ಎಂದೂ ಇವೆ. ಇವು ಕವಿಯ ಬಿರುದುಗಳೋ ಅಥವಾ ಕಥಾನಾಯಕನ ಬಿರುದುಗಳೋ ಗೊತ್ತಾಗುವದಿಲ್ಲ. ಇವು ಈತನ ಬಿರುದುಗಳೇ ಆದ ಪಕ್ಷಕ್ಕೆ ನಾಗಚಂದ್ರನು ಒಬ್ಬ ರಾಜನೋ ಎಂಬ ಸಂಶಯಕ್ಕೆ ಅವಕಾಶ ಉಂಟು.

ಈತನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಗ್ರಂಥಗಳನ್ನು ಬರೆದಿರುವಂತೆ ದೇವಚಂದ್ರನು ಹೇಳುತ್ತಾನೆ.

ಈ ಕವಿಯ ವಿಷಯವಾಗಿ, ಕರ್ಣಪಾರ್ಯನು ನೇಮಿನಾಥ ಪುರಾಣದಲ್ಲಿ:—

" ಅದ್ಯತನನಾಗಿಯುಂ ನೆಗ ।
ೞ್ದುದ್ಯರ ದೊರೆಯೆನಿಸಿ ಮೆಱೆದು ಸಾಹಿತ್ಯಕಳಾ ॥
ಹೃದ್ಯತೆಯೆನೆಸೆದನಾವಿರ ।
ವದ್ಯಗುಣಂ ಸಂದ ನಾಗಚಂದ್ರಕವೀಂದ್ರಂ ॥" ಎಂದೂ,

ಜನ್ನನು ಅನಂತನಾಥ ಪುರಾಣದಲ್ಲಿ:—

" ನಾಗಚಂದ್ರನ ರಸಭಾವಂ " ಎಂದೂ,

ಮಂಗರಸನು ನೇಮಿಜಿನೇಶ ಸಂಗತಿಯಲ್ಲಿ:—

" ... ರಘು । ಕಾಂತನ ಮಲ್ಲಿತೀರ್ಥಕರಾ ॥
ಸಂತಸದಿಂ ವರ್ಣಿಸಿದನಾಗಚಂದ್ರನ । ಸಂತತವುಭಿನುತಿಸುವೆನು ॥ "

ಎಂದೂ,

ದೇವಚಂದ್ರನು " ಈ ಕವಿಯ ಕವಿತ್ವಮಂ ಮುಂಮಾಡಿ ಕರ್ಣಾಟಕ ಭಾಷಾವಾಕ್ಯರಚನೆಯಿಂದೆ ಅಲ್ಲಲ್ಲಿ ಕಥಾಸಂದರ್ಭಮಂ ಆದಿರಾಮಕಥಾವತಾರಮೆಂದು ಬರೆದೆಂ " ಎಂದೂ, ಹೇಳುತ್ತಾರೆ.

ಈತನು ಕನ್ನಡದಲ್ಲಿ 'ರಾಮಚಂದ್ರಚರಿತಪುರಾಣ' ಅಥವಾ 'ಪಂಪರಾಮಾಯಣ' 'ಮಲ್ಲಿನಾಥಪುರಾಣ' ವೆಂಬ ಎರಡು ಗ್ರಂಥಗಳನ್ನು ಬರೆದಿರುತ್ತಾನೆ. ಮತ್ತು ಈ ಕವಿಯು ಜಿನಮುನಿತನಯ, ಜಿನಾಕ್ಷರಮಾಲೆ ಮೊದಲಾದ ಇತರ ಗ್ರಂಥಗಳನ್ನು ರಚಿಸಿದಾನೆಂದು ದೇವಚಂದ್ರನು ರಾಮಕಥಾವತಾರವೆಂಬ ಗ್ರಂಥದಲ್ಲಿ ಹೇಳುತ್ತಾನೆ. ಆದರೆ ಜಿನಮುನಿತನಯವೆಂಬ ಗ್ರಂಥದ ರಚನೆಯನ್ನು ನೋಡಿದರೆ ಈ ಕವಿಯ ಇತರ ಗ್ರಂಥಗಳಿಗೂ ಇದಕ್ಕೂ ಯಾವ ವಿಧವಾದ ಹೋಲಿಕೆಯೂ ಇರುವಂತೆ ತೋರುವದಿಲ್ಲ. ಅಲ್ಲದೆ ಈ ಗ್ರಂಥದಲ್ಲಿ ಬಂದು ಪ್ರತಿಯಲ್ಲಿ 'ಕವಿನೂತನಾಗಚಂದ್ರ' ಎಂದೂ ಬೆಂಗಳೂರಲ್ಲಿ ಅಚ್ಚಾಗಿರುವ ಪುಸ್ತಕದಲ್ಲಿ 'ಕವಿನೂತನಾಗವರ್ಮ' ಎಂದೂ ಇದೆ. ಆದುದರಿಂದ ಇದು ಆಧುನಿಕ

ನಾದ ಯಾವನೋ ಒಬ್ಬ ಕವಿಯಿಂದ ರಚಿತವಾದುದೆಂದು ತೋರುತ್ತದೆ.

ನಾಗಚಂದ್ರನು ರಚಿಸಿದ ಸಂಸ್ಕೃತ ಗ್ರಂಥಗಳೇನೋ ಗೊತ್ತಿಲ್ಲ.

ಈ ಕವಿಯ ರಚನೆಯು ಬಹಳ ಲಲಿತವಾಗಿಯೂ, ಮನೋಹರವಾಗಿಯೂ ಇದೆ. ನಾಗವರ್ಮನೂ, ಕೇಶಿರಾಜನೂ ತಮ್ಮ ಲಕ್ಷಣ ಗ್ರಂಥಗಳಲ್ಲಿ ಇವನ ಪದ್ಯಗಳನ್ನು ಉದಾಹರಿಸಿದಾರೆ. ಈತನು ತನ್ನ ಕವಿತಾಚಾತುರಿಯನ್ನು

ಮಲ್ಲಿನಾಥಪುರಾಣದಲ್ಲಿ :—

ಪ್ರಥಮಾಶ್ವಾಸದ ೩೯, ೪೧, ೪೨, ೪೩, ೪೪ ರಲ್ಲಿಯೂ,

ಚತುರ್ದಶಾಶ್ವಾಸದ ೨೯೪ ರಲ್ಲಿಯೂ,

ಮತ್ತು ಪಂಪರಾಮಾಯಣದಲ್ಲಿ :—

"ಪಿರಿದೆನಿಸಿರ್ದ ರಾಮಕಥೆಯುಂ ಕಿಱಿದಾಗಿರೆ ದೇಸೆ ಮಾರ್ಗಮುಂ |
ಬೆರಡಱೊಳಂ ರಸಂಬಡೆದು ಪಂಡಿತಮಂಡಲಿ ಮೆಚ್ಚೆ ಸೇರ್ವವೆ ‖
ತಿರಲವಿರೋಧಮಾಗೆ ಕೃತಿವೇಱಿದ ಸತ್ಕವಿ ನಾಗಚಂದ್ರನಂ |
ತಿರೆ ಪೆಱರಾರ್ಸರಸ್ವತಿ ಕುಡಲ್ಪಡೆದರ್ ವರಮಂ ಕವೀಶ್ವರರ್ ‖"

"ಕೃತವಿದ್ಯರ್ ಸಮುಚಿತ್ತರಾಗಿ ಪದಪಿಂದಾರಯ್ಯೆ ಕರ್ಣಾಟಸಂ |
ಸ್ಕೃತಕಾವ್ಯಂಗಳೊಳರ್ಥದಿಂ ರಚನೆಯಿಂ ಸೇರ್ದಿಟ್ಟ ವಿದ್ವಚ್ಚಮ ‖
ತ್ಕೃತಿಯುಪ್ಪಂತಿರೆ ನಾಗಚಂದ್ರವಿಬುಧಂ ಪೇಳ್ದಂದದಿಂದಾದ್ಯರ |
ದ್ಯತನರ್ಪೇಳ್ದಭಿರಾಮರಾಮಕಥೆಯೊಂ ಸೈಪಿಂಗಡರ್ಮಾರ್ಗವೇ ‖"

ಎಂದೂ ಹೊಗಳಿಕೊಂಡಿದಾನೆ. ಇವನು ಪೂರ್ವಕವಿಗಳನ್ನೂ ಅವರಿಂದ ರಚಿತವಾದ ಪುರಾಣಗಳನ್ನೂ ಮಲ್ಲಿನಾಥ ಪುರಾಣದ ಪ್ರಥಮಾಶ್ವಾಸದ ೨೪ ನೆಯ ಶ್ಲೋಕದಲ್ಲಿ ಹೊಗಳುತ್ತಾನೆ.

ಈತನ ಗ್ರಂಥಗಳಲ್ಲಿ ಒಂದು ವಿಶೇಷ ಉಂಟು. ಈತನು ಪ್ರಾಯಶಃ ಆಶ್ವಾಸಗಳ ಆದ್ಯಂತ್ಯ ಪದ್ಯಗಳಲ್ಲಿ ಸಂದರ್ಭೋಚಿತವಾಗಿ ಬರುವ ಹೆಸರುಗಳ ಸ್ಥಾನದಲ್ಲಿ ತನ್ನ ಬಿರುದುಗಳಲ್ಲಿ ಒಂದನ್ನು ಹೇಳಿಕೊಳ್ಳುತ್ತಾನೆ.

ಈತನ ಗ್ರಂಥಗಳಿಂದ "ಮೂವತ್ತಱುಂ ಗುಣದಿಂ ..."

(ಪಂ.ರಾ.೧.೧೯, ಮಲ್ಲಿನಾಥ. ೧.೨೧)

“ ಗಣಧರರ್ಗಂ ಶ್ರುತದೊಳ್...” (ಪಂ.ರಾ.೧.೨೬.)

“ ಹರಿಹರ ಹಿರಣ್ಯಗರ್ಭ... ” (ಪಂ.ರಾ.೧.೨೩)

ಎಂಬ ಪದ್ಯಗಳು ಕ್ರಿ.ಶ. ೧೧೪೬ ನೆಯ ಶ್ರವಣಬೆಳಗೊಳದ ೫೦ ನೆಯ ಶಾಸನದಲ್ಲಿಯೂ,

“ ಅವೊಂದಾದಿಕಥಾತ್ರಯಪ್ರವೇಣದೊಳ್ ವಿದ್ವಜ್ಜನಂ ಮೆಚ್ಚೆ ... ”
(ಪಂ.ರಾ. ೧.೨೪)

“ ಶ್ರುತಕೀರ್ತಿ ತ್ರೈವಿದ್ಯ । ವ್ರತಿ ... ” (ಪಂ.ರಾ.ಆ.೧.೨೫)

ಎಂಬ ಪದ್ಯಗಳು ಕ್ರಿ.ಶ. ೧೧೬೩ ನ ಶ್ರವಣ. ೪೦ ನೆಯ ಶಾಸನದಲ್ಲಿಯೂ,

“ ಪ್ರಚುರಕಲಾನ್ವಿತರಕುಟಿಲರ್ ... ”
(ಪಂ.ರಾ.೧ ೧೪, ಮಲ್ಲಿನಾಥ. ೧.೨೦)

ಎಂಬ ಪದ್ಯವು ಶ್ರವಣ. ೬೯ ನೆಯ ಶಾಸನದಲ್ಲಿಯೂ ಉದ್ಧರಿಸಲ್ಪಟ್ಟವೆ. ಮತ್ತು ಪಂಪರಾಮಾಯಣದ —

“ ಮುನಿನಾಥಂ ದಶಧರ್ಮದಾರಿ ದೃಢಷಟ್ತ್ರಿಂಶದ್ಗುಣಂ ... ” (ಆ.೧.೨೦)

ಎಂಬ ಪದ್ಯವು ಕ್ರಿ.ಶ. ೧೧೧೫ ರಲ್ಲಿ ಬರೆದ ಶ್ರವಣ. ೪೭ ನೆಯ ಶಾಸನದಲ್ಲಿ ದೊರಕುವದರಿಂದ ಈತನ ಗ್ರಂಥಗಳು ಇದಕ್ಕೆ ಪೂರ್ವದಲ್ಲಿಯೇ ಪ್ರಚಾರದಲ್ಲಿದ್ದವೆಂಬುದರಲ್ಲಿ ಏನೂ ಸಂಶಯವಿಲ್ಲ.



## — ಮಲ್ಲಿನಾಥ ಪುರಾಣ —

———o———

ಇದು ೧೯ ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತವಾಗಿದೆ. ಇದರಲ್ಲಿ ೧೪ ಆಶ್ವಾಸಗಳಿವೆ. ಈ ಕಾವ್ಯದಲ್ಲಿ ಕವಿಯು ತನ್ನ ವರ್ಣನಾಶಕ್ತಿಯನ್ನು ಚೆನ್ನಾಗಿ ತೋರಿಸಿದಾನೆ. ಇದಕ್ಕಿಂತ ಉತ್ಕೃಷ್ಟವಾದ ಕಾವ್ಯವು ಯಾವದೂ ಇಲ್ಲವೆಂಬ ಅಭಿಪ್ರಾಯವನ್ನು ಚತುರ್ದಶಾಶ್ವಾಸದ ೧೯೫ ನೆಯ ಪದ್ಯದಲ್ಲಿ ಹೇಳಿಕೊಂಡಿದಾನೆ. ಗ್ರಂಥಾವತಾರದಲ್ಲಿ ಮಲ್ಲಿನಾಥನನ್ನು ಸ್ತುತಿಸಿದಾನೆ. ಬಳಿಕ ಸಿದ್ಧರನ್ನೂ, ಆಚಾರ್ಯರನ್ನೂ, ಉಪಾಧ್ಯಾಯರನ್ನೂ, ಸಾಧುಗಳನ್ನೂ, ರತ್ನತ್ರಯವನ್ನೂ, ಸರಸ್ವತಿಯನ್ನೂ, ಕುಬೇರಯಕ್ಷನನ್ನೂ, ಅಪರಾಜಿತಾದೇವಿಯನ್ನೂ ಸ್ತುತಿಸಿದಾನೆ. ಅನಂತರ ಅನುಬದ್ಧಕೇವಳಿಗಳೆಂಬ ಗೌತಮ ಸುಧರ್ಮ ಜಂಬೂಗಳನ್ನು, ಶ್ರುತಕೇವಲಿಗಳೆಂಬ ವಿಷ್ಣುನಂದ್ಯಪರಾಜಿತ ಗೋವರ್ಧನ ಭದ್ರಬಾಹುಗಳನ್ನೂ, ದಶಪೂರ್ವಧರರನ್ನೂ, ಏಕಾದಶಾಂಗಧಾರಿಗಳನ್ನೂ, ಭೂತಬಲಿ ಪುಷ್ಪದಂತ ಜಿನಸೇನ ವೀರಸೇನ ಸಮಂತಭದ್ರ ಕವಿಪರಮೇಷ್ಠಿ ಪೂಜ್ಯಪಾದರನ್ನೂ, ಕುಂದಕುಂದಾಕಲಂಕ ವರ್ಧಮಾನಭಟ್ಟಾರಕರನ್ನೂ, ತನ್ನ ಗುರು ಬಾಲಚಂದ್ರನನ್ನೂ, ತತ್ಸಧರ್ಮ ಮೇಘಚಂದ್ರತ್ರೈವಿದ್ಯನನ್ನೂ, ಕ್ರಮವಾಗಿ ಪಂಪರಾಮಾಯಣದಲ್ಲಿ ಹೇಳಿರುವ ಆನುಪೂರ್ವಿಯಲ್ಲಿಯೇ ಸ್ತುತಿಸಿದಾನೆ. ಬಳಿಕ ಪೂರ್ವಕವಿಗಳನ್ನು ಸ್ತುತಿಸಿದಾನೆ. ತದನಂತರ ಪಂಪ ಪೊನ್ನ ರನ್ನರನ್ನೂ ಇವರ ಪುರಾಣಗಳನ್ನೂ ಹೊಗಳಿ,

" ಭರತಮಹೀಶ್ವರಂಗೆ ಮಗಧೇಶ್ವರಮಂಡಲಿಕಂಗೆ ತಾರಭೂ ।
ಧರವಿಪುಲಾದ್ರಿಯೊಳ್ ವೃಷಭಸೇನಗಣಾಗ್ರಣಿಗೌತಮೋತ್ತಮಂ ॥
ಪುರುಜಿನವರ್ಧಮಾನಗುರುಸನ್ನಿಧಿಯೊಳ್ ತಿಳಿವಂತು ಪೇೞ್ದುದಂ ।
ವಿರಚಿಸುವೆಂ ಮನಂ ಬಯಸೆ ಮಲ್ಲಿಜಿನೇಂದ್ರ ಮಹಾಪ್ರಬಂಧಮಂ ॥ "

ಎಂದು ಹೇಳಿ, ಅನಂತರ

" ಸಕಲಜ್ಞಪ್ರತಿಪಾದ್ಯಮಪ್ಪ ಭುವನಂ ದೇಶಂ ಪುರಂ ರಾಜವೃ ।
ತ್ತಕಮುರ್ಕದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾ ॥

ಣಕಥಾಂಗಂಗಳಿವೆಣ್ಟಿಸಿಕ್ಕುಂ... ।”

ಎಂದು ಹೇಳಿ ಕಥೆಯನ್ನಾರಂಭಿಸಿದಾನೆ.

ಈ ಗ್ರಂಥದಲ್ಲಿ ಮೇಘಚಂದ್ರನನ್ನು ಸ್ತುತಿಸಿರುವ ಪದ್ಯವೂ, ಶುಭಕೀರ್ತಿ ವಾಸುಪೂಜ್ಯ ಶ್ರುತಕೀರ್ತಿ ವೀರನಂದಿಗಳನ್ನು ಸ್ತುತಿಸಿರುವ ಪದ್ಯಗಳೂ ಇಲ್ಲದೇ ಇರುವುದರಿಂದ ಇದು ರಾಮಚಂದ್ರಚರಿತಪುರಾಣಕ್ಕಿಂತಲೂ ಹಿಂದೆಯೇ ರಚಿತವಾಗಿರಬಹುದೆಂದು ಊಹಿಸಬಹುದು; ಪರಿಚ್ಛೇದಿಸಿ ಹೇಳುವುದಕ್ಕಾಗುವುದಿಲ್ಲ. ಇದರಲ್ಲಿರುವ ಅನೇಕ ಪದ್ಯಗಳು ಪಂಪರಾಮಾಯಣದಲ್ಲಿಯೂ ಇವೆ.

ಈ ಗ್ರಂಥದ ಕಥಾಸಾರವು :—

“ ಜಂಬೂದ್ವೀಪದ ಪೂರ್ವವಿದೇಹದ ಕಚ್ಛಾವತೀವಿಷಯದ ವೀತಶೋಕಪುರಮನಾಳ್ವ ವೈಶ್ರವಣನೆಂಬರಸಂ ಒಂದು ದಿವಸಂ ಜಲದ ಕಾಲದೊಳ್ ರಮಣೀಯಪ್ರದೇಶಂಗಳಂ ನೋಡಲೆಂದು ಪೋಗಿ ಬರುತ್ತುಂ ಪೆರ್ಗಾಳಿಯ ಕೋಳೊಳ್ ಕೆಡೆದಿರ್ದ ವಟವೃಕ್ಷಮಂ ಕಂಡು ನಿರ್ವೇಗದಿಂ ಮಗಂಗೆ ರಾಜ್ಯಮಂ ಕೊಟ್ಟು ಶ್ರೀನಾಗಗಿರಿಯೊಳ್ ಶ್ರೀನಾಗಯತಿಗಳ ಪಕ್ಕದೆ ಧರ್ಮಮಂ ಕೇಳ್ದು ಸಮ್ಯಕ್ತ್ವಪೂರ್ವಕಂ ಪಲಂಬರುಂ ಬೆರಸು ತಪಮಂ ಕೈಕೊಂಡು ಏಕಾದಶಾಂಗಧರಂ ಭಾವಿತಷೋಡಶಕಾರಣಂ ತೀರ್ಥಕರಪುಣ್ಯನಾರಾಧನಾವಿಧಿಯಿಂ ಕಾಲಾಂತರದೊಳನುತ್ತರೆಗಳೊಳಪರಾಜಿತವಿಮಾನದೊಳಹಮಿಂದ್ರನಾಗಿ ತ್ರಯಸ್ತ್ರಿಂಶತ್ಸಾಗರೋಪಮಾಯುಷ್ಯನುಮೇಕರತ್ನಿಪ್ರಮಾಣೋತ್ಸೇಧನುಮೆನಿಸಿ ಸುಖಮಿರ್ಪನಂ;

“ ಇತ್ತ ಜಂಬೂದ್ವೀಪದ ಭರತಕ್ಷೇತ್ರದಂಗವಿಷಯದ ಮಿಥಿಲಾಪುರಮನಾಳ್ವ ಇಕ್ಷ್ವಾಕುವಂಶದ ಕಾಶ್ಯಪಗೋತ್ರದ ಕುಂಭಮಹಾರಾಜನರಸಿ ಪ್ರಜಾವತೀದೇವಿ ಚೈತ್ರಶುದ್ಧ ಪಾಡಿವದ ಬೆಳಗಪ್ಪ ಜಾವದೊಳ್ ಅಶ್ವಿನೀನಕ್ಷತ್ರಮಾಗೆ ಷೋಡಶಸ್ವಪ್ನಾನಂತರಂ ನಿಜವದನಮಂ ಗಜಂ ಪುಗುವುದಂ ಕಂಡವಧಿಜ್ಞಾನಿಯಪ್ಪ ನಿಜಪತಿಯಿಂ ತತ್ಫಲಮನಱಿದು ಸುಖಮಿರ್ಪನಂ;

“ ಮುಂ ಪೇಳ್ದಹಮಿಂದ್ರಂ ಸ್ವರ್ಗಾವತರಣಪೂಜಾಪೂರ್ವಕಂ ಮಾಡೆ ದೇವಿಯ ಗರ್ಭಕ್ಕವತರಿಸಿ ಮುನ್ನಮರಭಟ್ಟಾರಕರ ತೀರ್ಥಸಂತಾನಕಾಲಂ ಸು

ಸ್ರಕೋಟಿವರ್ಷಪ್ರಮಾಣಂ ವರ್ತಿಸುವುದಾಕಾಲದೊಳ್ ಮಾರ್ಗಶಿರಶುದ್ಧೈಕಾದಶಿಯೊಳಶ್ವಿನೀನಕ್ಷತ್ರದೊಳ್ ತ್ರಿಜ್ಞಾನಧರಂ ಪುಟ್ಟೆ; ಸೌಧರ್ಮೇಂದ್ರಂ ಜನ್ಮಾಭಿಷೇಕಕಲ್ಯಾಣಮಂ ಮಾಡಿ ಕಷಾಯೇಂದ್ರಿಯಪರೀಷಹಾದಿಗಳಂ ಗೆಲ್ವುದಱಿಂ ಮಲ್ಲಿನಾಥರೆಂದು ಪೆಸರನಿಟ್ಟು ಪೋದಂ

“ ಇತ್ತ ಪಂಚಾಶತ್ಸಹಸ್ರವರ್ಷಪರಮಾಯುಷ್ಯನುಮಿರ್ಪತ್ತೈದು ಬಿಲ್ ನಿಡಿಯನುಂ ಕನಕವರ್ಣನುಮಾಗಿ ಬಳೆದು ನೂಱು ವರ್ಷಂ ಕುಮಾರಕಾಲಂ ಸಲೆ ನಿಜವಿವಾಹಸಮಯದೊಳ್ ಮಿಳಿರ್ವ ಪತಾಕೆಗಳಿಂ ನೆಗಲ್ವ ಶಂಖಪಟಹಧ್ವನಿಗಳೆಸೆವ ನಗರಶೋಭೆಯುಂ ಕಂಡು ತನ್ನ ಪುಟ್ಟಿ ಬಂದ ಅಪರಾಜಿತವಿಮಾನಮಂ ನೆನೆದು ನಿಜಭವೋಪಯೋಗಲಬ್ಧನಿರ್ವೇಗಂ ಲೋಕಾಂತಿಕದೇವಂ ಪ್ರತಿಬೋಧಿಸೆ, ಕುಮಾರಕಾಲದೊಳ್ ಪರಿನಿಷ್ಕ್ರಮಣಕಲ್ಯಾಣಪೂರ್ವಕಂ ಜಯಂತಿಯೆಂಬ ಸಿವಿಗೆಯೊಳ್ ಶ್ವೇತವನಕ್ಕೆ ಪೋಗಿ ಷಷ್ಠೋಪವಾಸದಿಂ ಮಾರ್ಗಶಿರ ಶುದ್ಧಯೇಕಾದಶಿಯಪರಾಹ್ಣದೊಳ್ ಮುನ್ನೂರ್ವರರಸುಗಳ್ವೆರಸು ಸಂಯಮಮಂ ಕೈಕೊಂಡು ಚತುರ್ಥಜ್ಞಾನಧರಂ ಪಾರಣಾದಿನದೊಳ್ ಮಿಥಿಳಾಪುರಕ್ಕೆ ಕನಕವರ್ಣನಪ್ಪ ನಂದಿಷೇಣನರಪತಿಯ ಮನೆಯೊಳ್ ನಿಲ್ವು, ಪಂಚಾಶ್ಚರ್ಯಂ ನೆಗೞೆ, ಛದ್ಮಸ್ಥಕಾಲಂ ಮೂಱು ದಿವಸಂ ಪೋಗೆ, ಮುಂ ಪೇಳ್ದ ದೀಕ್ಷಾವನದೊಳ್ ಅಶೋಕವೃಕ್ಷದಡಿಯೊಳ್ ಷಷ್ಠೋಪವಾಸದಿಂ ಮಾರ್ಗಶಿರಶುದ್ಧೈಕಾದಶಿಯಪರಾಹ್ಣದೊಳಶ್ವಿನೀನಕ್ಷತ್ರದೊಳ್ ಕೇವಲಜ್ಞಾನೋತ್ಪತ್ತಿಯಾಗೆ ಸೌಧರ್ಮೇಂದ್ರಂ ಕೃತಕಲ್ಯಾಣನನ್ವರ್ಥಸಹಸ್ರಾಷ್ಟನಾಮಧರಂ ವಿಶಾಖಾರ್ಯರ್ ಮೊದಲಾಗಿರ್ಪತ್ತೆಣ್ಬರ್ಗಣಧರರುಂ, ಅಯ್ನೂರಯ್ವದಿಂಬರ್ ಪೂರ್ವಧರರುಂ, ಇರ್ಪತ್ತೊಂಭೈಸಾಸಿರ್ವರ್ ಶಿಕ್ಷಕರುಂ, ಇಚ್ಛಾಸಿರದಿನ್ನೂರ್ವರವಧಿಜ್ಞಾನಿಗಳುಂ, ಇಚ್ಛಾಸಿರದೊಂಬಯ್ನೂರ್ವರ್ವಿಕ್ರಿಯರ್ಧಿಪ್ರಾಪ್ತರುಂ, ಸಾಸಿರದೇೞ್ನೂಱಯ್ವದಿಂಬರ್ ಮನಃಪರ್ಯಯಜ್ಞಾನಿಗಳುಂ, ಸಾಸಿರದ ನಾನೂರ್ವರ್ ವಾದಿಗಳುಂ, ಬಂಧುಷೇಣಾರ್ಯಿಕೆಯಮೊದಲಾಗಯ್ವತ್ತಯ್ಸಾಸಿರ್ವರಜ್ಜಿಯರುಂ, ಒಂದು ಲಕ್ಕೆ ಶ್ರಾವಕರುಂ, ಮೂಱು ಲಕ್ಕೆ ಶ್ರಾವಕಿಯರುಂ, ಅಸಂಖ್ಯಾತ ದೇವರುಂ ದೇವಿಯರುಂ, ಅಸಂಖ್ಯಾತತಿರ್ಯಗ್ಜಾತಿಗಳುಂ, ಕುಬೇರಯಕ್ಷನುಂ, ಅಪರಾ

ಜಿತಯಕ್ಷಿಯುಂ ಬೆರಸು ಅಯ್ವತ್ತು ನಾಲ್ಸಾಸಿರ್ವರ್ ಮುನಿಗಳ್ವೆರಸು ಪ್ರತಿಮಾಯೋಗಧರಂ ಫಾಲ್ಗುಣಶುದ್ಧ ಪಂಚಮಿಯ ಪೂರ್ವರಾತ್ರಿಯೊಳ್ ಭರಣೀನಕ್ಷತ್ರದೊಳ್ ಮಲ್ಲಿನಾಥಸ್ವಾಮಿ ಮುಕ್ತಿಗೆ ಸಂದರ್.

" ಸೌಧರ್ಮೇಂದ್ರನುಂ ಪರಿನಿರ್ವಾಣಮಹಾಕಲ್ಯಾಣಮಂ ಮುನ್ನಾದಿದೇವರ್ಗೆ ಮಾಡಿದಂತೆ ಮಾಡಿ ಪೋದಂ." ಎಂದು

ಶ್ರೀಮಚ್ಚಾವುಂಡರಾಯವಿರಚಿತಮಪ್ಪ ತ್ರಿಷಷ್ಟಿಲಕ್ಷಣಮಹಾಪುರುಷ ಪುರಾಣದೊಳ್ ಮಲ್ಲಿನಾಥ ಪುರಾಣಂ.

ನಮಗೆ ದೊರೆತ ಪ್ರತಿಗಳೆರಡು. ಅವುಗಳಲ್ಲಿ ಒಂದು ಶ್ರವಣಬೆಳಗೊಳದ ಶ್ರೀಯವರ ಮಠದ್ದು. ಇದೇ ಕ॥ ಎಂಬ ಪ್ರತಿ. ಇದು ಬಹಳ ಪುರಾತನ ಪ್ರತಿ. ಮತ್ತೊಂದು ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರೇರಿಯ ಪುಸ್ತಕ. ಇದೇ ಗ॥ ಎಂಬ ಪುಸ್ತಕ. ಇದರ ಕೊನೆಯಲ್ಲಿ ಶಕಾಬ್ದ ೧೬೩೯ ರಲ್ಲಿ ಬರೆದುದೆಂದು ಇದೆ. ಈ ಪ್ರತಿಗಳನ್ನು ದಯವಿಟ್ಟು ಕೊಟ್ಟುದುದಕಾಗಿ ಓರಿಯಂಟಲ್ ಲೈಬ್ರೇರಿಕ್ಯೂರೆಟರಾದ ಮ॥ ರಾ॥ ಮಹದೇವಶಾಸ್ತ್ರಿಗಳವರಿಗೆ ಬಹಳ ಕೃತಜ್ಞರಾಗಿ ಇರುತ್ತೇವೆ.



## ಅಧ್ಯಾಯಾನುಕ್ರಮಣಿಕೆ.

---

## § ಪ್ರಥಮ ದ್ವಿತೀಯಾಶ್ವಾಸಗಳ ಪಾಠಾಂತರಗಳು.



| ಪುಟ. | ಪಙ್ಕ್ತಿ. | |
|---|---|---|
| ೧. | ೧೧ | ರತ್ನಂಗಳಿಂ. |
| ೩. | ೧೮ | ಪತಿಚಲನಂ |
| ೫. | ೩ | ಸಂಕಲ್ಪವಿನಿತೆ. |
| ೬. | ೧ | ರದೆಂತೊ. |
| | ೭ | ತ್ರೋಟಿ |
| | ೮ | ಪಿಂಗೆ |
| ೭. | ೧೮ | ಆರಯ್ಯದೆ ರಸಭಾವವು. |
| ೮. | ೨ | ನೀರಸಮೆನೆ |
| | ೧೦ | ಚೋಹಂ |
| | ೧೧ | ನುಡಿವುದೆ |
| ೯. | ೧೨ | ವಿಷಯಂ ಕಠಿನಹೃದ. |
| | ೧೭ | ಗಾಂಪುವೇಡೀಗಳುಂ |
| ೧೦. | ೧ | ಜನಕ್ಕದೆ. |
| | ೪ | ಮೆಱೆದುದುಕಾ |
| | ೧೫ | ತಿರಿಪಿದವೊಲ್ |
| ೧೧. | ೭ | ಮಹಾಮಹಾಕವಿಗಳೊಳೊರ್ವರ್ |
| | ೯ | ವಂಶವೀರ್ಯಂ |
| ೧೨. | ೯ | ಸತ್ಕೃತಿಬಂಧನದಂತೆ |
| | ೧೭ | ಗಣಪ್ರಭು |
| | ೧೯ | ಮನಂಬಯಸಿ |
| ೧೩. | ೬ | ಜ್ಜಡುಗದ |
| | ೭ | ವೃದ್ಧಿಗೆಯ್ವವೋಲ್ । ಪೞುಡಿಗಿದುದು (ಮುಳುಗಿದುದು) |
| ೧೪. | ೪ | ರಾಶಿತೀರವುಂ. |
| ೧೫. | ೬ | ವೊಲಂಮಜ್ಜನ. |
| ೧೬. | ೩ | ಮೇಂತಾಂ । ರಾಜಿಸಿದುದೊ. |
| | ೬ | ದಲ್ಲಿಯು. |
| | ೭ | ಪುರಸ್ತ್ರೀಯರುನ್ನ |
| | ೯ | ತಿದುರ್ದಂಗೋದ್ಭವ |
| | ೧೭ | ಪೂರ್ವಕೋಟಿ |
| ೧೭. | ೨ | ಹೀನಾಧಿಕಮೆನಿಸಲು |
| | ೫ | ಮಾಯ್ವಾವಿದೇಹಂ |

---

§ ಎರಡು ಆಶ್ವಾಸಗಳು ಅಚ್ಚಾದಮೇಲೆ ಕ॥ ಪುಸ್ತಕವು ದೊರೆತುದ ರಿಂದ ಅದರ ಪಾಠಗಳನ್ನು ಕೊಡುವದಕ್ಕೆ ಅವಕಾಶವಿರಲಿಲ್ಲ. ಅವುಗಳನ್ನು ಇಲ್ಲಿ ಕೊಟ್ಟಿದೇವೆ.

| | | | | |
|---|---|---|---|---|
| ೨೦. | ೧ | ವಿಷಯರಾಗದ ಸೊಂಪಿನಬಳ್ಳಿವಳ್ಳಿಯುಂ | | |
| | ೫ | ನೆನಿಸಿಸನಾಥ | ೧೧ | ವಿಷಯವೆನಿಪ |
| | ೧೬ | ಪಳತ್ರಾರೋಪಣ | | |
| ೨೧. | ೩ | ತಳೆದು | | |
| | ೫ | ಪಾಂಥರ್ | ೬. | ಲಾವಣ್ಯತೋಯಂಗಳಂ |
| ೨೨. | ೪ | ಪರಿದು | | |
| | ೬ | ರತಿಯುಧಾರಾಗೃಹ | ೧೩. | ಕೆಂಕೆಲ್ಲೀಕುಂಜಂ |
| | ೨೭ | ಬಳೆಯಿಸಿ | | |
| ೨೩. | ೨ | ಕೊರ್ಜಿಸಿ | | |
| | ೫ | ರಸಂಗಳೊರ್ಗೆ | ೩ | ರಾಗವೊಡ್ಡಿಸೆ |
| ೨೪. | ೧೯ | ನೆಡಿಕಿಲಟ್ಟ. | | |
| ೨೫. | ೩ | ಸವಿದಂತೆ ತಾವೆ | | |
| | ೧೧ | ನನೆವಿಲ್ಲಾಗರ | ೧೩ | ಮೊದ್ರಿಸೆ |
| ೨೬. | ೧೬ | ಸಮಾಧಾನಸ್ಥಾನ | | |
| ೨೭. | ೨ | ವಿಭವಂ ಪೆಸ | | |
| | ೬ | ಕಾವಂ ದೇವವ್ರತ, | | ದೇವಂ ದೇವವ್ರತ. ಗ॥ |
| ೩೨. | ೬ | ಚಾಗದಪಟಿಯಿಂಗೆ | | |
| ೩೩. | ೩ | ಮನುಜನಿರ್ಮಿತಮೆಲ್ಲಿದು | | |

# ಕರ್ಣಾಟಕ ಕಾವ್ಯಮಂಜರಿ.

ಅಭಿನವಪಂಪ ವಿರಚಿತಮಪ್ಪ

## ಮಲ್ಲಿನಾಥಪುರಾಣಂ.

ಶ್ರೀಪಾದಂ ಬಾಲಚಂದ್ರೋಜ್ಜ್ವಲತರಸುಮನೋವರ್ಷದಿಂ ಪಾದಪೀಠಂ । ಭೂಪಾಲೋತ್ತಂಸತಾರಾತರಳಮಣಿಗಳಿಂದುತ್ತಮಾಂಗಂ ಕರಜ್ಯೋಜ್ಜ್ವಲೇ॥ತಾನ್ನೊಪ್ಪಾಂಡುಚ್ಛತ್ರರತ್ನಂಗಳನಱಿಪೆ ನಿಜೈಶ್ವರ್ಯಮಂ ದಿವ್ಯಭಾಷಾ । ವ್ಯಾಪಾರೋದಾರನಾದಂ ಕುಡುಗೆಮಗೆ ಸುಖಾವಾಪ್ತಿಯಂ ಮಲ್ಲಿನಾಥಂ ॥೧

ಅವಲೋಹಂ ಪಿಂಗೆ ಹೇಮಂ ಸಹಜಗುಣದಿನಿರ್ಪಂತೆ ಕರ್ಮಂಗಳೆಂಟುಂ । ತವೆ ನಿಂದಾತ್ಮಸ್ವರೂಪಂ ತಮಗೆ ತನುವೆನಲ್ತಮ್ಮೊಳೆಣ್ಟುಂ ಗುಣಂ ತೋ॥ಱುವಿನಂ ಲೋಕಾಗ್ರದೊಳ್ನಿಶ್ಚಲಮಿರೆ ಕೃತಕೃತ್ಯಾತ್ಮರಾದರ್ ತ್ರಿಲೋಕ । ಸ್ತವನೀಯರ್ ಸಿದ್ಧರಾತ್ಯಂತಿಕಸುಖಪದವೀಸಿದ್ಧಿಯಂ ಮಾಳ್ಕೆ ನಮ್ಮೊಳ್ ॥೨

ಆಚಾರಂ ಗುಣಮಾಲೆ ತಮ್ಮೊಳಮೃತಾಂಭೋರಾಶಿ ರತ್ನಂಗಳಂ ।
ವೀಚೀಮಾಲೆಯನಪ್ಪುಕೆಯ್ವ ತೆಱದಿಂ ಚೆಲ್ವಪ್ಪಿನಂ ಶಿಷ್ಯಶಿ ॥

---

೨. ತಮೆ ಧಾ. ತಮು ಕ್ಷಯೇ.

ಕ್ಷಾಚಾತುರ್ಯಮನಪ್ಪುಕೆಯ್ದು ತಪದಿಂ ಸ್ವಾಧ್ಯಾಯದಿಂ ವರ್ಯರ |
ಪ್ಪಾಚಾರ್ಯರ್ ನಮಗೀವರಕ್ಕೆ ದಯೆಯಿಂದಾಚಾರ್ಯಸಂಪತ್ತಿಯಂ ॥೩

ಉದ್ದ್ಯೋತಂ ಶ್ವೇತಕೃಷ್ಣಂಗಳನಱಿಪುವವೊಲ್ಪುಣ್ಯಪಾಪಂಗಳಂ ಸ್ಯಾದ್ವಿದ್ಯಾವಾದಂಗಳಿಂ ಭವ್ಯರ ಬಗೆವುಗುವನ್ನಂ ದಯಾಮೂಲವಂ ಸಾವದ್ಯವ್ಯಾಪಾರಮಂ ಬೇರ್ಪಡೆ ತಿಳಿಪುವುಪಾಧ್ಯಾಯರಾಧೇಯರೆಮ್ಮೊಳ್ | ಹೃದ್ಯರ್ಮಾಱ್ಕೊಪ್ಪುವಕೊಳ್ರೀಧಿತಮೆನಿಸುವುಪಾದೇಯಹೇಯಂಗಳೊಂದಂ ॥೪

ಕರಣಂಗಳ್ವಿಷಯಂಗಳತ್ತಱಿಗವೀರಾಱುಂ ತಪೋಮಾರ್ಗದಿಂ |
ಬಿರಿಬಿಂಬಿತ್ತುದು ಶೀಲಮಾಲೆ ಪದುಳಂ ನಿಂದತ್ತು ಮೆಯ್ವೆರ್ಚಿ ಕಾಂ |
ತರಸಂ ಕಾಲ್ಪುರಮಾಯ್ತು ನಲ್ದಯೆಯ ನೇತ್ರೋನ್ಮೀಲನಂಗೆಯ್ದ ಸ |
ಚ್ಚರಿತರ್ ಸಾಧುಗಳೆಮ್ಮನುದ್ಧರಿಸುಗೀಸುಪಾಪವಾರಾಶಿಯಿಂ ॥೫

ಅನತಂಸಂ ಮೋಕ್ಷಲಕ್ಷ್ಮೀಯುವತಿಯನೊಲಿಸಲ್ ಸಾಲ್ದವೇ? ದಿವ್ಯಭಾಷಾರ್ಣವಗರ್ಭಾವಾಸದೊಳ್ಪುಟ್ಟಿದುವೆ? ಭವವಿಷಾವೇಶವಿಧ್ವಂಸನಂಗೆಯ್ದವೆ? ಮೋಹಧ್ವಾಂತಮಂ ತೂಳ್ದುವೆ? ಬಗೆವೊಡೇಬಾತೆ ಪಾಷಾಣರೂಪಂ | ನವರತ್ನಂ ಮನ್ಮನೋಮುದ್ರಿಕೆಯೊಳವಿಚಲಂ ನಿಲ್ಕೆ ರತ್ನತ್ರಯಂಗಳ್ ॥೬

---

೫. ಪದುಳಂ-ಕ್ಷೇಮ. ಕಾಲ್ಪುರ-ಪ್ರವಾಹ.

೬. ತೂಳ್ಪು-ಧಾ. ತೂಳ್ದು ಅಪಸರ್ಗಣೇ. ಏಭಾತೆ- ಏಬಾಳ್ತೆ, ಏನು ಪ್ರಯೋಜನ? ನವರತ್ನಗಳು ಸಾಮಾನ್ಯಸ್ತ್ರೀಯರನ್ನು ಮೋಹಪಡಿಸುತ್ತವೆ, ಕೇವಲ ಕ್ಷಾರಸಮುದ್ರದಲ್ಲಿ ಹುಟ್ಟುತ್ತವೆ, ಸರ್ಪಾದಿಗಳ ವಿಷವನ್ನು ಅಪಹರಿಸುತ್ತವೆ, ಗೃಹದ ಅಂಧಕಾರವನ್ನು ಹೋಗಲಾಡಿಸುತ್ತವೆ, ಅವು ಕಲ್ಲುಗಳು, ಚಿನ್ನದ ಉಂಗರದಲ್ಲಿಡತಕ್ಕವು; ಅವು ರತ್ನತ್ರಯಕ್ಕೆ ಸಮನಾಗುವವೆ? ರತ್ನತ್ರಯಂ- ರತ್ನಾಕರಾಧೀಶ್ವರಶತಕದ ೧, ೨ ಶ್ಲೋಕಗಳನ್ನು ನೋಡಿ.

ಪದವಿನ್ಯಾಸವಿಲಾಸಮುಂಗವಿಭವಂ ಚೆಲ್ವಾದ ದೃಷ್ಟಿಪ್ರಸಾ |
ದಮೊಳೊಂದಾದ ನಯಂ ಮೃದೂಕ್ತಿ ವನಿತಾಸಾಮಾನ್ಯವೆತ್ತಿಂಬಕುಂ||
ದವ ವರ್ಣಂ ನಿಜವೆಂಬ ರೂಪಿನೆಸೆಯುಂ ನಾನಾಭಂಗಿಯುಂ ಬೇಱೆ ತಾ |
ಳ್ದದ ವಾಗ್ದೇವತೆ ಮಾಳ್ಕೆ ಮತ್ಕೃತಿಗೆ ಲೋಕಾಶ್ಚರ್ಯಚಾತುರ್ಯಮಂ||

ವಾರಣವಾಹನಂ ಪೃಥುತರಾಷ್ಟಭುಜಂ ವಿಜಯಾಂಗನಾಗೃಹ |
ದ್ವಾರದನೇಕಶಾಖೆಯೆನೆ ವಕ್ತ್ರಚತುಷ್ಟಯವೊಂದೆ ನಾಳದೊಳ್ ||
ನೀರಜಮುಳ್ಳಲರ್ವೆನೆ ರಂಜಿಸುವಂ ಸುರಚಾಪರುಙ್ಮನೋ |
ಹಾರಿ ಕುಬೇರಯಕ್ಷನೊಸೆದೀಕೃತಿಗೀಗೆ ಗುಣಪ್ರತಿಷ್ಠೆಯಂ ||೮

ವರದಫಲಾಸಿಖೇಟಕಚತುರ್ಭುಜೆ ತನ್ನ ಶರೀರಕಾಂತಿಯಿಂ |
ಮರಕತರತ್ನದಿಂ ಸಮೆದವೊಲ್ಶರಭಂ ನಿಜವಾಹನಂ ಮನೋ ||
ಹರಮೆನೆ ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ದ ಭಾ||
ಸುರತರತೀವ್ರತೇಜದಪರಾಜಿತೆ ಮಾಳ್ಕೆ ಮತಿಪ್ರಕಾಶಮಂ ||೯

ಅನಘರನುಬದ್ಧಕೇವಲಿ |
ಯೆನಿಸಿದ ಗೌತಮಸುಧರ್ಮಜಂಬೂಗಣಭೃ ||
ದ್ವಿನುತರೆಮಗೀಗೆ ಶಾಶ್ವತ |
ಧನಮೆನಿಸಿದ ವಿಶ್ರುತಶ್ರುತಾರಾಧನಮಂ ||೧೦

ಶ್ರುತಕೇವಲಿವಿಷ್ಣುವ್ರತಿ |
ಯತಿಚೆಲನಂ ನಂದಿಪರಮಮುನಿಪದಮಪರಾ ||
ಜಿತವಾದಂ ಗೋವರ್ಧನ |
ಯತಿಕ್ರಮಂ ಭದ್ರಬಾಹುಚರಣಂ ಶರಣಂ ||೧೧

ದಶಪೂರ್ವಧರರುಮೇಕಾ |
ದಶಾಂಗಧಾರಿಗಳುಮೆನಿಪ ಮುನಿಪದನಿಚಯಂ ||

ಪ್ತಿ ಶರಚ್ಚಂದ್ರಿಕೆ ದರ್ಶನ।
ವಿಶುದ್ಧಿಯುಂ ಮಾಡುಗಘತಮೋವಿಘಟನಮುಂ ॥೧೨
ಭೂತಬಲಿಪುಷ್ಪದಂತ।
ಖ್ಯಾತರ ಜಿನಸೇನವೀರಸೇನಮುನೀಂದ್ರ॥
ಖ್ಯಾತರ ಸಮಂತಭದ್ರ।
ಖ್ಯಾತರ ಪದಪಾಂಸು ಕಿಡಿಸುಗಘಪಾಂಸುಗಳಂ ॥೧೩
ಕವಿಪರಮೇಷ್ಠಿಗಳ ಗುಣ।
ಸ್ತವನಂಗಳ್ಪೂಜ್ಯಪಾದಯತಿಪತಿಯ ಗುಣ॥
ಸ್ತವನಂಗಳೊರ್ಮೆ ನಾಲಗೆ।
ಗೆ ವಂದ ಮಾನವನ ವಾಙ್ಮಲಂ ನಿಂದಪುದೇ ? ॥೧೪
ಚತುರಂಗುಳ ಚಾರಣಋ।
ದ್ಧಿ ತಮಗೆ ಸಮನಿಸಿದುದೆನಿಪ ತಪದುನ್ನತಿಯಿಂ॥
ಶ್ರುತದಿಂ ಭೂಮಂಡಲವಿ।
ಶ್ರುತರೆನಿಸಿದರಲ್ತೆ ಕುಂಡಕುಂದಾಚಾರ್ಯರ್ ॥೧೫
ಅಕಳಂಕಚಂದ್ರವಾಕ್ಚಂ।
ದ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯ॥
ಪ್ರಕರಚಕೋರಂ ನಲಿದುದು।
ಮುಕುಳಿತಮಾಯ್ತನ್ಯವಾದಿವದನಾಂಭೋಜಂ ॥೧೬
ಚಾರುಚರಿತ್ರತೀರ್ಥಜಲದಿಂದಘಕರ್ದಮಮಂ ಕಟಲ್ಚಿ ಸಂ।
ಸಾರಸಮುದ್ರಮಂ ಕ್ಷಣಪಯಃಕಣದಿಂದಿಱುಕೆಯ್ದು ದಿವ್ಯಭಾ॥
ಷಾರಸಪೂರ್ಣಮಂ ಶ್ರುತಪಯೋಧಿಯನೀಸಿದ ವರ್ಧಮಾನಭ।

೧೭. ಇಱುಕೆಯ್ದು- ಕೀಳಾಗಿ ಮಾಡಿ.

ಟ್ಟಾರಕರಂ ವಚಸ್ಸುರಭಿಚಂದನಚರ್ಚೆಗಳಿಂದಮರ್ಚಿಪೆಂ ‖೧೭

ವಿಮಲಶ್ರೋತ್ರಂ ಕೈವ।
ಲ್ಯಮೆಂಬ ಸಂಕಲ್ಪವನಿತೆ ನೇರ್ಗಿರಿಯಂ ವಿ ‖
ಶ್ವಮನಱಿವ ಮಹಿಮೆಯಿಂ ವ।
ರ್ಧಮಾನಜಿನಪತಿಗೆ ವರ್ಧಮಾನಮುನೀಂದ್ರಂ (?) ‖೧೮

ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು ಸೀ।
ಕರಿವೋದತ್ತು ಮೃಣಾಳತಂತುರಚಿತಜ್ಯಾಲೇಖೆ ಮೀನಧ್ವಜಂ ‖
ಕೊರಗಿತ್ತಗ್ಗದ ಕಂತು ಸೀದ ಗಱಿಯಂತಾದಂ ತಪೋರಾಜ್ಯತ।
ತ್ಪರಯೋಗೀಶ್ವರಬಾಲಚಂದ್ರಮುನಿನಾಥಜ್ಞಾನನೇತ್ರಾಗ್ನಿಯಿಂ ‖

ಪ್ರಚುರಕಲಾನ್ವಿತರಕುಟಿಲ।
ರಚಂಚಲರ್ ಶುದ್ಧಪಕ್ಷವೃತ್ತರ್ ದೋಷಾ ‖
ಪಚಯಪ್ರಕಾಶರೆನೆ ಬಾ।
ಲಚಂದ್ರದೇವಪ್ರಭಾವಮೇನಚ್ಚರಿಯೋ ! ‖೨೦

ಮೂವತ್ತಱಂ ಗುಣದಿಂ।
ಭಾವಜನಂ ಕಟ್ಟ ಪೆಟ್ಟವೆಳದರ್ ವೃಷದಿಂ ‖
ಭಾವಿಪ್ರೊಡೆ ಮೇಘಚಂದ್ರ।

೨೦. ಬಾಲಚಂದ್ರನು ಬಂದೆರಡು ಕಲೆಯುಳ್ಳವನು, ಕುಟಿಲನು, ಶುದ್ಧೇತರಪಕ್ಷದಲ್ಲಿಯೂ (-ಕೃಷ್ಣಪಕ್ಷದಲ್ಲಿಯೂ) ವೃತ್ತಿಯುಳ್ಳವನು, ದೋಷಾಶ್ರಯದಿಂದ (-ರಾತ್ರಿಯ ಸಂಬಂಧದಿಂದ) ಪ್ರಕಾಶವುಳ್ಳವನು ; ಅವನು ಬಾಲಚಂದ್ರದೇವರಿಗೆ ಸರಿಯಾದಾನೆ ?

೧. ವಿಮಲಶ್ರುತಂ. ಎಂದು ಪಂ.ರಾ. ಆ.೧. 15 ಇದೆ.

೨. ಪೆಟ್ಟಪೇಳದವೃಷದಿಂ ಎಂದು ಪಂ.ರಾ. ಆ.೧.೧೯ ಇದೆ.

ತ್ರೈವಿದ್ಯರದೆಂತು ಶಾಂತರಸಮಂ ತಾಳ್ದರ್ ! ॥೨೧

ಜಿನಪತಿಮುನಿಪತಿಗುಣವ ।
ರ್ಣ್ಣನಸಮಯಾನಂತರಂ ಕವೀಶ್ವರಗುಣವ ॥
ರ್ಣ್ಣನಮುಚಿತಮದಱಿನೀಕೃತಿ ।
ವನಿತೆಗೆ ಸೌಭಾಗ್ಯಮೇಕಭೋಗ್ಯಮೆನಿಕ್ಕುಂ ॥೨೨

ವಿವಿಧಾಲಂಕಾರದಿಂ ರಂಜಿಸೆ ತಮಗೆ ವಶಂಮಾಡಿ ಶಬ್ದಂಗಳಂ ತ । ಮ್ಮ ವಚಸ್ಸಂಪತ್ತಿ ಕರ್ಣಾಮೃತಮೆನೆ ರಸಭಾವಂಗಳಂ ತೋಱ ಜಾಡ್ಯ॥ ವ್ಯವಹಾರಂ ಪಿಂಗಿ ತಮ್ಮಿಂ ನೆಗೞ ಸುಖಮಯಂ ಸೃಷ್ಟಿ ಸ ತ್ಕೀರ್ತ್ತಿಯಂ ಭೂ। ಭುವನಂ ನಿಲ್ವನ್ನೆಗಂ ತಾಳ್ದಿದ ಸುಕವಿಗಳಿಂದಕ್ಕೆ ವಿದ್ಯಾಪ್ರಸಾದಂ ॥೨೩

ಅವಿರಳವಾಗೆ ಕಾಂತಮಣಿದರ್ಪಣಮಂ ಬೆಳಪಂದದಿಂ ಮಹಾ । ಕವಿಗಳೊಱಲ್ದು ತಿರ್ದುಗೆ ವಚೋವನಿತಾಕಚಬಂಧಮಂ ಜಿನ ॥ ಸ್ತ್ತವನಕಥಾನುಬಂಧಮನಶೇಷಬುಧಪ್ರಣಯಪ್ರಬಂಧಮಂ । ನವರಸಸೇತುಬಂಧಮನಘಪ್ರತಿಬಂಧಮನೀಪ್ರಬಂಧಮಂ ॥೨೪

ಮನ್ನಿಸುಗೆ ಕೃತಿಗೆ ಸೌಭಾ ।
ಗ್ಯೋನ್ನತಿಯಂ ಸುಕವಿಪಂಪನಾದಿಪುರಾಣಂ ॥
ಪೊನ್ನನ ಶಾಂತಿಪುರಾಣಂ ।
ರನ್ನನ ಕೃತಿರತ್ನಮೆನಿಸಿದಜಿತಪುರಾಣಂ ॥೨೫

೨೫. ಆದಿಪುರಾಣ, ವಿಕ್ರಮಾರ್ಜುನವಿಜಯವೆಂಬ ಗ್ರಂಥಗಳನ್ನು ರಚಿಸಿದ ಪಂಪನೂ, ಶಾಂತಿಪುರಾಣವನ್ನು ರಚಿಸಿದ ಹೊನ್ನನೂ, ಅಜಿತನಾಥ ಪುರಾಣ, ಸಾಹಸಭೀಮವಿಜಯವೆಂಬ ಗ್ರಂಥಗಳನ್ನು ರಚಿಸಿದ ಕವಿರನ್ನನೂ ಕ್ರಿಸ್ತಶಕದ ಹತ್ತನೆಯ ಶತಮಾನದಲ್ಲಿ ಇದ್ದವರು.

ರಸವತ್ಕಾವ್ಯಮನಱ್ತುವಟ್ಟು ಸುಜನಂ ಕೇಳ್ದಪ್ಪುಕೆಯ್ವಂತೆ ಸಂ । ತಸಮಂ ದುರ್ಜನನೇಕೆ ಕೇಳ್ದು ನಲಿಗುಂ ? ದುರ್ಬೋಧೆಯಂ ಬೇೞ್ಪು॥ ಟ್ಟಸುಗುಂ ನಿಷ್ಠುರವಜ್ರತುಂಡಹತಿಯಿಂ ಕೀಟಂ ಭರಂಗೆಯ್ದು ಖಂ । ಡಿಸುಗುಂ ತುಂಬಿವೊಲೀಂಟ ರಾಗಿಸುಗುಮೇ ಹೈಮಾಂಬುಜಾಮೋದಮಂ ? ॥ ೧೬

ವಚನಪ್ರೌಢಿಯನರ್ಥ ।
ಪ್ರಚುರತೆಯಂ ದೋಷದೃಷ್ಟಿಪರನಲ್ಲದವಂ ॥
ಶುಚಿಮತಿ ಪೊಗೞ್ಗುಂ ಮಾತ್ಸ ।
ರ್ಯಚಿತ್ತನುನ್ಮತ್ತನಱಿದೊಡೇಂ ಪೊಗೞ್ದಪನೇ ? ॥ ೧೭
ರಸಮಂ ನಾಲಗೆ ಕವಿತಾ ।
ರಸಮಂ ಕವಿ ಕುಸುಮರಸಮನಳಿಮಾಳೆ ಸುಧಾ ॥
ರಸಮಂ ಸುರರಕ್ಷಯಸುಖ ।
ರಸಮಂ ಪರಮಾತ್ಮನಱಿವನುೞಿದವರಱಿಯರ್ ॥ ೧೮
ಚತುರಕವಿ ಪೇೞ್ದ ರಸವ ।
ತ್ಕೃತಿಯಂ ರಸಮಗ್ನನಾಗಿ ದುರ್ಜನನುಮುದಂ ॥
ಸ್ತುತಿಯಿಸವೇೞ್ಪುದು ತಣ್ಪಂ ।
ಹುತಾಶನಂ ಮಂತ್ರಶಕ್ತಿಯಿಂ ತಾಳ್ದುವವೊಲ್ ॥ ೧೯
ಆರಯ್ಯದೆ ಸದ್ಭಾವಮ ।
ನಾರಯ್ಯದೆ ಪದಪದಾರ್ಥಮಂ ದೆಸೆಬಿದ್ದಂ ॥

೧೯. ತಣ್ಪು-ತಂಪು ; ತಣ್ಣಿತರ ಭಾವಂ.
೩೦. ದೆಸೆಬಿದ್ದಂ-ದಿಗಂತಪರ್ಯಂತವಾಗ

ಸೀರುಡುವಿನದವಿಯುಂತಿರೆ ।
ನೀರಸಮನೆ ಕೇಳ್ವರಲಸೆ ಪೇಳ್ವಂ ಕವಿಯೇ? ॥ ೩೦
ಬಗೆ ಕಿಱಿದು ಮಾತು ಪಿರಿದೆನೆ ।
ಬಗೆಯಂ ನುಡಿ ಮುಟ್ಟ ನುಡಿಯುವೆನೆ ಬಗೆ ಪೆಱಂ॥
ಬಗೆಗೊಳಿಸಲಾರದೆನೆ ಪೇ ।
ಳ್ವ ಗಾವಿಲರ್ಕವಿತೆಗೇಕೆ ಮುಯ್ಯಂ ಮಾಳ್ಪರ್? ॥ ೩೧
ಪೆಱರ ನುಡಿ ಪೆಱರ ಮಾರ್ಗಂ ।
ಪೆಱರರ್ಥಂ ಪೆಱರ ದೇಸಿ ಪೆಱರೋಜೆಯೆನಲ್ ॥
ಪೆಱರ ಬಱಿಸಂದು ತನ್ನಂ ।
ಮೆಱೆವಂ ಕವಿಯಲ್ಲವಾಟಕಾಱರ ಜೋಹಂ ॥ ೩೨
ಪೆಱರಂ ನುಡಿಯುವೆ ತನಗೊಂ ।
ದೞಿತಮೆನಲ್ ತನ್ನ ಮೊಗದೊಳೊಂದಕ್ಕರಮುಂ ॥

---

ಪ್ರ. “ಬದ್ದವಣಂ ಬಾಜಿಸೆ ದೆಸೆ ।
ಬಿದ್ವಂ ಕುಣಿದಾಡೆ ಗಣಿಕೆಯರ್ ... ॥” ಪಂ. ರಾ. ಆ. ೬. 28
“ದೆಸೆಬಿದ್ವವಾಡೆ ತರುಣಿಯ ।
ರೊಸಗೆಯ ಮೇಲೊಸಗೆಯಾದುದಂದರಮನೆಯೊಳ್ ॥ ಆ. ೩. 134
“ಬಗೆ ದೆಸೆಬಿದ್ದಂ ಪರಿವುದು ... ॥” ಪಂ. ರಾ.

ಸೀರುಡು-ಜೀರುಂಡೆ.

೩೧. ಗಾವಿಲ-ದ್ಭ. ಗ್ರಾಮೀಣ. ಮುಯ್ಯ್ - (?)

೩೨. ಜೋಹಂ-ವೇಷ; ಪ್ರಯೋಗ ರತ್ನಾಕರಶತಕದಲ್ಲಿ ೯ನೆಯ ಶ್ಲೋಕ
“ಒಡಲಿಂಬೀ ಜಡನಂ ಲಯಪ್ರಕರನಂ ನಿಶ್ಚೇಷ್ಟನಂ ದುಷ್ಟನಂ ।
ಪಡಿಮಾತೇಂ ಪೆಣನಂ ಮಹಾತ್ಮನಹಹಾ! ತನ್ನೊಂದು ಸಾಮರ್ಥ್ಯದಿಂ ॥
ನಡೆಯಿಪ್ಪಂ ರಥಿಕಂಬೊಲೇಂ ನುಡಿಯಿಪಂ ಮಾರ್ದಂಗಿಕಂಬೋಲ್ ಬಿಸು ।
ಟ್ಟಿಡುವಂ ಜೋಹಡಿಗಂಬೊಲೇಂ ಕುಶಲನೋ ರತ್ನಾಕರಾಧೀಶ್ವರಾ ॥”

ಪ್ರೌಢಮಾಡಿಸಲಱಿಯದಱಾತಮ |
ನಱಿಯದರೊಳ್ ಮೆಱೆವ ಸಾಸಿಗಂಗಿದಿರುಂಟೇ ? ॥ ೩೩

ಪರಿಣತಕವೀಂದ್ರವದನಾ |
ಜಿರದೊಳ್ ಮೃದುಪದವಿಲಾಸವಿನ್ಯಾಸಾಲಂ ॥
ಕರಣಂ ರಂಜಿಸೆ ನರ್ತಿಪ |
ಸರಸ್ವತೀಲಾಸ್ಯಭೇದಮಂ ಜಡನೆಱಿಯಂ ॥ ೩೪

ಅತಿಚತುರಕವೀಶ್ವರವಿರ |
ಚಿತಕೃತಿ ಕಲ್ಲೆರ್ದೆಯೆನಿಪ್ಪ ಮೂರ್ಖಂಗೆ ಚಮ ॥
ತ್ಕೃತಿಯಂ ಮಾಡುಗುಮೆ ? ಶಿಲಾ |
ಪ್ರತಿಮೆಯನುರ್ಚುಗುಮೆ ಮದನಮೋಹನಬಾಣಂ ? ॥ ೩೫

ಭಾವರಸಬಂಧುರಂ ಕವಿ |
ತಾವಿಸಯಮಕರ್ಣಹೃದಯನಪ್ಪ ಜಡಾತ್ಮಂ ॥
ಗೇವುದೊ ರತಿಯನಿದಂ ಕಿವಿ |
ಗೀವುದೆ ಬಧಿರಂಗೆ ಸೌಂದರೀಸೀತ್ಕಾರಂ ? ॥ ೩೬

ಪದಮರ್ಥಪ್ರತಿಪಾದನಪ್ರವಣಮರ್ಥಂ ಶಬ್ದಸಂಪತ್ತಿಸಂ |
ಪದವಶ್ಲಿಷ್ಟಪದಾರ್ಥಸಂಗತಿ ರಸಪ್ರಸ್ಯಂದಿ ಮಾೞ್ಕುಂ ಮನೋ ॥
ಮುದಮಂ ಕಾವ್ಯವನೀಪ್ಸ್ಯವಪ್ಸತನವೆಂಬೀಗಾಂಪ್ರವೇಡೇಗಳುಂ |
ಹೃದಯಗ್ರಾಹಿಗಳಾಗಿ ಶುಕ್ತಿಕೆಗಳಂ ಮುಕ್ತಾಫಲಂ ಪುಟ್ಟವೇ ॥ ೩೭

ವಿಮಲಯಶೋವಿಶುದ್ಧಮಣಿಯಂ ಪಡೆಯಲ್ಕೆ ಪಯೋಧಿವೇಳೆಯಂ
ಕ್ರಮದೊಳೆ ದಾಂಟ ನಿರ್ಮಲದಯಾರಸಮುದ್ರಮನೀಕಥಾಸಮು |
ದ್ರಮನೊಳಪೊಕ್ಕು ನಿಸ್ವಹಿಸುವೆನ್ನ ಕನಿಷ್ಠಬಹಿತ್ರಯಾತ್ರೆಗೇ ॥

ನಮರ್ಪ*ದೊ ಕರ್ಣಧಾರವಿಭವ್ರೋನ್ನತಿ ಭವ್ಯಜನಕ್ಕಿದೆಂತೆನಲ್ ॥೩೮

ಧರೆ ಪೊಗೞೆ ವೀತರಾಗನ ।
ಚರಿತದೊಳಳವಡಿಸಿ ಸಕಲರಸಮಂ ಕವಿತಾ ।
ಪರಿಣತೆಯಂ ಮೆಱೆದೀಶಾ ।
ವ್ಯರಸಾರ್ಣವಪೂರ್ಣಚಂದ್ರನಭಿನವಪಂಪಂ ॥೩೯

ಜಿನಪತಿಗಂ ಜಿನಮುನಿಗಂ ।
ಜಿನಾಗಮಕ್ಕಂ ಜಿನಾಧಿಪತಿಭವನಕ್ಕಂ ॥
ಜಿನಗುಣಸಂಪತ್ತಿಗವೇಱ ।
ಪನೆಱಗನುಱದವರ್ಗೆ* ನಾಗಚಂದ್ರಕವೀಂದ್ರಂ ॥೪೦

ಜಿನಪತಿಸಭೆಯೊಳ್ ಪೂಜ್ಯಂ ।
ಮುನಿಪತಿಸಭೆಯೊಳ್ ಪದಾರ್ಥನಿಪುಣಂ ವಿದ್ವ ॥
ಜ್ಜನಸಭೆಯೊಳ್ ಮಾನ್ಯಂ ಸ ।
ಜ್ಜನಸಭೆಯೊಳ್ ಚಾರುಚರಿತನಭಿನವಪಂಪಂ ॥೪೧

ಪದರಚನೆ ಸಜ್ಜನಶ್ರವ ।
ಣದೊಳಂಚೆಯ ತುಪ್ಪುೞಂಚೆಯಂ ತೀವಿದವೊಲ್ ॥
ಮೃದುವೆನೆ ಪೊಸಬಗೆ ರಸಭಾ ।
ವದೊಳೋಕುಳಿಯಾಡೆ ಪೇೞ್ದನಭಿನವಪಂಪಂ ॥೪೨

ಬಗೆ ಚೇತೋಬಂಧು ಬಂಧಂ ಶ್ರವಣಸಹಚರಂ ಕಾಂತಿ ಕಾಂತಾಕಟಾಕ್ಷಾ । ನುಗವರ್ಥವ್ಯಕ್ತಿ ವಾಣೀಮಣಿಮಯಮುಕುರಂ ಶ್ಲಿಷ್ಟಮಶ್ಲಿಷ್ಟಮರ್ಧ್ವಂ॥ಸುಗಮಂ ಭಾವಂ ಪ್ರಸನ್ನಂ ರಸಮನವಧಿ ಮಾಧುರ್ಯಮಾಶ್ಚರ್ಯಮೆಂದೀ । ಜಗಮೆಲ್ಲಂ ಮೆಚ್ಚೆ ಪೇೞ್ವಂ ಚತುರಕವಿಜನಾಸ್ಥಾನರತ್ನಪ್ರದೀಪಂ ॥೪೩

ಫುಲ್ಲಶರಂ ಬಸಂತದ ಪುಗಿಲ್ ನೆಱೆದಿಂಗಳ ತಣ್ಬಸಿಲ್ಮುಗು ।
ಳ್ಮಲ್ಲಿಗೆ ಬಂದ ಮಾವಲೆವ ತೆಂಕಣ ಗಾಳಿ ವಿಪಂಚಿಯಿಂಚರಂ ॥
ನಲ್ಲಳ ಲಲ್ಲೆ ಕೋಗಿಲೆಯ ಬಗ್ಗಣೆ ತುಂಬಿಯ ಗೇಯಮೆಂಬಿನಂ ।
ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿನಾಗಚಂದ್ರನಾ ॥೪೪

ಎಂದನುರಾಗದಿಂ ಪೊ*ಗೞ್ದು ಭವ್ಯಜನಂ ಕಿಱಿದೀಕಥಾಪರಿ ।
ಸ್ಪಂದಮಿದಂ ನಿಮಿರ್ಚೆ ಕವಿತಾರಸಮಂ ನೆಱೆ ಪೇೞ್ದರಿಲ್ಲ ಮು ॥
ನ್ನೆಂದು ಮಹಾಕವೀಶ್ವರರೊಳೊರ್ವರುಮೆಂದೊಡೆ ಪೇೞಲಾಂ ಮನಂ ।
ದುದೆನದಲ್ಲದೆನ್ನಳವೆ ಮಲ್ಲಿಜಿನೇಂದ್ರಮಹಾಪುರಾಣಮಂ ॥೪೫

ಕೃತಿ ಸಾಧಾರಣಮಾದೊಡಂ ಶ್ರವಣಸೇವ್ಯಂ ವಂಶವೀರ್ಯಶ್ರುತೋ ।
ನ್ನತಿಯಂ ಕಾವ್ಯಕಳಾವಿದಂಗೆ ಕವಿತಾಖ್ಯಾತಂಗೆ ಕಲ್ಪಾಂತರ ॥
ಸ್ಥಿತಿಯುಪ್ಪಂತಿರೆ ಮಾೞ್ಪುದೀಕೃತಿಗಳಂ ತ್ರೈಲೋಕ್ಯನಾಥಸ್ತವಾ ।
ಕೃತಿಯೆಂದಂದದನೊಲ್ದು ಪೇೞ್ದ ಕೃತಕೃತ್ಯಂ ತಾಂಬರಂ ಧನ್ಯರಾರ್ ?॥

ಅನವಧಿಬೋಧಸಾಧನಮೆನಿಪ್ಪ ಜಿನೇಂದ್ರಮಹಾನುಭಾವವ।
ರ್ಣನದೊಳೆ ಬಲ್ಮೆಯಂ ಮೆಱೆದು ಶಾಶ್ವತಲಕ್ಷ್ಮಿಗೆ ಮಾಱದನ್ಯವ ॥
ರ್ಣನರತಿಯಿಂ ವಿವೇಕವಿಕಲರ್ಕೆಡುವರ್ಥದೊಳಾದಮಾದ ಮೋ ।
ಹನದಿನದೇಕೆ ಮಾಱುವರೊ ಪುಣ್ಯನಿಬಂಧನಮಂ ಕವೀಶ್ವರರ್ ? ॥೪೭

ವಿಕಥಾವರ್ಣ್ಣನಮಲ್ಪಸಂಸ್ತವನಮೆಂಬೀದೋಷಮುಲ್ತುಂಬಿನಂ ।
ಸಕಲತ್ಯಾಗಿ ಸಮಸ್ತವೇದಿ ಭುವನಾರಾಧ್ಯಂ ಜಿನಂ ಸತ್ಯವಾ ॥
ದಿ ಕಥಾನಾಯಕನಾಗೆ ತಚ್ಚರಿತಮಂ ಪೇೞ್ದಂಗೆ ಕೈಸಾರ್ಗುಮೈ ।
ಹಿಕಮಾಮುತ್ರಿಕಮಾನುಷಂಗಿಕಮೆನಲ್ ನಿಶ್ರೇಯಸಶ್ರೀಪದಂ ॥೪೮

ಶಾಂತಮೆ ಪುಣ್ಯಹೇತುವಘಹೇತುಗಳನ್ಯರಸಂಗಳಾಗಿಯುಂ ।

ಶಾಂತಮೆನಿಪ್ಪ ತಜ್ಜಿನಕಥಾರಸದೊಳ್ಪುದುಪ್ರೊಕ್ಕು ಮಾಡುಗುಂ ॥
ಶಾಂತಿಯನಾರಸಂಗಳದು ಚಿತ್ರಿತಸಿದ್ಧರಸೋಪವಿದ್ಧಮು ।
ತ್ಯಂತವಿಶುದ್ಧಹೇಮರಸವಾಗವೆ ಲೋಹರಸಂಗಳಾದೊಡಂ ? ॥೪೯

ಕಥೆ ಜಿನಚರಿತಮೆ ಕವಿ ಜಿನ ।
ಕಥೆಯಂ ಪೇಟ್ದವನೆ ರಾಜವಿಟಚೋರಕಥಾ ॥
ಕಥೆ ಕಥೆಯೆ ಕವಿ ಕವಿಯೆ ತ ।
ತ್ಕಥೆಯಂ ಪೇಟ್ದಪ್ರಶಸ್ತಮಂ ಪುಟ್ಟಿಸುಗುಂ ॥೫೦

ನೂತನರುಂ ಪುರಾತನರುಮಪ್ಪ ಮಹಾಕವಿಗಳ್ಕವಿತ್ವವಿ ।
ಖ್ಯಾತಿಗೆ ಶಾಸನಂಬರೆದ ಸತ್ಕೃತಿಬಂಧಮದರ್ಕೆ ಸಜ್ಜನ ॥
ಪ್ರೀತಿನಿಬಂಧವಲ್ಲದೊಡದೇಂ ದುರಿತಕ್ಷಯಕಾರಣಂ ಜಿನ ।
ಖ್ಯಾತಿನಿಬಂಧಮೆಂಬ ಬಗೆ ಕೈಮಿಗೆ ಪೇಟ್ದಪೆನೀಪ್ರಬಂಧಮಂ ॥೫೧

ಬಂಧುರಮಾಗೆ ನೀಟ್ದವನುಯೋಗಚತುಷ್ಟಯಶಾಖೆಯೊಳ್ಶ್ರುತ ।
ಸ್ಕಂಧದೊಳಾಚತುರ್ವಿಪುಲಶಾಖೆಯೊಳಂ ಪ್ರಥಮಾನುಯೋಗಸಂ ॥
ಬಂಧಿತಪುಷ್ಪಮಂಜರಿ ದಲೀಕಥೆ ಭವ್ಯಮಧುವ್ರತಾವಳೀ ।
ಬಂಧು ಸಮಸ್ತಸೌಖ್ಯಫಳಜನ್ಮನಿವಾಸಮೆನಿಪ್ಪುದೊಪ್ಪದೇ ? ॥೫೨

ಭರತಮಹೀಶ್ವರಂಗೆ ಮಗಧೇಶ್ವರಮಂಡಲಿಕಂಗೆ ತಾರಭೂ ।
ಧರವಿಪುಲಾದ್ರಿಯೊಳ್ ವೃಷಭಸೇನಗಣಾಗ್ರಣಿ ಗೌತಮೋತ್ತಮಂ ॥
ಪುರುಜಿನವರ್ಧಮಾನಗುರುಸನ್ನಿಧಿಯೊಳ್ತಿಳವಂತು ಪೇಟ್ದದಂ ।
ವಿರಚಿಸಿಸುವೆಂ ಮನಂಬಯಸೆ ಮಲ್ಲಿಜಿನೇಂದ್ರಮಹಾಪ್ರಬಂಧಮಂ ॥

ಸಕಲಜ್ಞಪ್ರತಿಪಾದ್ಯಮಪ್ಪಭುವನಂ ದೇಶಂ ಪುರಂ ರಾಜವೃ ।
ತ್ತಕಮರ್ಹದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾ॥

ಣಕಥಾಂಗಗಳವೆಂಟೆನಿಕ್ಕುಮವಱೊಳ್ ಮುನ್ನಂ ಕಲಾಚಾರ್ಯರ |
ಪ್ಪ ಕವೀಂದ್ರೋತ್ತಮರಿಂ ಪ್ರತಿಷ್ಠೆವಡೆಗುಂ ಲೋಕಂ ಕಥಾಪೀಠ
ದೊಳ್ ‖ ೫೪

ಅದೆಂತೆನೆ :— ‖ ೫೫

ಕಡೆವರಮೇೞು ರಜ್ಜು ಪದಿನಾಲ್ಕು ತಳಂ ಚತುರಸ್ರಮೇೞು ರ |
ಜ್ಜುಡುಗದು ದಕ್ಷಿಣೋತ್ತರಮುಖಂ ಕ್ರಮಹಾನಿಗೆ ಸಂದು ಮಧ್ಯದೊ
ಳ್‖ ಕಡುಗಿಱಿದಾಯ್ತು ರಜ್ಜುವರಮೈದುವರಂ ಕ್ರಮವೃದ್ಧಿಗೆಯ್ದು
ಮೊ | ಲ್ದಿಡಿದುದದೊಂದು ರಜ್ಜುವರೆಗಂ ಭುವನಂ ಪವನತ್ರಯಾವೃ
ತಂ ‖ ೫೬

ಪವಮಾನತ್ರಿತಯಕ್ಕೆ ಪೆಂಪುವಡೆದಾಕಾಶಕ್ಕೆ ನಿಜೋರ್ಧ್ವಬೋ |
ಧವಿಲೋಕಕ್ಕೊಳಗಾದುದಲ್ಲದೆ ಲಯೋತ್ಪತ್ತಿಪ್ರಪಂಚಕ್ಕೆ ಕ‖
ರ್ತೃವಿಡಂಬಕ್ಕೊಳಗಾದುದಲ್ತು ನಿಜದಿಂ ತಾಳ್ದಿತ್ತು ಧಸ್ತಿರ್ಯಗೂ |
ರ್ಧ್ವವಿಭೇದತ್ರಯಮಂ ಸಮಸ್ತಭುವನಂ ಷಡ್ದ್ರವ್ಯಗರ್ಭೋದರಂ ‖

ಸಮಚತುರಸ್ರಂ ತ್ರಸನಾ |
ಳಮೇಕರಜ್ಜು ಪ್ರಮಾಣನಿಯತಂ ಮೂಲಾ ‖
ಗ್ರಮನೆಯ್ದೆ ಸಕಲಲೋಕ |
ದ್ರುಮದಂತಸ್ಸಾರದಂತೆ ಮಧ್ಯದೊಳಕ್ಕುಂ ‖ ೫೮

ಅವಿವೆನ್ನದೆ ಪಿರಿದುಂ ಸಂ |
ಭವಿಕುಂ ತ್ರಸನಾಳದಂತರಾಳದೊಳುೞಿದೀ ‖
ಭುವನಪ್ರದೇಶದೊಳ್ ಪು |
ಟ್ಟುವ ವಿಶದಸ್ಥಾವರಂಗಳಲ್ಲದ ಜೀವಂ ‖ ೫೯

ಆತ್ರಿಭುವನತ್ರಿಭೌಮಹರ್ಮ್ಯದ್ವಿತೀಯಭೂಮಿಯೆನಿಸಿ ‖ ೬೦

ಕ್ರಮದಿನಸಂಖ್ಯಾತದ್ವೀಪ ।
ಮುಮಬ್ಧಿಯುಮೊಂದನೊಂದು ಸುತ್ತಿಱಿದಿರೆ ಮ॥
ಧ್ಯಮಲೋಕಮಾಸ್ವಯಂಭೂ ।
ರಮಣಾಂಭೋರಾಶಿತೀರದಿಂ ಮುಟ್ಟಿರ್ಕುಂ ॥೬೧

ಏಂ ಬಗೆಗೆವಂದುದೋ ರವಿ ।
ಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್ ॥
ಜಂಬೂದ್ವೀಪಮನೊಳಕೊಂ ।
ಡಂಬುಧಿ ರತ್ನಾಂಶುಲೋಲಲಹರೀಜಾಲಂ ॥೬೨

ಆರತ್ನಾಕರದೊಳ್ನಿಸರ್ಗವಿವರಂಗಳ್ ಗುಣ್ಪುವೊಲ್ಮಧ್ಯವಿ।
ಸ್ತಾರಂ ಯೋಜನವೊಂದೆ ಲಕ್ಕ ತಳವಿಸ್ತಾರೋಪಮಂ ವಕ್ತ್ರವಿ॥
ಸ್ತಾರಂ ಪತ್ತುಸಹಸ್ರಯೋಜನಮೆನಲ್ ನಾಲ್ಕಿರ್ದುವತ್ಯಂತಗಂ।
ಭೀರಂಗಳ್ ಬಡವಾಮುಖಾನುಕೃತಿಗಳ್ನಾಲ್ಕುಂ ದಿಶಾಭಾಗದೊಳ್ ॥

ವಿವರಾಂತರ್ವರ್ತಿಯಾಗಿರ್ದನಿಲನೊಗೆಯೆ ಮೇಗಣ್ಗೆ ಪಕ್ಷಂಬರಂ
ಪೆ। ರ್ಚುವುದಾತೋಯಮಾನಿಲಂ ಮತ್ತೊಳಪುಗೆ ಸಲಿಲಂ ತೀವೆ ಗ
ರ್ತಂಗಳಂ ಕುಂ॥ ದುವುದಂಭೋರಾಶಿ ತದ್ವಿಭೀಷಣಪವನಘನಾಘಾತ
ದಿಂ ನಿಚ್ಚಲುಂ ಪೆ। ರ್ಚುವ ಪೋತಃಪುದ್ಗಲಂಗಳ್ ವಿರಳಮೆನಿಸೆ ಮ
ರ್ಯಾದೆಯಂ ದಾಂಟದಿರ್ಕುಂ ॥೬೪

ಆಮುನ್ನೀರೆ ಮೇರೆಯಾಗಿ ॥೬೫

ಹಿಮಶೈಲಪ್ರಮುಖಂಗಳಾಱುಕುಲಶೈಲಂಗಳ್ವಿಯದ್ವಾಹಿನೀ।
ಪ್ರಮುಖಂಗಳ್ ಪದಿನಾಲ್ಕುಗೋತ್ರನದಿಗಳ್ ಶೋಭಾರತಂ ಭಾರತ॥
ಪ್ರಮುಖಂಗಳ್ ವಿಷಯಂಗಳೇೞ್ ನಿಜನಾನಾವರ್ಣದಿಂ ಮುತ್ತೆ ಚಿ।

೬೫. ಮುನ್ನೀರ್- ಸಮುದ್ರ.

ತ್ತಮನೇಂ ಚಿತ್ತಜಚಿತ್ರಶಾಲೆಯೆನೆ ಜಂಬೂದ್ವೀಪವಿಂಬಾದುದೋ !॥
ಆಜಂಬೂದ್ವೀಪದ ನಟ್ಟನಡುವೆ ॥೬೭

ದಿವಮಂ ಮುಟ್ಟಿದ ಪೆಂಪು ಭೂವಲಯಮಂ ತಾಳ್ದಿರ್ದ ಧೈರ್ಯೋ
ದಯಂ । ರವಿಬಿಂಬಂ ಬಲಗೊಳ್ವ ಪೆರ್ಮೆ ನಿಜಸಾನೂದ್ಯಾನಸಂತಾನ
ದಿಂ ॥ ದಿವಿಜಾಧೀಶನೆ ಮೆಚ್ಚುತಿರ್ದ ವಿಭವಂ ಜನ್ಮಾಭಿಷೇಕಕ್ಕೆ ತಾ।ನೆ
ವಲಂ ಮಜ್ಜನಪೀಠಮಾದತಿಶಯಂ ಹೇಮಾದ್ರಿಗುನ್ಮುದ್ರಿತಂ ॥೬೮

ದೊರೆವೆತ್ತುನ್ನತಿಯಿಂ ಸಮಸ್ತವಿಬುಧಪ್ರಸ್ತುತ್ಯವಿಖ್ಯಾತಿಯಿಂ ।
ಸ್ಥಿರಸಂಪತ್ತಿಯಿನೀವಸುಂಧರೆಗೆ ತಾಂ ಮಧ್ಯಸ್ಥಮಾದೊಳ್ಪಿನಿಂ ॥
ಧರಣೀಭೃತ್ಪತಿ ಪೂಜ್ಯಮಾದ ಮಹಿಮಾವಷ್ಟಂಭದಿಂ ನಾಡೆ ಸುಂ ।
ದರಮಾಗಿರ್ದುದು ಪೋಲ್ತು ಮಂದರನಗಂ ಸಾಹಿತ್ಯಸರ್ವಜ್ಞನಂ ॥೬೯

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪೀಠಿಕಾಪ್ರಕರಣಂ,ಪ್ರಥಮಾಶ್ವಾಸಂ.

೬೯. ಸಾಹಿತ್ಯಸರ್ವಜ್ಞ - ಅಭಿನವಪಂಪನು. ಇಲ್ಲಿ ಕವಿಗೂ ಮಂದರಪರ್ವ
ತಕ್ಕೂ ಸಾಮ್ಯವಿದೆ.

—ದ್ವಿತೀಯಾಶ್ವಾಸಂ.—

ಶ್ರೀಜಿನಭವನಚತುಷ್ಟಯ ।
ರಾಜಿತವೊಂದೊಂದೆನಿಪ್ಪ ಮೇಖಳೆ ನಾಲ್ಕುಂ ॥
ರಾಜಿಸೆ ಮಂದರಮೆಂತಾ ।
ರಾಜಿಸಿದುದು ಲಕ್ಷಯೋಜನೋನ್ನತಿಯಿಂದಂ ॥೧

ಆಮಂದರಪೂರ್ವಾಪರದಿಗ್ವಿಭಾಗದೊಳ್ ॥೨

ಪುರಮೆಲ್ಲಂ ಮಾಡಜಿಂದಲ್ಲಿಯೆ ಪುರವನಮೆಲ್ಲಂ ಲತಾಲೀಢದಿಂ ಗೋ । ಪುರಮೆಲ್ಲಂ ಚೈತ್ಯಗೇಹಂಗಳನುಪಪುರಮೆಲ್ಲಂ ಪುರಸ್ತ್ರೀ ರಣನ್ನೂ ॥ ಪುರಝುಂಕಾರಂಗಳಿಂ ರುಜಿಸೆ ಜನಪದಲಕ್ಷ್ಮೀಪದಾಲಂ ಕೃತಂ ನೂ । ಪುರಮಿರ್ಪಂತಿರ್ಪ್ಪುದಂಗೋದ್ಭವಜಯುವನಿತಾಜನ್ಮ ಗೇಹಂ ವಿದೇಹಂ ॥೩

ಸ್ಥಿರಮಲ್ಲದು ಕಡೆವಟ್ಟೀ ।
ಭರತೈರಾವತದ ಲಕ್ಷ್ಮಿ ಪದಿನಾಱಿನ್ನೊಳ್ ॥
ಸರಿಯಲ್ಲವು ದಿವಮೆಂಬಂ ।
ತಿರೆ ಮೂವತ್ತೆರಡು ನಾಡುಗಳ್ ಸೊಗಯಿಸುಗುಂ ॥೪

ಯುಗಪರಿವರ್ತನಕ್ಕೆ ಪೊಱಗೆಂಬ ಸುಖಕ್ಕೆ ನಿವಾಸಮೆಂಬ ಶೋ । ಭೆಗೆ ಮೊದಲೆಂಬ ಪೆರ್ಮೆ ಪೊಗಟಲ್ಬಗೆದಪ್ಪ ನರಂಗೆ ದುರ್ಗಮಂ ॥ ಸುಗಮಮಿದೊಂದೆ ಪಂಚಶತಚಾಪಮಿತಂ ತನು ಪುಬ್ಬಕೋಟಿ ನೆ ॥ ಟ್ಟಗೆ ಪರಮಾಯು ಪುಟ್ಟದವರ್ಗೆಂಬ* ಕಥಾಕಥನಂ ವಿದೇಹದೊಳ್ ॥

ಜಿನರುಂ ಷಟ್ಖಂಡಭೂಮಂಡಲವಿಜಯಿಗಳುಂ ಕುಂದರುದ್ರೇಶರಿಂದ। ಪ್ಪನೆಯುಂ ನಾೞ್ಗಿಲ್ಲ ಹೀನಾಧಿಕಮೆನಿಪುವು ಕಾಲತ್ರಯಂಗಳ್ ಸುಖೋತ್ಪಾ ॥ ದನಮುಕ್ಕುಂ ಮಾನವರ್ಗೀತಱ ದೆಸೆಯೊಳಮಿಲ್ಲಾಕುಳಂ ದ್ರವ್ಯಮಿಥ್ಯಾ। ತ್ವನಯಂಗಳ್ಪ್ಪಟ್ಟವೆಂಬೀಮಹಿಮೆಗೆ ಪೆಱತೇಂ ದೇಹಮಾಯ್ತೋ ವಿಧೇಹಂ ॥೬

ಆವಿದೇಹವಿಷಯಕ್ಕೆ ಪೂರ್ವಾಪರಭೇದದಿಂ ಪೂರ್ವಾಪರವಿದೇಹಮೆಂಬ ಸಂಕಲ್ಪಮಾದುವಲ್ಲಿ ॥೭

ಇಂದುವ ಪದಿನಾಱುಂ ಕಳೆ ।
ಯಿಂದಂ ಕಣ್ಗೊಳಿಸುವಂತೆ ಪದಿನಾಱುಂ ನಾ ॥
ಡಿಂದಂ ಪೂರ್ವವಿದೇಹಂ ।
ಸೌಂದರ್ಯಮನತ್ಯಪೂರ್ವಮಂ ತಳೆದಿರ್ಕುಂ ॥೮

ಆಮಹೀವಿಲಾಸಿನೀವಳಿರೇಖಾವಿಲಾಸಮಂ ತಳೆದು ನೀಲಾಚಲಶಿಖಂಡಪ್ರಸೂತಮುಂ, ಉಭಯತಟ ವಜ್ರವೇದಿಕಾಸ್ಫಾಲನ ಬಹಳಕಲ್ಲೋಲಮಾಲಾಪರೀತಮುಂ, ತೀರಘನಸಾರಸರಳಚಂದನದ್ರುಮನಿರ್ಯಾಸಪ್ರತಿದಿನೋದೀರ್ಣಪಂಚಶತಯೋಜನವಿಸ್ತೀರ್ಣಮುಮೆನಿಸಿ॥೯

ಗಗನಸ್ತಂಬೇರಮುಕ್ಕಿಕ್ಕಿದ ಮೊಗವಡಮಂ ಪೋಲ್ತು ಫೇನಪ್ರತಾನಂ । ಮುಗಿಲಂ ತಳ್ಪೊಯ್ಯೆ ದಿಕ್ಕಾಂತೆಯರ್ಗೆ ಕುಡುವ ಮುಕ್ತಾವತಂಸಂಗಳೆಂಬ ॥ ನ್ನೆಗಮಂಭಶ್ಶೀಕರಂಗಳ್ಪ್ರಸರಿಸೆ ವಿಚಲದ್ವೀಚಿಹಸ್ತಂಗಳಿಂ ಮೇ। ಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳನದೀಖ್ಯಾತಸೀತಾಪ್ರವಾಹಂ ॥೧೦

---

೮. ಇಂದುವ- ಚಂದ್ರನು. ಇಲ್ಲಿ ಪ್ರಥಮೆಯಲ್ಲಿ ಷಷ್ಠಿಯು ಬಂದಿದೆ. ಶ.ದ.ಸೂ॥ 134

ತಂಡದಿನಾಪ್ರಸಿದ್ಧಕುಲವಾಹಿನಿ ಸೀತೆಯ ವಜ್ರವೇದಿಕಾ ।
ಮಂಡಿತದಕ್ಷಿಣೋತ್ತರತಟಂಗಳೊಳೊಂದಱೊಳೆಣ್ಬೆಗೆಯ್ದು ಷ ॥
ಟ್ಖಂಡಮಿಳಾಶಿಖಂಡಮಣಿಮಂಡನಮಿರ್ಪವೊಲಿರ್ಪುದಲ್ಲಿ ಕಂ ।
ಣ್ಗೊಂಡುದು ಕಚ್ಛಕಾವತಿಮಹಾವಿಷಯಂ ವಿಷಯೈಕಭೂಷಣಂ ॥೧೧

ಮೇರು ಪಡುವಣ್ಗೆ ಸೀತಾ ।
ತೀರಂ ತೆಙ್ಕಣ್ಗೆ ನೀಲಗಿರಿ ಬಡಗಣ್ಗಾ ॥
ತಾರಂ ದ್ವಾರವಣರಣವ ।
ಪ್ಪಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ ॥೧೨

ಅಲ್ಲಿ ॥೧೩

ವಿದಲಿತನಲಿನೀಸುಖದಂ ।
ನದನಿಕಟಂ ವಿವಿಧವರ್ಣಮಣಿಗಣಶೋಭಾ ॥
ಸದನಂ ಪರ್ವತನಿಕಟಂ ।
ಮದಗಜಮದಸಲಿಲಸದನಮಟವೀನಿಕಟಂ ॥೧೪

ನೆಲೆ ಚೆಲ್ವಿಂಗೆನೆ ಬೆಟ್ಟು ರತ್ನಗಣಿಯಿಂ ಕಾಡಾನೆಯಿಂ ಕಾಡು ಪ । ಣ್ಪಳದಿಂ ಪ್ರೊಗಿಡು ತುಂಬಿಯಿಂ ತಿಳಗೊಳಂ ಪೆಣ್ಬಂಚೆಯಿಂ ಬೆಂಚೆ ನೆ ॥ ಯ್ದಿಲ ಪ್ರೂವಿಂ ಪೊನ್ನೊತ್ತುವೆತ್ತ ಬೆಳಸಿಂದೂರೂರ ಕಾಲ್ವೆ ಳ್ಳಿಗಳ್ । ನೆಲೆವಾಡಂಗಳನೊಪ್ಪೆ ಬೇಱೆ ನೆಲೆವೀಡಾಯ್ತಂಗಜಂಗಾ ನೆಲಂ ॥೧೫

ಸಕಲಜಶಾಳಿಯಂ ಪುದಿದ ಶಾಳಿವನಂ ಶಶಿಕಾಂತನಿರ್ಗತೋ ।
ದಕ ನವನಾಳಿಕೇರಜಲಪೂರ ಸಿತೇಕ್ಷುರಸಪ್ರವಾಹವಾ ॥

---

೧೫. ಬೆಟ್ಟು- ಬೆಟ್ಟ. ಹಳಗನ್ನಡದಲ್ಲಿ ಈ ಎರಡು ರೂಪವೂ ಉಂಟು.
ಬೆಂಚೆ- ಸರಸ್ಸು ; ಪ್ರ. ಕಬ್ಬಿಗರಕಾವ. ೧೮.
೧೬. ಪುದಿದ- ತುಂಬಿಕೊಂಡಿರುವ;

ತೃಕಮೆನೆ ಸಂತತಂ ಬೆಳೆಯೆ ಪೆರ್ಚೆಳಸಿಂ ಪ್ರಸಿಯಾಯ್ತು ದೇವಮಾ ।
ಶೃಕವೆಸಱ್ನದಾನೆಲದ ಕೆಯ್ವೊಲನಂ ಪೊಱತೇನನೆಂಬುದೋ ! ॥೧೬

ಮೇಲ್ಗಟ್ಟಿನ ಪಸುರ್ವಟ್ಟೆಯು ।
ಪೊಲ್ಗಿಳಿಗಳ್ಸುೞಿಯೆ ಗಗನದೊಳ್ ಪಚ್ಚೆಯ ನು ॥
ಣ್ಗಲ್ಗಟ್ಟಿನ ಜಗಲಿಪೊಲಿರೆ ।
ಕಾಲ್ಗಟ್ಟೆಯ ಮಡಿಗಳೆಸೆದುವೋರೊಂದೆಡೆಯೊಳ್ ॥೧೭

ಬೆಳೆದೆಱಗಿರ್ದ ಶಾಳಿಗೆಱಗಿರ್ದ ಶುಕಾಳಿ ನಭಕ್ಕೆ ಪಾಱು ವಂ ।
ಡಳಿಸೆ ತದೀಯ ಚಂಚುಪುಟಕೋಟಿಗಳಿಂದಮೆಱಲ್ವ ಕಾಂಚನೋ ॥
ಜ್ಜ್ವಳಕಣಿಶಂಗಳೊಪ್ಪಿದುವು ಶಾದ್ವಲರತ್ನವಿತಾನದೊಳ್ಮನಂ ।
ಗೊಳಿಸುವ ಪದ್ಮರಾಗಮಣಿಕೀಲಿತಲಂಬಣಜಾಲಮೆಂಬಿನಂ ॥೧೮

ಮತ್ತಮಾ ವಿಚಿತ್ರಶೋಭೆಯಂ ತಳೆದ ಕಲಮಕ್ಷೇತ್ರಂಗಳೊಳ್ ॥೧೯

ಇದು ವಲ್ ಪಕ್ಕಿಗಳೆಲ್ಲಮಂ ನೆರಪುವಂದಾ ಪಕ್ಕಿಸೋವಂದಮು ।
ಲ್ಲಿದೆನಲ್ ಸೋಗೆನವಿಲ್ಬಱಲ್ಮಡಿಗೆ ಭೃಂಗಂ ಕುಂತಲಕ್ಕಂಚೆಗಳ್ ॥
ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂ ।
ಮದದಿಂ ಪಾಮರಿಯರ್ ಜಿತಾಮರಿಯರಿರ್ದರ್ಕಾದು ಕೇದಾರಮಂ ॥೨೦

ಅಂತು ಸೊಗಯಿಸುವ ಕೆಯ್ವೊಲಂಗಳ ಕೆಲದೊಳ್ ॥ ೨೧

ಮಾವಿನ ಜೊಂಪಮುಂ ಲತೆಯ ಬಳ್ಳಿ ಸರೋವರಮುಂ ಪೊದಱ್ದ ಪೊಂ ।
ದಾವರೆವಳ್ಳಿ ಪೂಗವನಮುಂ ಪೊದಱಿಂದೆಲೆವಳ್ಳಿ ಪುಷ್ಪವ ॥
ಲ್ಲೀವನಮುಂ ಲತಾಂಗಿಯುರಮಾಂಗದ ಮಿಂಚಿನ ಬಳ್ಳಿ ಸುತ್ತೆ ಶೋ ।

---

೧೮. ಎಱಲ್ವ- ಜೋಲಾಡುವ; ಧಾ. ಎಱಲ್, ಆಲಂಬನೇ. ಲಂಬಣ- ಗೊಂಚಲು.
೨೦. ಸೋವ- ಹಾರಿಸುವ.
೨೧. ಕೆಯ್ವೊಲಂ- ಗದ್ದೆ. ಪ್ರ. ಕಬ್ಬಿಗರಕಾವ. ೧೮.

ಭಾವಹಮಾರ್ಗಪಾವಿಷಯಮೀವುದು ರಾಗದ ಬಳ್ಳಿವಳ್ಳಿಯಿಂ ॥೨೨

ಅಂತು ನಿರತಿಶಯವಿಲಾಸಮಂ ತಳೆದ ವಿಷಯವಿಲಾಸಿನಿಯ ಮೇ ಲ್ಕೊಂಡ ವಿಚಿತ್ರವಸ್ತ್ರಮೆನಿಸುವುಪವನಂಗಳೊಳ್ ॥೨೩

ಮೃದುಹೃದಯದ ನಲ್ಲರನೊ ।
ದುದನೆನಿಸಲೆ ನಾಡ ಸುಭಗೆಯರ್ ಸುರತದೊಳು ॥
ಣ್ಮದ ತೆಮ್ಮಿಂಚೆರಡಿಂದೆಂ ।
ದುದನೆನಿಪರ್ ಕೃತಕಶೈಲಮಂ ಕಲ್ಲಿದೆ*ಯಿಂ ॥೨೪

ಸಮರತಸಂಜನಿತಪರಿ ।
ಶ್ರಮಮಂ ದಂಪತಿಗೆ ಕಳೆದು ಮಗುಳ್ದಿಂ* ರತಿರಾ ॥
ಗಮನೋಲಗಿಸುವುದು ನವ್ಯೋ ।
ದ್ಗಮಪರಿಮಳವಿಷಯಮೆನಿಸಿ ವಿಷಯಸಮೀರಂ ॥೨೫

ತೀವಿದ ತಿಳಿಗೊಳದಿಂ ಪೊಂ ।
ದಾವರೆಗೊಳದಿಂದರಲ್ದ ನೆಯ್ದಿಲ್ಗೊಳದಿಂ ॥
ದಾವಲ್ಗೊಳದಿಂ ಚೆಲ್ವಿಂ ।
ಗಾವಾಸಮೆನಿಪ್ಪವೊಪ್ಪವಾನಾಡೂರ್ಗಳ್ ॥೨೬

ಕಳಕಂಠಕ್ಕತನುಗೆ ಚಾ ।
ಪಳತಾರೋಹಣವಿಕಾರವಳಿಗಾಮ್ರಕುಜಾ ॥
ವಳಿಗೆ ಮಧುವಿಕೃತಿ ಮಾನವ ।
ಕುಳಕ್ಕೆ ಕನಸಿನೊಳಮಿಂತಿವಿಲ್ಲಾನಾಡೊಳ್ ॥೨೭

ಜಾನಪದಾಂಗನಾಜನದ ಗಾಡಿಗೆ ಸೋಲ್ತು ಳನೀನಿನಾದಮಂ।
ಜಾನಿಸಿ ಕೇಳ್ದು ಸಾರಪರಿಕಾಲ್ಗಳನೊಯ್ಯನೆ ದಾಂಟ ಸುತ್ತಿದು ॥

೨೮. ಸಾರ. ಸಾರವತ್ತಾದ; ಸಾರ್- ದ್ಭ. ಸಾರ.
ಪರಿಕಾಲ್- ಹರಿಯುವ ಕಾಲ್ವೆ.

ದ್ಯಾನದೊಳಾಡೆ ತೀರವೆಯುಮಂ ಪಥಿಕರ್ ಮಱೆದಿಲ್ಲೆನಲ್ ಪರಿ ।
ಮ್ಲಾನತೆ ಸೈತು ಬಟ್ಟೆನಡೆಯಲ್ಪಡಿಯರ್ ವಿಷಯಾಂತರಾಳದೊಳ್ ॥

ಬಗೆಯೊಳ್ಬೇಟದ ಬೀಜಮಂ ತಳಿದು ನೀರ್ವೊಯ್ವಂದದಿಂ ತೋ ೪ ನುಣ್ಪೊಗರ್ಗಳ್ಪೊರ್ಬಿನವೆತ್ತಿ ತಣ್ಗಳಸಮಂ ನೀರ್ವೊಯ್ವು ದುಂ ಪಾಂಥರಾ ॥ ಕೆಗಳೊಳ್ಪೊಟ್ಟೊಲವಿಂಗಿದಲ್ತೆ ಬಱನೀರೆಂಬಂದ ದಿಂದೀಂಟ ದಿಟ್ಟ । ಗಳಂದೀಂಟುವರಾಪ್ರಪಾಪ್ರಣಯಿನೀಲಾವಣ್ಯನೀ ರಂಗಳಂ ॥೨೯

ಅಂತು ನಯನಾನಂದವಿಷಯವಾದ ವಿಷಯವಿಲಾಸಿನೀಮಧ್ಯನಾಭಿ ಯುಂ ಸೌಂದರ್ಯಸನಾಭಿಯುಮೆನಿಸಿ ॥೩೦

ವಿಷಯಸುಖಾಸ್ಪದಂ ವಿವಿಧರತ್ನಗೃಹೋದ್ಗತಕಾಂತಿಸಂತತಾ ।
ಭಿಷವಣಸುಂದರಂ ಸಕಲಮಂಗಲವೇದಿಕೆ ಕಚ್ಛಕಾವತೀ ॥
ವಿಷಯವಿಳಾಸಿನೀತಿಳಕಮಿರ್ಪವೊಲಿರ್ಪುದು ಬಣ್ಣಿಸಲ್ಕೆ ವಾ ।
ಗ್ವಿಷಯಮೆ ವೀತಶೋಕಪುರಮಂ ಸ್ಮರರಾಜನ ರಾಜಧಾನಿಯಂ ॥೩೧

ಅದು ಕೊಯ್ದುದಳಕೆಯಳಕೆಮ ।
ನದು ಮಿಕ್ಕುದು ಭೋಗವತಿಯ ಭೋಗಮನದು ಮೆ ॥
ಚ್ಚಿದು ಚೈತ್ರರಥದ ಚಿತ್ರಾ ।
ಸ್ಪದಮನೆನಲ್ವೀತಶೋಕಪುರವರಮೆಸೆಗುಂ ॥೩೨

ಅಪೊಱಲ ಪೊಱವೊಱಲೊಳೆ ಕಱಗಿದ ಪೊಂಗೇದಗೆಯ ಬಾಳ್ವೇ ಲಿಯಿಂದೊಳಗೆ ಮನಸಿಜಂಗೆ ಪಿಡಿದ ಪೀಲಿದಱಯಂತೆ ಬಳಸಿ ಕಿಕ್ಕಿಱ

೨೯. ತೀರವೆ- (?) ಪ್ರ. ಪ. ರಾ. ೮. ೧. ೧೦೩
ಸೈತು (ಅವ್ಯಯ)- ಸರಿಯಾಗಿ, ನೆಮ್ಮದಿಯಾಗಿ.
೩೨. ಅಳಕೆ- ಕುಬೇರನ ರಾಜಧಾನಿ. ಅಳಕ- ಕುರುಳು.
೩೩. ಪೀಲಿದಱ- ನವಿಲುಗರಿಯ ಕೊಡೆ.

ಗಿಱಿದ ನಾಳಿಕೇರತರುಗಳೊಳಂ ಮನೋಜರಾಜನೋಲಗಸಾಲೆಯಂತಿರ್ದ ಘನಸಾರಸರಳಚಂದನದ್ರುಮಷಂಡಂಗಳೊಳಂ ಮದನರಾಗದುರುಳಿಯಂತೆ ಕಣ್ಗೊಳಿಪ ತನಿವಣ್ಗಳಿಂ ತುಱುಗಿದ ನಾರಂಗಭೂರುಹಂಗಳೊಳಂ ಜಳವಿಹಗಪಕ್ಷವಿಕ್ಷೇಪದಿಂ ಪರಿದು ಕಾಮಸಾಮ್ರಾಜ್ಯದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದವಾದ ಪೊಂದಾವರೆಯ ರಜದೊಳಂ ಬಿಡದೆ ಸುರಿವ ಸೊನೆಯ ಸೋನೆಯಂ ತಳೆವ ಸಹಕಾರಮಂ ತಳೆದು ರತಿಪತಿಯ ಧಾರಾಗೃಹದಂತಿರ್ದ ಮಾಧವೀಲತೆಯ ಜೊಂಪಂಗಳೊಳಂ ಮನ್ಮಥನಿಸರ್ಗದುರ್ಗದಂತಿರ್ದ ಕೃತಕಾಗಿರಿಗಳೊಳಂ ಪುಷ್ಪಶರಪುನ್ನಾಗಘಟೆಯ ಕಟದಿನುತ್ಕಟವಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ ಮನಂಗೊಳಿಪ ಪುನ್ನಾಗಮಹೀರುಹಂಗಳೊಳಂ ಪರಿಪಕ್ವಫಲರಸಾಸ್ವಾದನೋತ್ಸುಕಶುಕಚಂಚುಸಂಚಾರದಿನಲ್ಲೊಕ್ಕು ಕುಂಕುಮಂಬೊರೆದ ಕರ್ಪೂರವಳುಕಂ ಕೆದಱಿದಂತಿರ್ದ ದಾಡಿಮಬೀಜರಾಜಿಯೊಳವೋರೊಂದೆಡೆಯೊಳ್ ಸೊನೆಯ ಕನರಂ ಸವಿವ ಗಂಡುಗೋಗಿಲೆಯ ತುಂಡಖಂಡದಿನುದಿರ್ದ ನೆಲೆವೆಣ್ಗೆ ತಲೆದುಡುಗೆಯ ಮಾಣಿಕದ ಕಿಱುವರಲ್ಗಳಂತಿರ್ದ ಸಹಕಾರಕೋರಕಂಗಳೊಳವೋರೊಂದೆಡೆಯೊಳ್ ಬಿರಯಿಯೆಂಬ ಬೆಳ್ಮಗಂಗಳನಳುರ್ವ ಕಾಳ್ಕಿಚ್ಚಿನಂತೆ ಕೆಂಕವಾದ ಕಂಕೇಳೀಕುಜಂಗಳೊಳಂ ಓರೊಂದೆಡೆಯೊಳ್ ವನವಿಲಾಸಿನಿಯ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳತಿರಮಣೀಯಮಾಗಿ ॥ ೩೩

ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮಂ ತುಂಬಿಯಂ

ಕಿಕ್ಕಿಱಿಗಿಱಿದ- ಒತ್ತೊತ್ತಾಗಿ ಸೇರಿಸಿದ. ಉರುಳಿ- ಉಂಡೆ.
ಅಳುರ್ವ- ವ್ಯಾಪಿಸುವ. ಕೆಂಕವಾದ- ಕೆಂಪಾದ.

ಪ್ರೊ। ಗೊಳಡಿಂ ಪೂಗದ್ರುಮಂ ಬಲ್ಸೆಱೆವಿಡಿಯೆ ಮರಾಳಂಗಳಂ ಪದ್ಮ ಷಂತು॥ ನಳಿನೀಕಾಂಡಂಗಳಂ ಕೊರ್ಬಿಸೆ ಕನಗೊರ್ನವಿಂ ಬಾಳಚೂತ ದ್ರುಮಂ ಚಾ। ಪಳವುಂ ಪುಂಸ್ಕೋಕಿಲಕ್ಕೋಲಗಿಸೆ ಸೊಗಯಿಕುಂ ತತ್ಪುರೋದ್ಯಾನಷಂಡಂ ॥೩೪

ಕುಸುಮರಸಂಗಳೆ ಪಟ್ಟ ತನಿವಣ್ಣ ರಸಂಗಳ ಸೋನೆ ಸಾಜ ಕೋ।
ಟ್ಕಿಸಱೆಳನೀರ ಜೊಂಪೆ ಸೊನೆಯೊಳ್ಗಸಱೆಂಬಿವಱಂದಮೆಲ್ಲಿಯುಂ॥
ಬಸನದ ಬಾಯ್ಗಪ್ಪೆಡೆಗಳಲ್ಲದೆ ನಲ್ಲರನುಗರಾಗವೋ।
ಡಿಸೆಮನವೊಳ್ತಳಿರ್ದಱಸುವರ್ಜನದೊಳ್ಕೃತಕಾಚಲಂಗಳಂ ॥೩೫

ಪರಿಕಾಲಿರ್ತಡಿಯೊಳ್ ಮಡಲ್ತ ಮುಗುಳಂ ಪೂಗೊಂಚಲಂ ಪು ಷ್ಪವ। ಲ್ಲರಿಗಳ್ಪೇಱದ ಬಂಪಡುಣ್ಬಳಪನಿಂ ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾ॥ ಸಾರದ ತುಂತುರಿಂ ನೆಱಕೆನಾಂಪಾಂದೋಳತಾಶೋಕ ಮುಂ। ಜರಿಯುಂ ಸಾಂದ್ರನವ ಪಲ್ಲವೋಲ್ಲಸಿತಮುಂ ಬಾಲಾತಪಭ್ರಾಂ ತಿಯಿಂ ॥೩೬

ಮದನಂ ತೋಂಟಗಸಾದ ಚೂತವತನುಜ್ಯಾರಾವದೊಳ್ಕೂಡಿ ಪಾ।
ಡಿಪ ಪೆಣ್ದುಂಬಿ ವಸಂತದೊಳ್ಮದನಕೇಳೀಸೂತ್ರಮಂ ಪಾರದೋ॥
ದಿಪ ಕೀರಂ ರತಿಯೊಳ್ಪವನ್ಯಸನಮಂ ಕಲ್ತಂಟೆ ಶೀತಾಂಶು ತೀ।
ವಿಪ ನೆಯ್ದಿಲ್ಗೊಳನಲ್ಲದಿಲ್ಲಿನೆ ಬನಂ ಚಿತ್ತೋತ್ಸವಾಲಂಬನಂ ॥೩೭

ಪಾಡುತ್ತುಂ ಮಱದುಂಬಿಯೊಳ್ಗಡಣದಿಂ ಪಾರಾವತಕ್ರೀಡೆಯಂ।
ನೋಡುತ್ತುಂ ಪವಪಿಂ ವಿಚಿತ್ರರತಕೇಳೀವಾರ್ಧಿಯೊಳ್ಮೂಡಿ ಮು॥

---

೩೫. ಸಾಜ- ಸಾಜು ಎಂಬದರ ಷಷ್ಠಿ. ಶ.ದ. "ಸಾಜು ಪೋಷಣೇ, ರಸಾರ್ದ್ರೇಚ."

೩೬. ಅಳಿಪು- ಆಸೆ.

೩೮. ಮುಳ್ಕಾಡು- ಮುಳುಗಾಡು.

ಳ್ಕ್ಕುಡುತ್ತುಂ ಶತಪತ್ರಪತ್ರಶತದಿಂದಂ ಪತ್ರಭೃಂಗಂಗಳಂ । ಮಾಡು
ತ್ತುಂ ಪ್ರಿಯರಿಂತು ಪೊಚ್ಚುಗಳೆವರ್ನಿಚ್ಚಂ ಪುರೋದ್ಯಾನದೊಳ್ ॥
ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯುಂ ಪಿಕಕ್ಕೆ ಮಾ ।
ಮಿಡಿಗಳನಿಕ್ಕುತುಂ ನವಿಲನಾಡಿಸುತುಂ ಪೊಣರ್ವಕ್ಕಿಯುಂ ಪುಣಿ ॥
ಲ್ಗಿಡಿದು ಬಜಲ್ವಿನಂ ತೆಗುಳುತುಂ ಬನದೊಳ್ಬನವಂ ವಿಳಾಸನುಂ ।
ಪಡೆಯೆ ನಿರಂತರಂ ತೊಲಗದಿರ್ಪುದು ಪೌರವಿಲಾಸಿನೀಜನಂ ॥೩೯
ಗಣಿಕಾರತ್ಯಂತಸುಪ್ತಿಸ್ಖಲನಚತುರನಂಭೋಜಕಿಂಜಲ್ಕಸಂಚಾ ।
ರಣಶೀಲಂ ಪುಷ್ಪವಲ್ಲೀನಟನನಟನಂ ಸಂಚರಚ್ಚಂಚರೀಕ ॥
ಕ್ವಣನಜ್ಯಾಸಂಗಚಿತ್ತೋದ್ಭವಭುವನಜಯೋತ್ಪಾದನಪ್ರೌಢವೇಣಾ ।
ಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದುಪವನಸ್ವೈರಚಾರಂ ಸ
[ಮೀರಂ ॥೪೦

ಬನದಿಂ ಬನಕ್ಕೆ ನನೆಯಿಂ ।
ನನೆಗಲರಿಂದಲರ್ಗೆ ಮೊರೆದು ಬಿರಯಿಗಳೆರ್ದ ಪ॥
ವ್ವನೆ ಪಾಱಿ ಪಾಱುಗುಂ ಕಾ ।
ಮನಿಕಾಮಶಿಲೀಮುಖಂ ಶಿಲೀಮುಖ ನಿವಹಂ ॥೪೧

ಅಂತು ಸೊಗಯಿಸುವುಪವನೋಪಕಂಠದೊಳ್ ॥೪೨

ಕದಳೀಗರ್ಭದೆ ವಿರಚಿಸಿ ।
ಮದನಂ ಕುಪ್ಪಿಗೆಯನಲ್ಲಿ ಕುಳಿರ್ವಮರ್ದಂ ತೀ ॥
ವಿದನಡುಕಿಲಿಟ್ಟನವನೆನಿ ।
ಸಿದುವೆಸೆವಸಿತೇಕ್ಷುದಂಡಮಂಡಲಿ ಬನದೊಳ್ ॥೪೩

---

೪೩. ಅಡಕಿಲಿಟ್ಟಂ- ಒಂದರ ಮೇಲೆ ಒಂದನ್ನು ಸಾಲಾಗಿಟ್ಟನು..
ಪ್ರ. ಅಡಕಿಲ್ಮಡಕ್ಕೆ, ಅಡಕಿಲ್ವಾಸು.

[೧]ಪೊಗಱ್ ದೇಸೆಗೆ ದೇವರಿಂದುಕಳೆಯಂ ನಿಸ್ಸಾರಮಂ ತಮ್ಮಪ ।
ತ್ತುಗೆಯಿಂಮ ಪದಿನಾಱಿನಲ್ಲಿ ಸವಿವರ್ತಮ್ಮಲ್ಲಿ ಪುಲ್ಗರ್ಬನಾ ॥
ವಗವೊಂದುಂ ಸವಿಮತೆ ತಾಮೆ ಜಗಕೆಲ್ಲಂ ದೇವರೆಂಬಂತೆ ತೀ ।
ಪುಗುಮುತ್ತಾನಿತಮಿಕ್ಷುಯಂತ್ರನಿನದಂ ದಿಕ್ಕಾಮಿನೀಕರ್ಣಮಂ ॥

[೨]ಜಾಗದ ಬಲ್ವಲಾದ ಪೊನಲಿಂ [೩]ಬಳೆದೊಪ್ಪುವ ನಾಳಿಕೇರದಿಂ ।
ಪೂಗವನಂಗಳಿಂದೆಲೆಯ ಬಳ್ಳಿಗಳಿಂ ತೆಱಪಿಲ್ಲೆನಲ್ಬೆಡಂ ॥
ಗಾಗೆ ಬಹಿಸ್ತಟಂ ಪುದಿದ ತಾವರೆವಳ್ಳಿಯ ತಳ್ಪಿನಿಂ ಪಸು ।
ರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೆಱೆಗಳ್ನರಂತರಂ ॥೪೫

ನನೆಯಂಬಿನ ತಾಯ್ವನೆಯೆನೆ ।
ನನೆವಿಲ್ಲಾಗರಮಿದೆನೆ ಮನೋಜನ ಸಮ್ಮೋ ॥
ಹನವಿದ್ಯಾದೇವತೆಯರ ।
ಮನೆಯೆನೆ ಪೂದೋಂಟಮೊಪ್ಪುಗುಂ ಪೊಱವೊಱಲೊಳ್ ॥

ಮುದ್ರಿಸಿ ದೆಸೆಯಂ ಚೆಲ್ವಿ ।
ನ್ಮುದ್ರಿತಮೆನೆ ತಮಗೆ ಜೀರಕಾದ್ರವನವಹಾ ॥
ರಿದ್ರಕವಾಟೋತ್ಕರಮು ।
ನ್ನಿದ್ರಿತಕಮಲಾಕರಂಗಳಿಂ ಸೊಗಯಿಸುಗುಂ ॥೪೬

ಅನಿತಿನಿತೆಂದು ಲೆಕ್ಕಮಿಡಲಾನಱಿಯೆಂ ಬನಮಂ ಲತಾನಿಕೇ ।

---

೪೫. ತೆಱಪು- ಅವಕಾಶ.
ತಳ್ಪು - ಗುಂಪು; ಪ್ರ. “......ಇಂದ್ರಚಾಪಂ ॥ ಗಳ ತಳ್ಪಿಂ
ದೊಪ್ಪಮಂ ತಾಳ್ದಿದ ಘನಸಮಯಂ ...॥ ” ಕಾದಂ. ೨೬
೪೬. ಜೀರಕೆ- ಜೀರಿಗೆ. ನವಹಾರಿದ್ರಕೆ- ಹಸಿಯುರಸಿನ.

---

೧. ಪೊಗಸ್ವರ್ದೇಸಿಗೆ. ಕ॥ ೨. ಚಾಗವ. ಗ॥ ೩. ಬಗೆದೊಪ್ಪುವ. ಗ॥

ತನಕೃತಕಾದ್ರಿಯಂ ಪುಳಿನಮಂ ಕೊಳನಂ ನೆಱೆ ಬಲ್ಲನೊಂದನಾ ॥
ನನಿತಱೊಳಂ ವಿಯೋಗಿಗೆ ಕಟಾಕ್ಷಿಸುವಂ ದಯೆಗೆಯ್ವನುನ್ನತ ।
ಸ್ತನಪರಿರಂಭಣಪ್ರಣಯಿಗಂಗಭವಂ ನಿಜಶಾಂತದದೃಷ್ಟಿಯಿಂ ॥೪೮

ಅಂತು ಸೊಗಯಿಸುವ ಪೊಱವೊೞಲ ವಿಲಾಸಮಂ ನೋೞ್ಪ ವನವಿಳಾಸಿನಿಯರ ಸಿರಿಯ ನಗೆಗಣ್ಗಳೆನಿಪ ಕಮಲಕುವಲಯವನಂಗಳಂ ಮನಂಗೊಳಿಸಿ ॥೪೯

ಜಳವಿಹಗಬಹಳಕೋಳಾ ।
ಹಳದಿಂವೆಣ್ದೆಸೆಯೊಳಿರ್ದ ದೆಸೆಯಾನೆಗಳಂ ॥
ಜಳಕೇಳಿಗೆ ಕರೆವಂತಿರೆ ।
ಜಳಖಾತಿಕೆ ಬಳಸಿ ಚೆಲ್ವನೊಳಕೊಂಡಿರ್ಕುಂ ॥೫೦

ಪರಿಖಾವಳಯಮಲಂಘ್ಯಂ ।
ಪರಿವೇಷ್ಟಿಸೆ ಕಡೆಯಲೆಂದು ಪಾಲ್ಗಡಲೊಳ್ ತಂ ॥
ಧರಿಸಿದ ಮಂದರಗಿರಿಗೇಂ ।
ದೊರೆಯಾದುದೊ ಪೊನ್ನಕೋಂಟೆ ವಿಕಟಾಟ್ಟಾಳಂ ॥೫೧

ಮುಗಿಲಟ್ಟಳೆಗಳ ಹರಿನೀ ।
ಲಗಭಸ್ತಿಧ್ವಾಂತಪಟಲದೊಳ್ ಮುನ್ನೆಂದುಂ ॥
ಮುಗಿದಱಿಯದವಾಪುರದೊಳ್ ।
ಮುಗಿದುವು ದಿನಕರನ ಕೈಯ ಕೆಂದಾವರೆಗಳ್ ॥೫೨

ಎನಿತೊಳವು ನೆಗೞ್ತೆಯ ಪುರ ।
ವನಿತುಮನವಯದಿನಾಪುರಂ ಗೆಲ್ದೊಡೆ ಪೊ ।

೫೦. ಖಾತಿಕೆ- ಕಂದಕ, ಗಾದಿಗೆ ಎಂಬದರ ತತ್ಸಮ.

ವಿನ ಮಱಿ ಕೊಂಡವ್ರುವೆನೆ ಮು ।
ತ್ತಿನೋಳ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ ॥೫೭

ಅಂತಲಂಘ್ಯವಾಗಿ ಲವಣಾರ್ಣವದ ವಜ್ರವೇದಿಕೆಯುಂತೆ ನೀರ್ಗಾದಿಗೆಯಿಂದೆಸೆವ ಕೋಂಟೆಯುಂ ಕುಳಾಚಳದಂತೆ ನಭಮನಳ್ಳಱಿವ್ರುತ್ತುಂಗಚೈತ್ಯಕುಲದಿಂ ಪದ್ಮಾದಿಸರೋವರಂಗಳಂತೆ ಮಣಿಮಯಸೋಪಾನಂಗಳಿಂ ಮನಂಗೊಳಿಸುವ ಗೃಹಸರೋವರಂಗಳಿಂ ಜನಪದಂಗಳಂತೆ ಪಿರಿಯವಾದ ಪುರವರ್ಗಂಗಳಿಂ ಮಹಾನದಿಗಳಂತನವರತಜನಪ್ರವಾಹದಿಂ ಸೊಗಯಿಸುವ ಬೀದಿಗಳಿಂ ಕನಕಗಿರಿಗಳಂತೆ ಕೂಟಕೋಟಿಗಳಿಂ ಪೊಳೆವ ಪೊನ್ನಮಾಡಂಗಳಿಂ ತಾರಾಚಲಂಗಳಂತೆ ದೆಸೆಯುಂ ಧವಲಿಸುವ ದವಳಾರಂಗಳಿಂ ಅಕೃತ್ರಿಮವನಂಗಳಂತೆ ಸಾರ್ವರ್ತುಕಮೆನಿಪ ಗೃಹವನಂಗಳಿಂ ನಿರತಿಶಯಮಿದೆರಡನೆಯ ಜಂಬೂದ್ವೀಪಮೆಂಬ ಮಹಿಮೆಯಂ ತಳೆದು ಶೋಭೆಗೆ ಕುಲಭವನಮುಂ ಮಣಿಗೆ ಕಣಿಯುಂ ವಿಲಾಸಿನೀಜನಕ್ಕೆ ಜನ್ಮಾವಾಸಮುಂ ವಿಷಯಸುಖಸುಧಾರಸಕ್ಕೆ ಸೇತುವುಂ ಪ್ರಸಿದ್ಧವಿದ್ಯಾದೇವತೆಗೆ ಆದಿಪೀಠಮುಂ ಸತ್ಪುರುಷಗುರ್ಣೋತ್ಪತ್ತಿಭೂಮಿಯುಂ ಧಾರ್ಮಿಕಜನಕ್ಕೆ ಅಭ್ಯುದಯಪದಮುಂ ಯತಿಪತಿಸಮೂಹಕ್ಕೆ ಸಮಾಧಿಸ್ಥಾನಮುಂ ಜಾತ್ಯಶ್ವಕ್ಕೆ ಕಮಲಭವಬಾಷ್ಪಜಲಮುಂ ಮದಗಜಕ್ಕೆ ಜನ್ಮಾಟವಿಯುಮೆನಿಪ ಪುರವರದ ಸೂಳೆಗೇಱಿಯೊಳ್ ॥೫೮

೫೮. ಅಳ್ಳಿಱಿವ- ನಡಗಿಸುವ; ಧಾ. ಅಳ್ಳಿಱಿ ಸ್ಪಂದನೇ.
ಜನಪ್ರವಾಹ- ಜನಗಳಂತಿರುವ ಪ್ರವಾಹ; ಪ್ರವಾಹದಂತಿರುವ ಜನ.
ದವಳಾರ- ದ್ಭ. ಧವಳಾಗಾರ; ಬೆಳ್ಳಿಮಾಡ ಎಂಬದರೊಡನೆ ಹೋಲಿಸಿ.
ಜಾತ್ಯಶ್ವಕ್ಕೆ ಕಮಲಭವಬಾಷ್ಪಜಲಮುಂ- ಕೃತಯುಗದ ಆದಿಯಲ್ಲಿ ಬ್ರಹ್ಮನು ಜಗತ್ತನ್ನು ಸೃಷ್ಟಿಸಿದ ಬಳಿಕ ಯಜ್ಞವನ್ನು ಮಾಡಿದನು.

ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದಿಂತಾ |
ಪೆಂಡಿರ ರೂಪುಮಂ ಸೊಬಗುಮಂ ಧನಮುಂ ಪೆಸರ್ಗೊಳ್ವುದೇ* ಮ
ನಂ । ಗೊಂಡಳನಂಗನಂ ರತಿಯೆನಲ್ ಚಮರಿತ್ರಣವಾಕೆಗೆಂದು ಕ |
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀಜನಂ ‖ ೫೫

ಆವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ವರಾವಂ |
ದೇವವ್ರತಖ್ಯಾತಿಯನವನನವಲ್ಮೆಬ್ಬಿಪ್ಪುದೆಂದಾಪುರಸ್ತ್ರೀ ‖
ಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತನಾಟಂ |
ದಾವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಿಂ ಸ್ಮರಂ ನಂದೆ
[ವ್ರೊಯ್ದಂ ‖ ೫

ಮದನವಿಕಾರಮಂ ಮೊಱೆವ ಪಾರಿವಮಿಲ್ಲದ ರಾಜಕೀರಮಿ |
ಲ್ಲದ ನೆಲೆಮಾಡಮಿಲ್ಲದ ನೆಗೞ್ತೆಗೆನೇಱಿದ ಪೊನ್ನಘಂಟೆಯಿ ‖
ಲ್ಲದ ತಳಿರುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಿಗಾಣರಿ |

---

ಆ ಯಜ್ಞಕುಂಡದಲ್ಲಿ ಅವನ ಕಣ್ಣೀರು ಸಿಡಿದು ಬೀಳಲು, ಎರಡು ಕುದುರೆಗಳ
ಹುಟ್ಟಿದವು. ಎಂದು ಶಾಲಿಹೋತ್ರನ ಅಶ್ವಶಾಸ್ತ್ರದಲ್ಲಿದೆ.

“ಚತುರಾಸ್ಯನಶ್ರುಧಾರಾ |
ಕೃತಿಯೊಳಗುದಯಿಸಿದುವಾಸ್ಯಸಂಭವನಾಖ್ಯಂ ‖
ಹುತವಹವಾಮುಖದಿಂದಶ್ವ |
ಪ್ರತತಿಗಳುದಯಿಸಿದುವಗ್ನಿಮುಖತುರಗಂಗಳ್ ‖” ಅಶ್ವವೈದ್ಯ.

೫೫. ಊರ್ವಶಿಯಲ್ಲಿ ಅನುರಕ್ತನಾದ ಇಂದ್ರನ ಶಚಿಯಂತೆಯೂ, ಗಂಗೆಯಲ್ಲಿ ಅನುರಕ್ತನಾದ ಈಶ್ವರನ ಪಾರ್ವತಿಯಂತೆಯೂ, ಗೋಪಿಯರಲ್ಲಿ ಅನುರಕ್ತನಾದ ಕೃಷ್ಣನ ರುಕ್ಮಿಣಿಯಂತೆಯೂ, ತಾವು ಕುರೂಪಿಗಳಲ್ಲವೆಂದೂ ಅನಂಗನ ಮೋಹಿಸಿದ ರತಿಯಂತೆ ತಾವು ಮೂಢರಲ್ಲವೆಂದೂ ನಗುತ್ತಿದ್ದರು.

೫೬. ತೆಸೆತ್ತು- ತೊಬ್ಬು, ಆನೆ.

೫೭. ಗೊಟ್ಟಿ- ದ್ಭ. ಗೋಷ್ಠೀ. ಗಾಣ- ದ್ಭ. ಗಾಯನ, ಗಾಯಕನು.

ಲ್ಲದ ಕಡೆವಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇಱಿಯೊಳ್ ॥೩೭

ಅವಿಲಾಸಿನೀನಿವಾಸಕ್ಕೆ ಆಸನ್ನಮೆನಿಪ ವಿಪಣಿಮಾರ್ಗದೊಳ್ ॥

ತರಳಕಟಾಕ್ಷಮಾಲೆಯೊ ನವೋತ್ಪಲಮಾಲೆಯೊ ಕಯ್ಯ ಮಾಲೆಯೊ । ಸಿರಿಸದ ಮಾಲೆಯೊಳ್ತೊಡರ್ದ* ಮಾಲೆಯೊ ವಿಸ್ಮಯಮೆಂದು ನೋಟ್ಪ ನೀ ॥ ಅರ ಸೊಬಗಂ ಮೊದಲ್ಗಿಡಿಸಿ ತೋಳ ಮೊದಲ್ನನೆವೂವನೆತ್ತುವಂ । ತಿರೆ ನನೆಯಂಬುಗಳ್ಗೆ ಚೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ ॥೪೯

ಪರಿಮಳಲೋಭದಿಂ ಮುಸುಱಿ ಮುತ್ತುವ ತುಂಬಿಗಳೊಳ್ಗುರುಳ್ಗಳೊಳ್ । ಬೆರಸುವಿನಂ ಮುಗುಳ್ಚುವ ದಳಂಗಳೊಳಂ ನೞುಸುಯ್ಯ ಕಂಪುಗಳ್ ॥ ಬೆರಸುವಿನಂ ಕದಕ್ಕದಿಸಿ ಪೆರ್ಮೊಲೆಗಳ್ ಬಳಮುರ್ದನಂಗಜಂ। ಗರೆವವೊಲೀಳೆಸಾಂದರೆವರಿಂಬಳೆವಟ್ಟರೆ ಘುಟ್ಟವಳ್ತಿಯರ್ ॥೬೦

ಧನದ ಪವಣಱಿಯುರೆನಿಸಿವ ।
ಧನಪತಿಗಳೆ ಪುರದ ಪರದರವರಂ ನೋಡಲ್ ॥
ಧನಪತಿ ನಿರ್ಧನನದಱಿಂ ।
ಧನಪತಿಗಾಕ್ಷೇಪವಾಚಕಂ ತನ್ನಾಮಂ ॥೬೧

ಕವಳಿಯ ತಮಾಳದಸುಕೆಯ ।
ಪೊದಱಿನಿಸುವನೇಕರತ್ನಮಯಭೂಮಿಗಳಿಂ ॥

---

೪೯. ನೀಱ- ಸೌಂದರ್ಯಶಾಲಿ. ಮೊದಲ್ಗೆಡಿಸಿ- ನಿರ್ಮೂಲವಾಡಿ.

೬೦. ಬಳಮುರ್ದು- ಅಂಕೆದೌಷಧಂ. ಶ.ದ.ಪು. 404
ಈಳೆ- ಇದರ ಭೇದ, ಹೇರೀಳೆ ಕಿತ್ತೀಳೆ.
ಸಾಂದು- ಹೊಸಗನ್ನಡದಲ್ಲಿ ಸಾದು.
ಘುಟ್ಟವಳ್ತಿಯರ್- ಗಂಧವನ್ನು ಮಾಡುವ ಸ್ತ್ರೀಯರು.

ಐದು ಗೃಹವಿದು ಗೃಹವನವೆಂ ।
ಬುದನಾರ್ಗಂ ನಿಟ್ಟಿಸಲ್ಕೆ ಬಾರದು ಪುರದೊಳ್ ॥೬೦

ಆಪುರಸ್ತ್ರೀಯ ರತ್ನಕಂಠಿಕಾಮಯೂಖಲೇಖಾವಿಲಾಸಮಂ ತಳೆದು॥

ಪರಿಖೆಯು ತೆರೆವ್ರೋಯ್ಲಿಂದಂ ।
ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪ್ರೊಂದಾ ॥
ವರೆಯ ರಜದಂತೆ ನೃಪವಮಂ ।
ದಿರವುಂ ಬಳಸಿರ್ದ ಪ್ರೊಮ್ಮಗಿಲ್ಸೊಗಯಿಸುಗುಂ ॥೬೪
ಶರದಭ್ರಂಗಳ್ತಣ್ಣಾ ।
ವರಿಸಿರ್ದುವು ನೀಳನಗಮನೆನೆ ಮದಜಳನಿ ॥
ರ್ಝರವಾರಣಾಳಿ ಸೊದೆವಳ ।
ದರಮನೆಯುಂ ಬಳಸಿದಾನೆಸಾಲೆಗಳೆಸೆಗುಂ ॥೬೫
ಪ್ರೂಜಾಸಿಂಧುರಮದಧಾ ।
ರಾಜಲದಿಂ ತೀವಿದಗಳ ತಡಿವಿಡಿದಲರ್ದಂ* ॥
ಭೋಜಕ್ಕೆ ಮೊಗಸಿದಳಿ ನೀ ।
ರಾಜನಕುಸುಮವನೆ ಮುಸುಱಿ ಮೊಱೆಯುತ್ತಿರ್ಕುಂ ॥೬೬

ಆವುಗಿಲ ಗವನಿಯಿಂದೊಳಗೆ ॥೬೭

ಎಳಸಿದುವು ತುಹಿನಕರಮಂ ।
ಡಳಮಂ ತೀವ್ರಾತಪಕ್ಕೆ ಸುಗಿದಿನನ ಹಯಾ॥
ವಳಿ ಸಂದೆಯುಮೇನೆನಿಪುವು ।
ಪಳುಕಿನ ಮಂದುರದೊಳಿರ್ದ ಜಾತ್ಯಶ್ವಂಗಳ್ ॥೬೮

---

೬೪. ಮುಗಿಲ್-ಪ್ರಾಕಾರ,ಸುತ್ತಿನ ಗೋಡೆ. ಪಂ.ರಾ. ೮.೪.೧೩೦; ೮.೫.೩೪. ಗದ್ಯ. ೬೭. ಗವನಿ- (?)

ಅರಸಿಯರ ಬಳ್ಳಿಮಾಡದ ।
ಕರುಮಾಡದ ಮಾಡವಿರ್ಕೆ ಬಾಗಿಲ್ವಾಡಂ ॥
ಬರೆಯಲ್ಕೆ ಚೇರಘುಟ್ಟಗ ।
ಮರಿದೆನಿಪುದು ಘಟಿತರತ್ನಘಂಟಾಜಾಲಂ ॥೯

ಅಡರಿ ಕಟಾಕ್ಷಚಂದ್ರಿಕೆ ಪಳಂಚೆ ಗವಾಕ್ಷದ ಚಂದ್ರಕಾಂತದಿಂ ।
ಬುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನಘರ್ಮವಾರಿಯೊಳ್ ॥
ತಡತಡವಾಗೆ ಮಾಧವಿ ಮುಗುಳ್ತು ಪೊಲಿರ್ಪೆಳವೆಂಡಿರಿಂದಮೇಂ ।
ಪಡೆದುವೊ ಲೀಲೆಯಂ ಮಣಿಮರೀಚಿವಿಚಿತ್ರತನಾಟ್ಯಶಾಲೆಗಳ್ ॥೨೦

ಕುಂದದ ರುಚಿ ತಮಗಳವಡೆ ।
ಕುಂದದ ನವನಿಧಿಗೃಹಾಳಿ ಸಿರಿಯಂ ನೋಡಲ್ ॥
ಬಂದಮರ್ದಿ*ನ ತಾಯ್ಗುಡಲೆಂ ।
ಬಂದಮನುಕ್ಕಂದವಾಗಿ ತಳೆದೆಸೆದಿರ್ಕುಂ ॥೨೧

ಮಣಿಕುಟ್ಟಮದಿಂ ಮಣಿತೋ ।
ರಣದಿಂ ಮಣಿಕಳಶದಿಂ ತಮಸ್ತೋಮನಿವಾ ॥
ರಣದೆಡೆಗಳಿಂ ಗೃಹಗ್ರಾ ।
ಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ ॥೨೨

ಗಿಳಿ ಗಿಳಿವೆಣ್ಗೆ ಪೂಗಫಳಮಂ ಕಳಹಂಸಿಗೆ ಹಂಸನಬ್ಜಕಂ ।

---

೯. ಚೇರಘುಟ್ಟ ಎಂಬುವನು ದೇವತೆಗಳ ಚಿತ್ರಗಾರನೆಂದು ತೋರುತ್ತದೆ.

"ಬರೆವೊಡೆ ಚೇರಘುಟ್ಟ ಕರುವಿಟ್ಟಪನೆಂಬೊಡೆ ಪದ್ಮಯೋನಿ ಕಂ ।
ಡರಿಪೊಡೆ ವಿಶ್ವಕರ್ಮನಱಿಗುಂ ನೆಱೆಯಂ ಪೆಱನಿಂತಿದಂ ಸುರೇ ॥
ಶ್ವರಭವನಕ್ಕೆ ತಾನೆ ಪಡಿಚಂದಮಿದೆಂಬಿನಮಚ್ಚರಕ್ಕೆ ತಾ ।
ಯ್ಗರು ಕರುಮಾಡಮೊಪ್ಪುವುದಳಂಕೃತಸಪ್ತತಳಂ ನಿರಾಕುಳಂ ॥"

ಗುಣವರ್ಮನ ಪುಷ್ಪದಂತ ಪುರಾಣಂ.

ದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ ॥ ತಳೆದು ವಿಳಾಸಮಂ ತಳೆದ ರಾಣಿಯ ವಾಸದ ಬಳ್ಳಿಮಾಡದು । ಜ್ಜ್ವಳಮಣಿ ಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವಭಿತ್ತಿಯಂ ॥೩೩

ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನತಿಂಗಣಿಗೆಯ ನೆಳಲ ತುಱುಗಲಿಂ ವಿರಾಜಿಸುವ ಪೂಜಾಗೃಹದಿಂದಖಿಲಪೂಜಾರ್ಥಿಗಳ ನಿತ್ತಬಸ್ಸಿಮೆಂದು ಕೈಸನ್ನೆಗೆಯ್ವಂತೆ ಮಿಳಿರ್ವ ನೇತ್ರವಟ್ಟೆಯ ಜಾಗದ ಪಳಯಿಗೆಯ ತುಱುಗಲಿಂ ತಳಿರ್ತ ಕಲ್ಪಲತೆಯ ಕಾವಣದಂತಿರ್ದವಿತರಣಮಣಿಮಂಡಪದಿಂ ಸೂತ್ರಿಸಿದ ಚಿತ್ರಪುತ್ರಿಕೆಯ ಲಾವಣ್ಯರಸಮೊಸರ್ವಂತೆ ಚಾಮರದೆಲರಲಪಿನೊಳ್ಗುಱುವ ಸಣ್ಣಧಾರೆಯಂ ಸೂಸುವ ಧಾರಾಗೃಹದಿಂ ಮನಸಿಜನ ವಿಲೋಕನಾಕರ್ಷಣಸ್ಥಾನದಂತೆ ಪಂಚಾಂಡಕಪರಿಣತಿಯಂ ದೃಷ್ಟಶ್ರುತಾತ್ಮವಿದ್ಧದೊಳ್ಮೆಱೆವ ರಸಚಿತ್ರದೊಳಂ ಷಡ್ಜಾತೀಯಪಂಚವಿಧಪತ್ರಗತಿಯೊಳಮತಿಶಯಮಾದ ಚಿತ್ರಶಾಲೆಯಿಂ ಮನಂಗೊಳಿಸಿ ವಿಶಾಲಹರಿನೀಲಶಿಲಾಮರೀಚಿಜಾಲಜಟಿಲಿತಜಗತೀಮನೋಹರಮುಂ ಕನಕಮಯಸೋಪಾನರುಚಿವಿತಾನತಟಿದ್ವಲ್ಲರೀವಲಯಿತಮುಂ ಮರಕತರತ್ನತೋರಣಮರೀಚಿಮೇಚಕಿತನಭೋವಿಭಾಗಮುಂ ಚಂದ್ರಕಾಂತೋಪಲಭಿತ್ತಿಭಾಗಭಾಸುರಪ್ರಭಾಚಂದ್ರಕಬಳಚರ್ಚಿತದಿಗ್ವಧೂವದನಮುಂ ಪದ್ಮರಾಗರಚಿತದ್ವಾರಶಾಖಾಮಯೂಖಪಲ್ಲವೋಲ್ಲಸಿತಮುಮವಕ್ರಶಕ್ರಚಾಪವಿಲಾಸೋಪಹಾಸಿತರತ್ನಸ್ತಂಭರಮಣೀಯಮುಂ ವಿಚಿತ್ರಪುತ್ರಿಕಾಕಲಿತಮತ್ತಾಲಂಬ

---

೩೪. ನೇತ್ರವಟ್ಟೆ- ಸಣ್ಣಬಟ್ಟೆ, ದುಕೂಲ.
ತಿಂಗಣಿಗೆ, ಪಂಚಾಂಡಕ- (?) ಮತ್ತಾಲಂಬ- ಕಟಕಟೆ.

ಸಂಭೃತಮುಂ ಪಂಚರತ್ನಕಲಶಸಂಚಯಾಂಶುಪಟಲಪತಾಕಾಚ್ಛನ್ನಮುಮೆನಿಸಿ ||೨೪

ನಯನಮನೋಹರಂ ಮನುಜನಿರ್ಮಿತಮಲ್ಲದು ಮೇರುಸಪ್ತಭೂ |
ಮಿಯನೊಳಕೊಂಡು ಸನ್ನಿಹಿತಮಾದುದು ಸನ್ನಿದಮಾದ ಭೋಗಭೂ||
ಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬ ನಿ |
ಶ್ಚಯಮನೊಡರ್ಚೆ ವಿಸ್ಮಯರಸಾಕರಮಾಕರುಮಾಡಮೊಪ್ಪುಗುಂ||

ಕರು ಕರುವಿಂಗೆ ಕಣ್ದೆಱವಿ ಕಲ್ವೆಸದೋಜೆಗೆ ನಚ್ಚನಚ್ಚು ಕಂ |
ಡರಣೆಗೆ ಮಂಡನಂ ಮರವೆಸಕ್ಕೆಱವಟ್ಟೆಱಕಕ್ಕೆ ಜೌವನಂ ||
ಪರಿಣತಿ ಚಿತ್ರವಿದ್ಯೆಗೆನಲಲ್ಲದೆ ಚಿತ್ರಿಸಿಕೊಂಡು ಬೇಱ್ ಬಿ |
ತ್ತರಿಪ್ಪುದು ಮೊಗ್ಗೆ ಸಪ್ತತಳರಮ್ಯಮನಾಧರಣೀಶಹರ್ಮ್ಯಮಂ ||

ಬಾಳತೃಣಂಗಳೆಂದೆಳಸುಗುಂ ಪಸು*ರ್ಗಲ್ಗಳ ಕಾಂತಿಯಂ ಮೃಗೀ |
ಬಾಳಕನಲ್ಲಿ ಕೆಂಬರಲ ಕೆಂದಳಿರಂ ಬಿಸಿಲೆಂದು ನಟ್ಟರುಳ್ ||
ಮೇಳಿಸುಗುಂ ರಥಾಂಗಮೆಳಲಿಕ್ಕಿದ ಮುತ್ತಿನ ಸೂಸಕಂಗಳಂ |
ಬಾಳಮೃಣಾಳಮೆಂದೆ ಕ*ರ್ದು[೧]ಕಲ್ಬಗೆಗುಂ ಕಳಹಂಸಪೋತಕಂ|| ೨೭

---

೨೫. ಭವನಾಂಗಭೂಜ- ಇದು ಕೇಳಿದ ಮನೆಯನ್ನು ಕೊಡುವ ಕಲ್ಪವೃಕ್ಷ; ಜೈನಪುರಾಣಪ್ರಸಿದ್ಧ. ವಿಗುರ್ವಣೆ- ಆಧಿಕ್ಯ.

೨೬. ಕರು- ಎರಕದ ಅಚ್ಚು. ಕಣ್ದೆಱವಿ- ನೇತ್ರೋನ್ಮೀಲನ. ಕಲ್ವೆಸ=ಕಲ್+ಬೆಸ, ಕಲ್ಲಿನ ಕೆಲಸ. ಕುಸುರಿವೆಸ, ಮರವೆಸ ಇದರಂತೆಯೇ. ಮೊಗ್ಗೆ- ಸಾಧ್ಯವೇ ; ಶಾಂತಿಪುರಾಣದಲ್ಲಿ—

ಪ್ರ. " ಬಹುಪೋಷಣದಿಮ್ಮಾವಿನ |
ಸಹಕಾರದ ಸೊ-ಯು ಸೋನೆ ಬೆಳೆಯಿಸೆ ಬೆಳೆಗುಂ ||
ಮಹಿಯೆನೆ ಬಣ್ಣಿಸುವ ಪಿತಾ |
ಮಹಂಗಮುಱಿದೆಗ್ಗ ಮೊಗ್ಗೆ ನಿನಗಮದೆನಗಂ || "

---

[೧] ಕದುರ್ಕಲ್ಪಿಡಿಗುಂ. ಕ||

ನೆಲೆವಾಡದ ಪೊಸದೇಸೆಯು ।
ನೆಲೆವಾಡದ ಸುರವಿಮಾನಮೆಯ್ದ್ದಲಱಂ ಕಿ ॥
ಱ್ನಲೆಯಾಡುವಿವಱ ತೆಱದಿಂ ।
ನೆಲೆಯಾಡುವೆ ಸಕಲಜನದ ಕಣ್ಗಂ ಮನಕಂ ॥೨೮

ಬೆರಲಂ ಮಿಡಿಯಿಪ ಪುಳಕಾಂ ।
ಕುರಮಂ ಪುಟ್ಟಿಸುವ ನೋಡೆ ತಲೆದೂಗಿಪ ಸುಂ ॥
ದರಮೆನಿಪ ಕುಸುರಿವೆಸದಿಂ ।
ದರಮನೆ ಮಾಳ್ಪುದು ಮಯಂಗಮತಿವಿಸ್ಮಯಮಂ ॥೨೯

ಆರಾಜಾಲಯವಲ್ಲಭಂ ವಿತರಣಕ್ಕರ್ಥಾರ್ಥಿಗಳ್ ಸತ್ಕ್ರಿಯಾ ।
ಪ್ರಾರಂಭಕ್ಕೆ ಸಮಸ್ತಮಂಗಳಮುಹೂರ್ತಂಗಳ್ ಜಸಕ್ಕಾಸೆಗಳ್ ॥
ಚಾರಿತ್ರಕ್ಕೆ ಜಿನೋಪದಿಷ್ಟವಿಧಿವಾಕ್ಯಂಗಳ್ ಗುಣವ್ಯಾಪನ ।
ಕ್ಕೇರೇೞುಂ ಭುವನಂಗಳೆಯ್ದ್ದವೆನಿಪಂ ಸಾಹಿತ್ಯವಿದ್ಯಾಧರಂ ॥೩೦

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ ಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀ
ಮದಭಿನವಪಂಪ ವಿರಚಿತಮಪ್ಪ ಮಲ್ಲಿನಾಥ ಪುರಾಣದೊಳ್
ವೀತಶೋಕ ಪುರವರ್ಣನಂ
ದ್ವಿತೀಯಾಶ್ವಾಸಂ ಸಂಪೂರ್ಣಂ.

---

೨೨. ಕೆಂಬರಲ್- ಕೆಂಪುಕಲ್ಲು, ಕೆಂಪು.
೨೮. ದೇಸೆ- ಸೌಂದರ್ಯ.
೩೦. ಅರ್ಥಿಗಳ್, ಮುಹೂರ್ತಂಗಳ್, ಆಸೆಗಳ್, ವಾಕ್ಯಂಗಳ್ ಎಯ್ದುವು.
ಕ್ರಿಯಾಪದದ ಲಿಂಗವಿಚಾರದಲ್ಲಿ ಶ.ದ. ೧೪೧ ನ್ನು ನೋಡಿ.

## —ತೃತೀಯಾಶ್ವಾಸಂ—

ಶ್ರೀಯುಂ ಧರೆ *ಪೊಗೞ್ವಿನೆಗಂ ।
ನ್ಯಾಯಾರ್ಜಿತಮೆನಿಸಿ ಪಡೆದು ತಕ್ಕೆಡೆಗಱಿದೊ ॥
ಲ್ದೀಯುತ್ತುಮಮಲಕೀರ್ತಿ ।
ಶ್ರೀಯನುಪಾರ್ಜಿಸಿದುದಾತ್ತನಭಿನವಪಂಪಂ ॥೧
ಈವಲ್ಲಭನಂ ಪಡೆದ ಮ ।
ಹೀವಲ್ಲಭೆ ನೋಂತಳೆನಿಸಿದರಿನೃಪಮುದವಿ ॥
ದ್ರಾವಣವಿಜಯಭುಜಂ ವಸು ।
ಧಾವಿಶ್ರುತನೃಪಗುಣಾಶ್ರಯಂ ವೈಶ್ರವಣಂ ॥೨
ಆಶ್ರಯಮಿದೊಂದೆ ಸಾಮ್ರಾ ।
ಜ್ಯಶ್ರೀಗೆಂದಧಿಕಧರ್ಮಪರನಾದಂ ವ ॥
ರ್ಣಾಶ್ರಮಶಿಕ್ಷಾಪ್ರವಣಂ ।
ವೈಶ್ರವಣಂ ಧರ್ಮಶಾಸ್ತ್ರದತ್ತಶ್ರವಣಂ ॥೩
ಪಡೆವೆಡೆಯೊಳ್ಪಡೆದುಂ ಕುಡು ।
ವೆಡೆಯೊಳ್ಕೊಟ್ಟುಂ ಜನಾನುರಾಗಮನರಸಂ ॥
ಪಡೆದುಮಣಂ ತಣಿಯದೆ ಕ ।
ಣ್ಬಡೆದಂ ನೀತಿಗೆ ಜಸಕ್ಕೆ ಜೀವಂಬಡೆದಂ ॥೪
ಅವಿರುದ್ಧಮಿದೆಂಬಿನಮನು ।
ಭವಿಸುವನಿಂದ್ರಿಯಸುಖಂಗಳಂ ಮಱುಮಂ ಮೀ ॥
ಱವು ತನ್ನನವೆಂಬನ್ನೆಗ ।
ಮವನೀಶ್ವರನಪ್ಪುಕೆಯ್ದನಿಂದ್ರಿಯಜಯಮಂ ॥೫

ಅತಿನಿಶಿತಮತಿ ಹಿತಾಹಿತ ।
ವಿತರ್ಕನಿಪುಣಂ ಸಮಸ್ತಸಾಹಿತ್ಯಕಲಾ ॥
ಸತಿರಮಣಂ ವೈಶ್ರವಣಂ ।
ಶ್ರುತನಾದಂ ಭೂಪರಿನ್ನರಾರೆಂಬಿನೆಗಂ ॥೬

ರಾಜಸಸಾತ್ವಿಕಮೆಂಬೀ ।
ರಾಜಗುಣಂ ವಿಷವಿಷಾಪಹಾರಂಗಳವೊಲ್ ॥
ರಾಜಿಸೆ ವಿಷವೋರಗನಂ ।
ತೀಜಗತೀತಳಮನಾಂತನವನೀಕಾಂತಂ ॥೭

ಗೆಲಲಾಱವೆ ಕಾಮಕ್ರೋಧ !
ಧಲೋಭಮದಮಾನಹರ್ಷಮರಿಷಡ್ವರ್ಗಂ ॥
ಗೆಲಲೊರ್ವನೆ ನೆಱೆವನೆ ರಿಪು ।
ಲಲನಾವೈಧವ್ಯದಿವ್ಯದೀಕ್ಷಾಗುರುವಂ ॥೮

ತನ್ನ ಸಿರಿ ತನ್ನ ವಿಭವಂ ।
ತನ್ನುನ್ನತಿ ತನ್ನ ಸಂತಸಂ ಪರಿಜನದೊಳ್ ॥
ಸನ್ನುಹಿತವಾಯ್ತು ತಕ್ಕುದೆ ।
ಪೊನ್ನಾಗದೆ ಪೊರ್ದೆ ಪರುಷಮಂ ಲೋಹಂಗಳ್ ॥೯

ನೃಪರತ್ನಂ ದಾನದಿಂ ಲುಬ್ಧರನನುನಯದಿಂ ಕ್ರುದ್ಧರಂ ಯುದ
ದೊಳ್ಮ । ನ್ನಪಮಾನಂಬೆತ್ತರಂ ಮನ್ನಣೆಯಿನಭಯವಾಗ್ವೃತ್ತಿಯಿ
ಭೀತರಂ ಭೃ ॥ ತ್ಯಪದಪ್ರಸ್ಥಾನದೊಳ್ ಯೋಜಿಸಿ ತನಗೆ ವಶಂಮಾ

೮. ಗೆಲಲಾಱವೆ- (ರಾಜನನ್ನು) ಜಯಿಸಲಸಮರ್ಥವಾದವುಗಳೇ. ಇಲ್ಲಿ ‘
ಅವಧಾರಣಾರ್ಥಕ. ನೆಱೆವನೆ- ಸಮರ್ಥನಾಗುತ್ತಾನೆಯೆ? ಇಲ್ಲ

ತಾಂ ತಾಳ್ದಿದಂ ತ! ನ್ನ ಪೆಸರ್ತನ್ನಾಣೆ ತನ್ನುನ್ನತಿ ಪಸರಿಸೆ ತನ್ನ
ನ್ನರಾರೆಂಬ ಪೆಂಪಂ ‖೧೦

(ಅಕ್ಕರವೃತ್ತ)

ಅನುಪಲಬ್ಧದೊಳಱಿತಮಂ ಮೆಱೆದುಪಲಬ್ಧದೊಳ್ನಿಶ್ಚಯಗ್ರಾಹಿ
ಯಾಗಿ। ತನಗೆ ನಿಶ್ಚಿಂತದೊಳ್ ಬಳಾಬಳಚಿಂತೆ ಬಗೆವ್ರಗದರ್ಥಂ ದ್ವೈ
ಧನಾಗೆ॥ ಮನದ ಸಂಶಯಮಂ ಪರಿಚ್ಛೇದಿಸಿ ಕಾರ್ಯಾಂಶವಿಶೇಷಾ
ರ್ಥವಂ। ನೆನೆದು ತಿಳಿದಾಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿ
ಯಾದಂ ‖೧೧

ಧರಾವಿವರವರ್ತಿ ಶೇಷನಿಳೆಯಂ ಗಡಂ ತಾಳ್ದಿದಂ।
ವಿರುದ್ಧಮೆನೆ ರಾಷ್ಟ್ರಕಂಟಕರನೆಯ್ದೆ ಕಿೞ್ತಂ ನೃಪಂ॥
ಹಿರಣ್ಯಧನಧಾನ್ಯಕೃಷ್ಯಫಲವೃಷ್ಟಿಸಂಪೂರ್ಣಮಂ॥
ಧರಾವಳಯಮಂ ಪ್ರಚಂಡಭುಜದಂಡದೊಳಾತ್ತಾಳ್ದಿದಂ ‖೧೨

ಕೂರಸಿಯಂ ಪೊರ್ದಿದ ಜಳ।
ಧಾರೆಯುಮತಿತೀಕ್ಷ್ಣಮಪ್ಪವೊಲ್ಗಂಡಗುಣಂ॥
ವೀರಶ್ರೀಗಾದುದು ನೃಪ।
ವೀರಭುಜೋತ್ಖಾತಖಡ್ಗಧಾರಾಶ್ರಯದಿಂ ‖೧೩
ಬಿರುದಿನ ಬೀರದ ಪೆಸಱ।

೧೩. ಜಳಧಾರೆ- ಕತ್ತಿಗೆ ಹದ ಕೊಡುವಾಗ ಸೇರಿದ ನೀರು. ಕಾದಂಬರಿಯ—
"ಪಿರಿದುಂ ದೃಢತರಮುಷ್ಟಿಯ।
ಭರದಿಂ ಮುನ್ನುಂಡ ನೀರನುಗುಳ್ದಪುದು...ನೃಪಾಲಕೃಪಾಣಂ॥"
ಎಂಬ ಪದ್ಯವನ್ನು ನೋಡಿ.

೧. ತೆನ್ನಾಳೆ. ಗ॥

ಕ್ಕರಮಂ ಪರನೃಪರ ಮೆಯ್ಯ್ಯಪುಣ್ಣ್ಗಲೆಗಳ್ ಪ್ರೋ ॥
ಲ್ತಿರೆ ತೋಳ್ವಲಕ್ಕೆ ಪಡೆದಂ ।
ನರಶಾಸನಮಂನರೇಂದ್ರಚೂಡಾರತ್ನಂ ॥೧೪

ಧರಣೀರಕ್ಷಣಮಂತ್ರಾ ।
ಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾ ॥
ಕ್ಷರಮಂ ಪೊನ್ನೊರೆಯಿಂದಂ ।
ಬರೆದಂತಾನೃಪನ ತೋಳ ಬಾಳ್ವೊಗರೆಸೆಗುಂ ॥೧೫

ದ್ಯುಮಣಿದ್ಯುತಿ ಕುಮುದಕ್ಕಂ ।
ಕಮಲಕ್ಕಂ ಮಾಡುವಂತೆ ಸಂಕೋಚವಿಕಾ ।
ಸಮನೇಕಸಮಯದೊಳ್ ಶ ।
ತ್ರುಮಿತ್ರಮಂಡಲಕೆ ಮಾಳ್ಪುವಾತನ ತೇಜಂ ॥೧೬

ಸಮದವಿರೋಧಿವಾಹಿನಿಯ ಜೀವನಮಂ ತವೆ ಪೀರ್ದಿಳಾವಧೂ ।
ರಮಣನ ತೇಜಮುಜ್ಜ್ವಲಿಸಿದತ್ತು ಸಮುದ್ರದೊಳಿಕ್ಕಿ ಮೆಟ್ಟ ವಿ ॥
ದ್ರುಮಲತೆಯಂ ದಿಶಾವಳಯದೊಳ್ ದಿಗಧೀಶಕಿರೀಟರತ್ನಪೀ ।
ಠಮನಡರ್ದೀಜಿ ದಾರುಣವರಿಕ್ಷಯಸಾಧ್ಯನವಾಂಬುಧಾರಣಂ ॥೧೭

ಚಾತುರ್ದಂತಬಲಕ್ಕೆ ಲೆಕ್ಕಮಸಿಸಂಘಾತಕ್ಕೆ ವಿದ್ವಿಷ್ಟಸಂ ।
ಘಾತಂ ಕೀರ್ತಿಗೆ ದುಷ್ಪ್ರವೇಶವಿಷಯಂ ಮಿತ್ರಾವನೀಮಂಡಳ ॥
ಕ್ಕಾತಂಕಂ ಶರಣಾಗತಂಗೆ ಭಯಮಿಲ್ಲೆಂಬೀನಿಜಖ್ಯಾತಿಯಿಂ ।
ಮಾತೇಂ ಷೋಡಶರಾಜರೊಳ್ದೊರೆಗೆ ವಂದಂ ರಾಜವಿದ್ಯಾಧರಂ ॥೧೮

---

ಪುಣ್ಗಲೆಗಳ್- ಗಾಯದ ಗುರುತುಗಳು. ಶಿಲೆಯಲ್ಲಿ ಕೆತ್ತುವದಕ್ಕೆ ಬದಲಾಗಿ ಶತ್ರುರಾಜರ ತೋಳಲ್ಲಿ ಕತ್ತಿಯಿಂದ ಕೆತ್ತಿ ತನ್ನ ಪ್ರತಾಪಕ್ಕೆ ನರಶಾಸನವನ್ನು ಬರೆದನು.

ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ ನಿ । ಶ್ಚಳಧೈರ್ಯ್ಯಾಲಂಬವಾಗಿರ್ದವನಿಪತಿಯ ಹೃತ್ಸಂಗದಿಂದಂ ತಟಚ್ಚಂ ॥ ಚಳೆ ಲಕ್ಷ್ಮೀಕಾಂತೆ ಪೂರ್ವ್ವಸ್ಥಿತಿಯನುಜಿದತಿಸ್ಥೈರ್ಯ್ಯಮಂ ತಾಳ್ದಿದಳ್ ಕೇ । ವಳಮೇ ಸತ್ಸಂಗಮುತ್ಸಾರಿತಸಕಲಜನಸ್ವಾಂತದೋಷಾನುಷಂಗಂ ॥೧೯

ಅವಿಚಲಮಪ್ಪ ಲಕ್ಷ್ಮಿ ವಿವಿಧೋತ್ಕರಹೃದ್ಯಮೆನಿಪ್ಪ ವಿದ್ಯೆನೋ । ಬ್ಬವರನುರಾಗಮಂ ಪಡೆವ ರೂಪು ಮನೋಹರಮಪ್ಪ ಯೌವನಂ॥ ಭುವನತಳಪ್ರಸಿದ್ಧಮೆನಿಪನ್ವಯಮಾನೃಪನಲ್ಲಿ ತೋಱಲಾ । ಱವು ಮದಮಂ ವಿವೇಕಪರಿಪೂರ್ಣ್ಣನನೇನಿವು ಮೀಱಲಾರ್ಪುವೇ ? ॥

ಅಂತೆನಿಸಿದ ರಾಜಸರ್ವಜ್ಞಂ ತನ್ನ ವಿತರಣಗುಣಮಣಿಸ್ತಂಭದೊಳ್ ಕೀರ್ತಿಪತಾಕೆ ನರ್ತಿಸೆಯುಂ ತನ್ನ ಚಾರುಚರಿತ್ರಸುಧಾವರ್ಷದೊಳಗಣ್ಯಪುಣ್ಯಪ್ರವಾಹಮುಜ್ಜಿತೋದಿತಮಾಗೆಯುಂ ತನಗವೋಘವಾಕ್ಯಮಾಣಿಕ್ಯಮರೀಚಿಯೊಳ್ಜನಾನುರಾಗಮಪರಿಮಿತಮಾಗೆಯುಂ ॥೨೧

ನಿಲೆ ನಿಜವಕ್ಷಸ್ಥಲವ ।
ಜ್ರಲೇಪವಿಪುಲೋಪಲಪ್ರದೇಶದೊಳೆಂದುಂ ॥
ತೊಲಗದೆ ಸಾಮ್ರಾಜ್ಯಶ್ರೀ ।
ಲಲನೆ ನರೇಂದ್ರಂ ಸುರೇಂದ್ರನಂ ಗೆಲೆವಂದಂ ॥೨೨

ಅಂತವಿಶ್ರಾಂತಶ್ರೀಯನಪ್ಪುಕೆಯ್ದು ರವಿಮಂಡಲಮಂಡನೆಯುಂ ಚನ್ದ್ರಬಿಂಬಸುಭಗೆಯುಂ ನಕ್ಷತ್ರಮಾಲಾಮನೋಹರೆಯುಮೆನಿಸಿ ಪು

---

೧೯. ಸ್ವಾತಿಯ ಮಳೆಯ ಹನಿಗಳು ಮುತ್ತಿನ ಚಿಪ್ಪುಗಳಲ್ಲಿ ಬಿದ್ದರೆ ಮುತ್ತುಗಳಾಗುವವೆಂದು ಕವಿಸಮಯ.

ಡೋದ್ಧತಮಕುಟಬದ್ಧಚೂಡಾಮಣಿಕಿರಣ ಚರಣಾಲಕ್ತಕರಾಗಮುಂ ಸೀತಾತರಂಗಿಣೀತರಂಗೋತ್ತರೆಯುಂ ನೀಲಾಚಲವಿಚಿತ್ರರತ್ನಕಟಕಮುಂ ವಕ್ಷಾರಶಿಖರಿಶೇಖರಮುಂ ತನಗೆ ಸಹಜಾಭರಣಮಾಗೆ ವೈರಿತರುಪರಶುಧಾರೆಯುಮನ್ಯರಾಜನ್ಯಕೋಪಾನಲಜಲಧಾರೆಯುಮೂದ ನಿಜಾಜ್ಞಾಲಕ್ಷ್ಮಿಯ ಮೇಲೆ ವಸುಂಧರಾಭಾರಮಂ ನಿರಿಸಿ ಸುಖದಿನಿರೆ॥

ಪೊತ್ತು ಧರೆಯಂ ಗುರುತ್ವಂ ।
ಬೆತ್ತಾಜ್ಞಾಲಕ್ಷ್ಮಿ ನೆಲಸೆ ನೆತ್ತಿಯೊಳತ್ಯು ।
ದ್ವೃತ್ತನೃಪರೆಱಗಿದರ್ ಭೂ ।
ಪೋತ್ತಮನಡಿಗಧಿಕಭಾರಮೆಱಗಿಸದಾರಂ ? ॥ ೭೪

ಧರಿಯಿಸೆ ತನ್ನಾಜ್ಞೆ ವಸುಂ ।
ಧರೆಯಂ ಧರೆ ತಾಳ್ದೆ ತನ್ನ ವಿಶದಯಶೋವ ॥
ಲ್ಲರಿಯಂ ವಿದ್ವದ್ಗೋಷ್ಠೀ ।
ನಿರತಂ ಸುಖಸುಂಕಥಾವಿನೋದದೊಳಿರ್ದಂ ॥ ೭೫

ಅಂತು ನಿಖಿಲವಿದ್ಯಾನಿಧಾನನಾರ್ಯಜನಸಪರ್ಯೆಯೊಳಂ ಸರಸಕಾವ್ಯಾಮೃತಾಸ್ವಾದನದೊಳಮನವದ್ಯರಾಜವಿದ್ಯಾವಿನೋದದೊಳಂ ನಿರ್ಮಲಧರ್ಮಶಾಸ್ತ್ರದತ್ತಶ್ರವಣದೊಳಮಸಾಧಾರಣಶಸ್ತ್ರಶಾಸ್ತ್ರಪ್ರಕಟನದೊಳಂ ಸುಜನಸುಭಾಷಿತಾಕರ್ಣನದೊಳಮಪರಿಮಿತವಿತರಣವಿಲಾಸದೊಳಂ ಸುಭಟಕಟಕವೀರಾಳಾಪಗೋಷ್ಠಿಯೊಳಂ ಅಪ್ರತಿಮಲ್ಲಮಲ್ಲಯುದ್ಧಾಲೋಕನದೊಳಂ ಕರಿಕಳಭಕೇಳೀವಿಲೋಕನದೊಳಂ ವಿಷಮವಾಹನವಲ್ಗನಶಿಕ್ಷಾವಸರದೊಳಂ ಸರಸಗಾಯನೀಗೀತರಸಪ್ರವಾಹಾವಗಾಹದೊಳಂ ವಿದಗ್ಧವಾದಕವಾದ್ಯವಿದ್ಯಾಪರೀಕ್ಷೆಯೊಳಂ ರಸಾಭಿನಯಸುಭಗನರ್ತಕೀನರ್ತನನಿರೀಕ್ಷಣದೊಳಂ ದಿವಸಕ್ಷಣಂಗಳನೆ

ಕವಾಗಿಯುಮೇಕಕ್ಷಣದಂತೆ ತನಗೆ ನಿರಂತರೋತ್ಸವಮನೊದವಿಸು
ತ್ತುಮಿರೆ ॥೨೬

ಕುಮುದಿನಿಗೆ ಶಿಲೀಮುಖಮೆಱ ।
ಪ ಮಾಲ್ಕೆಯಿಂ ಚಂದ್ರನುದಯದೊಳ್ತರುಣಿಯರಂ ॥
ಸುಮನಶ್ಶಿಲೀಮುಖಂ ಮುಸು ।
ಱ ಮುತ್ತಿದುವು ನೃಪನ ಪೊಚ್ಚ ಪೊಸಜೌವನದೊಳ್ ॥

ತರುಣಿಯರಾವಿಲಾಸಕುಸುಮಾಸ್ತ್ರನನೀಕ್ಷಿಸೆ ಕಾಮತಾಪದಿಂ ।
ತರುಣಮೃಣಾಳಮಂ ತೆಗೆದು ಪೂಗೊಳದಿಂ ಪೊಱಗಿಕ್ಕಿದಂದದಿಂ ॥
ಕೊರಗಿ ಮೃಣಾಳನಾಳಕೆಗೆ ಚಂದನದಣ್ಕೆಗೆ ತಣ್ಬುಳಲ್ಗೆ ತ । ಣ್ಗರಗ
ದ ಸೊಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ ॥೨೮

ಪದವಿಲ್ಲಿಂದಪ್ಪುದೇನೆಂದುಡಿದು ಪಿಡಿದಪ್ಪೈದಂಬುಮಂ ಮಾಣದೀ
ಡಾ । ಡಿದನೀರಾಜೇಂದ್ರಸೌಂದರ್ಯಮೆ ನೆರಮಬಳಾಚಿತ್ತಸಂಮೋಹನ
ಕ್ಕಾ ॥ ಪುದುಮಿಂ ಪೇೞೇವುದೆಂದುನ್ಮದಮಧುಕರಝುಂಕಾರಮಂ ಕಾ
ಮುದೀಸಂ ॥ ಪದಮಂ ಪುಂಸ್ಕೋಕಿಲಾಲಾಪಮನಲೆವೆಲರಂ ಬಾರ್ತೆಗ
ಗೆಯ್ಯಂ ಮನೋಜಂ ॥೨೯

ಲಲನಾಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂ ।
ಗಲಮಂ ಮುಖ್ಯಮನಂದೊಡರ್ಚೆ ನೃಪಸೌಂದರ್ಯಕ್ಕೆ ಮುಂದಿಟ್ಟ ತ॥
ನ್ನಲರ್ವಿಲ್ಲಂ ನಿಜರಾಜಚಿಹ್ನಸಹಿತಂ ಸಾಮ್ರಾಜ್ಯಮಂ ಮುಱು ಸೂ ।

೨೮. ಅಣ್ಕೆ- ಲೇಪನ. ಕೊಳವೇರ್- ಲಾಮಂಚ.
೨೯. ಏವುದು- ಏನ ಮಾಡಬಲ್ಲದು.
ಬಾರ್ತೆಗೆಯ್ಯಂ- ಲಕ್ಷ್ಯಮಾಡುವದಿಲ್ಲ. ನೆರಂ- ಸಹಾಯ.

೧. ನೊಲಿಸುತ್ತುಮಿರೆ. ಗ॥

ಜ್ಜ್ವಲವಂದರ್ಘ್ಯಮನೆತ್ತಿ ಮನ್ಮಥನೃಪಂ ಕೊಟ್ಟಂ ಮಹೋತ್ಸಾಹದಿಂ ॥೩೦

ವನಿತಾವಶ್ಯಾಂಜನಕ್ಕೇಳಿದಿಕೆಯನಬಲೋನ್ಮಾದಚೂರ್ಣಕ್ಕಸತ್ಕೀರ್ತನಮಂ ಕಾಂತಾಮದೋಚ್ಚಾಟನಮನಸಿಜಮಂತ್ರಕ್ಕೆ ಕುಂದಂ ವಧೂಟೀ॥ ಜನನೇತ್ರಾಕರ್ಷಣಾಲೇಪನಕವಜಯಮಂ ಮಾನಿನೀಚಿತ್ತಸಂಮೋ ॥ ಹನರೂಪಕ್ಕೆಗ್ಗನುತ್ಪಾದಿಸುವುದು ನೃಪರೂಪಂ ಜನಾಶ್ಚರ್ಯರೂಪಂ ॥೩೧

ಅಂತೆನಿಸಿದ ಮನುಜೇಂದ್ರಚಂದ್ರನ ಗಂಡಗಾಡಿಯಂ ನೋಡಿ ಕಣ್ಬೇಟದ ತೋಟಿಯೊಳೊತ್ತಡರ್ದು ದುಸ್ಸಹವಿರಹಪರಿತಾಪಕ್ಕಳಿ ವನದುರ್ಗಮಂ ಪುಗುವಂತೆ ಲತಾಗೃಹವನಂಗಳಂ ಪೊಕ್ಕಂ ॥೩೨

ತನುವಲ್ಲದತನುತಾಪಂ।
ತನುವಂ ಸುಡೆ ನಿಲಿಸಲೆಂತುಮಾಱದೆ ತನುವಂ॥
ತನುಮಧ್ಯೆಯುರಲವಾ*ಸಿನ।
ನನೆವಾಸಿನ ಮೇಲೆ ಪಾಸಿದರ್ ತನುತನುವಂ ॥೩೩

ಅಲ್ಲಿ ಕೆಲರ್ ನಿಜಚರಣಮಣಿನೂಪುರಕ್ವಣಿತಮಂ ಪೆಣ್ಣಂಚೆಯಿಂಚರಮೆಗೆತ್ತೆಳಸುವ ರಾಜಹಂಸನಂ ಕಂಡು ಕನಲ್ದು ॥೩೪

---

೩೧. ಎಳಿದಿಕೆ- ತಿರಸ್ಕಾರ; ನಾಗವರ್ಮ ಶಬ್ದಸ್ಮೃತಿಯ ೧೪ನೆಯ ಪುಟದಲ್ಲಿ ಪ್ರ. " ಇನಿಯನೆ? ಬಿಲ್ಲದಂದಿನಿಯನೇವನೆ? ಆಃ! ಪಿರಿದೀವನಿತ್ತುದಂ।
ನೆನೆವನೆ? ಚೀಃ! ಅದಂ ನೆನೆಯನುಕ್ಕೆವಗೆಯ್ತ್ತದ ಗಾಳುಗೆಯ್ದ ಕೊ॥
ರ್ಪನೆ? ಕಳೆ ಕೂರನೇಳಿಪಿಕೆಗಂಡು ಬಿಸುಟ್ಟಪನೆ? ಉಃ! ಬಿಸುಟ್ಟಪನೆಂ।
ಬಿನಿತು ವಿವೇಕಮಿಲ್ಲದವನೆಟ್ಟವನಂ ಬಿಲಿವೆಣ್ಡಿರೊಲ್ವರೇ? ॥ "
ಎಗ್ಗು- ಮೌಢ್ಯ.

೩೨. ಬೇಟ- ವಿರಹ. ತೋಟಿ- ಜಗಳ.

ಒದವಿದಲಂಪಿನಿಂ ನಡಪಿದೆನ್ನನುಪೇಕ್ಷಿಸಿ ರಾಜಹಂಸನಾ।
ಮದ ದೊರೆವೆತ್ತ ಪೆಂಪುಭಯಪಕ್ಷವಿಶುದ್ಧತೆ ಪುಂಡರೀಕಷಂ॥
ಡದ ಸಿರಿ ನಿನ್ನೊಳಂ ನೃಪನೊಳಂ ಸಮಮೆಂದು ಮರಾಳ ಪಕ್ಷಮ।
ಪ್ಪುದೆ ಪೞಿ ಪೊರ್ದದಂತು ಪರಿಭಾವಿಪುದಾತ್ಮಕೃತೋಪಕಾರಮಂ॥

ಮತ್ತಮಲ್ಲಿ ಕೆಲರುತ್ಫುಲ್ಲಮಲ್ಲಿಕಾವಲ್ಲರಿಯಂ ನೋಡಿ॥೩೬

ನಿನ್ನನೆ ನಚ್ಚಿ ನಿನ್ನರಲ ಬಾಣಮನರ್ಚಿಪ ಪುಷ್ಪಬಾಣನಂ।
ತನ್ನ ವಿಲಾಸದಿಂ ಪರಿಭವಕ್ಕೆಡೆಮಾಡಿದನೆನ್ನ ನಲ್ಲನಾ॥
ಬನ್ನಮನಾತನೊಳ್ನಿಱಪಲಾಱದನಾಥೆಯೆನೆಂದಱಲ್ದು ನೀ।
ನೆನ್ನ ಮನಕ್ಕೆ ಮಾಡುವುದೆ ಮಲ್ಲಿಗೆ ಕೆಮ್ಮನೆ ತೀವ್ರತಾಪಮಂ॥೩೭

ಮತ್ತಮಲ್ಲಿ ಕೆಲರೆಳಮಾವಿನ ಸೆಳೆಗೊಂಬನೇಱಿ ಬಗ್ಗಿಸುವ ಗಂಡು ಕೋಗಿಲೆಗೆ ಕಯ್ಗಳಂ ಮುಗಿದು॥೩೮

ಬಸಮೞಿವಿನೆಗಂ ಮನಸಿಜ।
ನಿಸೆ ನಿನ್ನ ಕೆಲಕ್ಕೆವಂದೊಡೆನ್ನಂ ಬಿಡೆ ಬ॥
ಗ್ಗಿಸೆ ಮಧುವಿಕಾರಿ ಕೋಗಿಲೆ।
ಕಿಸುಗಣ್ಬವೆ ನೀಂ ವಿಜಾತಿಯೊಳ್ಗುಣಮುಂಟೇ॥೩೯

ಮತ್ತಮಲ್ಲಿ ಕೆಲರುನ್ಮದಮಧುಕರನಿನಾದಕ್ಕಾದಮಱಲ್ದು॥೪೦

ಪೊಸಮಲ್ಲಿಗೆಗಳ ತಿಳಕ।
ಪ್ರಸರದ ಕಂಪಿಂಗೆ ಬಸನಿಗಂ ನೀನೆಂದಾ॥
ದೆಸೆಯನಣಂ ನೋಡಲ್ಸಂ।
ಕಿಸುವೆನಗೆ ಮದಾಳಿ ಱಿಕ್ಕಟಂ ಪಲ್ಮೊರೆವಾ? ॥೪೧

೩೫. ಅಲಂಪು- ಪ್ರೀತಿ. ೪೧. ಬಸನಿಗ- ಅತ್ಯಾಸಕ್ತನಾದವನು.
" ಱಿಕ್ಕಟಮೆಂದೆನಲ್ಕೆ- ಬೞಿದೆಂಬುದು " ಕರ್ಣಾಟಕನಿಘಂಟು ೫೦

ಎಂದು ಪಲತೆರದಿಂ ಪಲುಂಬುವ ನಿತಂಬಿನಿಯರ ವಿರಹವಿಧುರನಾದ ಮೆ ಸೌಭಾಗ್ಯಯಶಃಪಟಹನಾದವಾಗೆಯುಮವರ ದೂದವಿಯರ ಲಲ್ಲೆ ವೆರಸಿದ ಮೆಲ್ನುಡಿಯೆ ಕರ್ಣಪೂರವಾಗೆಯುಮೋರೊರ್ಮೆ ತಾರಾಂತಃಪುರಪರೀತನಾದ ಚಂದ್ರನಂತೆ ಮನುಜೇಂದ್ರಚಂದ್ರನಂತಃಪುರಪುರಂಧ್ರೀಪರಿವೃತಂ ಪರಿಹಾಸಕುಶಲನರ್ಮಸಚಿವವಚನಪ್ರಾಗಲ್ಭ್ಯದರಸ್ಮಿತಮುಖಾರವಿಂದನೋಲಗವೊಳಿರ್ದು ॥೪೨

ನೆವದಿಂ ಪರ್ಚುವ ಮುತ್ತಿನೆಕ್ಕಸರಮಂ ಜೋಲ್ದಿರ್ದುವೆಂಬಂತೆ ಸಾ। ರ್ಚುವ ಕರ್ಣೋತ್ಪಲಮಂ ತೊಡರ್ಚುವ್ರುಗುರಂ ನೋಟ್ಪಂದದಿಂ ಪಾಣಿಪ ॥ ಲ್ಲವಮಂ ಕೆಂದಳದಿಂದಮರ್ಚುವಳಿಪಂ ವ್ಯಾಜೋಕ್ತಿಯಿಂದಂ ನಿಮಿ । ರ್ಚುವತಿಪ್ರೌಢೆಯ ಪೊರ್ದುವಾಸೆಗೆ ನೃಪಂ ರೋವಾಂಚಮಂ ತಾಳ್ದುವಂ ॥೪೩

ಮತ್ತಮೋರೊರ್ಮೆ ॥೪೪

ಎಂದುದನೆಂದು ಕಾಲ್ವಿಡಿದಗಲ್ಕೆಗೆ ಬೆರ್ಚಿ ಲತಾಂಗಿ ತಾಂಗೆ ಮ । ತ್ತೊಂದಿರುಳುಂ ನೃಪಂ ಪೆಱರ ಸೂೞ ದಿನಂಮುೞಿದಿರ್ದು ಸೂೞ್ತಡಂ॥ ಬಂದಳ ಸೂೞ್ಗೆ ಬಂದು ಬಿಡೆ ಪೊಯ್ವಡೆವಂ ಬಿಡುತರ್ಪ ಕಣ್ಣನೀ । ರ್ದಂದಲ ಬಳ್ಳಮಿಂಚೆನೆ ಪಳಂಚುವ ಲೋಲಕಟಾಕ್ಷಮಾಲೆಯಿಂ ॥೪೫

ಮತ್ತಮೋರೊರ್ಮೆ ಗೃಹವನಲತಾಗೃಹಂಗಳೊಳ್ ॥೪೬

ಪುರುಡಿಸಿ ಮುಗ್ಧೆ ತಾಂ ಮುಳಿದು ಭೂಪತಿಗಾಂ ಪೞಿಕೆಯ್ದೆನೆಂಬ ವಿ। ಸ್ಮರಣೆ ಮನಕ್ಕೆ ಪುಟ್ಟೆ ಚರಣಾಂಬುರುಹಕ್ಕೆಱಗಿರ್ದೊಡಾಶನೂ॥ ದರಿಯೊಲವಿಂಗೊೞಲ್ದು ತೆಗೆದಪ್ಪಿ ವಿಶಾಲನಿತಂಬಶೈಲನಿ । ರ್ಝರವೊಸರ್ವಂದಲಂಪು* ಮಿಗೆ ಚುಂಬಿಸುವಂ ವದನಾಂಬುಜಾತಮಂ ॥೪೭

೪೭. ಅಲಂಪು-ಸಂತೋಷ ; ಪ್ರ. "ಅವತಂಸೋತ್ಪಲತಾಡನಂ ಕನಕಾಂಚೀ ಬಂಧನಂ. ... ಚಕ್ರಿಗತ್ತುವಲಪಂ." ಉ.ಶ.ದ. 142.

ಅದಲ್ಲದೆಯುಮೋರೊರ್ಮೆ ನಿಜಮನೋಜಕೇಳೀನಿಲಯದೊಳ್ ॥
ಕೆದಱದ ಕುಂತಲಂಬಿಡಿದು ಮುತ್ತುಗಳಂ ಮಱದುಂಬಿ ಕಾಱುವಂ ।
ದದಿನುಗೆ ಘರ್ಮಬಿಂದು ಮಗುೞ್ದಂ ಲಲಿತಾಂಗಿಯರಾಸೆವಟ್ಟು ನೋೞ॥
ಟದ ಪೊಳಪೆಂಬ ಬಿಜ್ಜಣಿಗೆಯಿಂ ನೃಪನಾಱಸುವಂ ಮುಖಾರವಿಂ ।
ದದ ಮಕರಂದಸುಂದರಪರಿಶ್ರಮಶೀಕರಮಂ ರತಾಂತ್ಯದೊಳ್ ॥೪೯

ಅಂತು ನಿರತಿಶಯವಿಷಯಸುಖಸುಧಾರಸಾಸ್ವಾದನಮೆ ತನಗೆ ವಿನೋದಮಾತ್ರಮಾಗೆ ॥೫೦

ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ವೆರ್ಚೆಯುಂ ಕ್ಷೀರಸಾ।
ಗರಮುಲ್ಲಂಘಿಸದಂತೆ ಪೆರ್ಚೆವಡೆದುಂ ಧರ್ಮಾರ್ಥಮಂ ಕಾಮರಾ ॥
ಗರಸಂ ಮೀಱದೆ ಚಿತ್ತವೃತ್ತಿಗದು ಲೀಲಾಮಾತ್ರಮಾದಂತೆನಲ್ ।
ಧರಣೀನಾಥನವಕ್ರವಿಕ್ರಮಧನಂ ಭೂಚಕ್ರಮಂ ತಾಳ್ದಿದಂ ॥೫೧

ಅಂತೆನಿಸಿದ ಮನುಜೇಂದ್ರಚಂದ್ರಂಗೆ ಚಂದ್ರಿಕಾಲಕ್ಷ್ಮಿಯುಂ ವಿವೇಕವಿದ್ಯಾಧರಂಗೆ ವಿದ್ಯಾಲಕ್ಷ್ಮಿಯುಂ ವಿನಯಾರ್ಣವಂಗೆ ವೇಳಾವನಲಕ್ಷ್ಮಿಯುಂ ವಿಕ್ರಾಂತಕಂಠೀರವಂಗೆ ವೀರಲಕ್ಷ್ಮಿಯುಮೆನಿಸಿ ತನ್ಮಹೀಪಾಲನ ವಿಶಾಲವಕ್ಷಸ್ಥಲಕ್ಕೆರಡನೆಯ ಲಕ್ಷ್ಮಿಯಾದ ಮಹಿಮೆಯಿಂ ಲಕ್ಷ್ಮೀಮಹಾದೇವಿಯೆಂಬ ಸಕಲಕಲ್ಯಾಣಾಭಿರಾಮನಾಮಮುಮಂ ಧನಶ್ರೀಯೆಂಬ ಜನ್ಮನಾಮಮುಮಂ ತಳೆದು ॥೫೨

ನಿರತಿಶಯಮೆನಿಪ ರೂಪಿಂ ।
ನಿರುಪಮಲಾವಣ್ಯಲಕ್ಷ್ಮಿಯಿಂ ನಿಖಿಲಕಲಾ ॥
ಪರಿಣತೆಯಿಂದೆಣ್ಬಸಿರ ।
ಮರಸಿಯರೊಳ್ಪಡೆವಳಗ್ರಮಹಿಷೀಪದಮಂ ॥೫೩

ಆ ಸಕಲಗುಣರತ್ನಜನ್ಮಭೂಮಿಯೆನಿಪ ಲಕ್ಷ್ಮೀಮಹಾದೇವಿ ಕಮ

ಳನೀಲಕ್ಷ್ಮಿಯುಂ ಜಡಾಶಯನಿವಾಸಿಯೆನಿಸಿಯುಂ ವಸಂತಲಕ್ಷ್ಮಿಯುಂ ಮದಾಳಿಮಲಿನೆಯೆನಿಸಿಯುಂ ಘನಾಘನಲಕ್ಷ್ಮಿಯುಂ ತಟಿಲ್ಲತಾಸಂಚಲಿಯೆನಿಸಿಯುಂ ಇಂದುಲೇಖಾಲಕ್ಷ್ಮಿಯುಂ ವಕ್ರಸ್ವಭಾವೆಯೆನಿಸಿಯುಂ ನಕ್ಷತ್ರಲಕ್ಷ್ಮಿಯುಂ ದೋಷಾನುಷಂಗೆಯೆನಿಸಿಯುಂ ಸುರತರಂಗಿಣೀಪ್ರವಾಹಲಕ್ಷ್ಮಿಯುಂ ಸ್ವಭಾವಮುಖರೆಯೆನಿಸಿಯುಂ ಅಮರಚಾಪಲಕ್ಷ್ಮಿಯುಂ ಗುಣರಹಿತೆಯೆನಿಸಿಯುಮಾಕೆ ತನ್ನ ಮದಾಳನೀಳಕುಂತಳದೊಳ್ ಕುಟಿಲಸ್ವಭಾವಮುಂ ವಿಭ್ರಮಭ್ರೂಲತೆಯೊಳ್ ವಕ್ರಗುಣಮುಂ ಪೊಸಮುತ್ತಿನ ಪೊಳೆವನಿಱಪ ದಂತಕಾಂತಿಯೊಳ್ ಚಂಚಲತ್ವಮುಂ ಪಲ್ಲವಾಧರದೊಳಧಿಕರಾಗಮುಂ ಘನಸ್ತನದೊಳತಿಕರ್ಕಶತ್ವಮನಸಿಯ ನಡುವಿನೊಳಲ್ಲಾಟಮನುತ್ತುಂಗನಿತಂಬದೊಳುದ್ವೃತ್ತತೆಯುಂ ಪೂಗಣೆಯ ದೊಣೆಗೆ ಮೆಯ್ದೊಣೆಯೆನಿಪ ಕಿಱುದೊಡೆಯೊಳ್ ನೀಚತೆಯುಂ ತಳೆದು ॥೫೪

ಮನಸಿಜನಿವಳಂ ಕುಳರ್*ವ ।
*ರ್ದನ ರಸದೊಳಮರಲ ಸರಲ ಕೂರ್ಪಿನೊಳಂ ಪೋ ॥
ಜನಿಯಿಸಿದಂ ಸಂದಯಮೇ ।
ನೆನಿಸಿದಳಾರಮಣಿ ಗುಣದೊಳಂ ರೂಪಿನೊಳಂ ॥೫೫

ರತಿ ಕಂದರ್ಪನ ಚಿತ್ತಮುಂ ಪಡೆದಳೆಂಬೀಗರ್ವದಿಂ ಸುಂದರಾ ।
ಕೃತಿಯೊಳ್ ಬಿಜ್ಜನೆ ಬೀಱೆ ರೂಪಮದಮಂ ಪೋ ಪಿಂಗಿಸಲ್ಪದ್ಮಜು ।
ಪ್ರತಿರೂಪಂ ಪಡೆದಿಟ್ಟನಾಕೆಗುಱದಂದಿಂತಕ್ಕುಮೇ ರೂಪಮು । ಪ್ರ
ಮಂ ಕಾಂತೆಯುಗೇ*ಂಬೊಡೇವೊಗೞ್ವೆನಾಂ ಲಕ್ಷ್ಮೀಮಹಾದೇವಿಯುಂ

೫೪. ದೊಣೆ- ದ್ಭ. ತೂಣ, ಬತ್ತಳಿಕೆ. ತೊಣೆ- ಸಮಾನ.

ಆಕಾಂತೆಯ ಮೃದುತಳಪದ[1] ।
ಕೋಕನದಂ ತನ್ನ ರುಚಿಯಿನೊದವಿಸಿ ರಾಗೋ ॥
ದ್ರೇಕಮನದೆಂತು[2] ರಕ್ತಾ ।
ಶೋಕದ ತಳಿರೊಳ್ವರಾಗಮಂ ಪುಟ್ಟಿಸುಗುಂ ! ॥೫೭

ಲಲಿತಲತಾಂಗಿಯ ಚರಣಾಂ ।
ಗುಲಿಯೊಳ್ ಕಣ್ಗೊಳಿಸುವುಗುರ್ಗಳರುಣಾಂಬುಜದ ॥
ಳ್ಗಲರೆಸಳ್ಗಳಂಚೆಯೊಳ್ಸಂ ।
ಚಲಿಸದೆ ಜಲಬಿಂದು ನಿಂದುವೆನೆ ಸೊಗಯಿಸುಗುಂ ॥೫೮

ಜಡನೆನಿಸನೆ ನನೆಯಂಬಿಂ ।
ಗೆಡೆಗೊಟ್ಟಂಗಜನ ದೋಣೆಗೆ ತೋಣೆಯೆಂ[3]ಬನವ ॥
ರ್ಕಡೆಗುಡದ ಲತಾಂಗಿಯ ಕಿಱು ।
ದೊಡೆಯಂ ನೋಟಕರ ಕಣ್ಗೆ ಗುಱಿಯೆನಿಸುದುವಂ ॥೫೯

ತೊಡೆಯುಂ ಪೊಡೆಯುಂ ದೊರ್ಪಿಂ[4] ।
ತೊಡೆವಲಡಿಂ ಮದನನೆನಿಸಿ ನನೆಯಂಬುಗಳಂ ॥
ತೊಡೆಸಕ್ಕಿವಾಡಿ[5] ಕಾಂತೆಯ ।
ತೊಡೆ ತೊಡೆದುವು ಕನಕ[6]ಕದಳಿಕಾವಿಲಸನಮಂ (?) ॥೬೦

ಪುಳಿನಸ್ಥಳಮಂ ಮಱಿಯಿಸಿ ।
ತೊಳಗುವ ನಕ್ಷತ್ರಮಾಲೆಯಂತಿರೆ ಮಣಿಮೇ ॥
ಖಳೆ ಮದನಕುಂಭಿಕುಂಭ ।

೫೮. ಅಂಚೆ- ಇದು ಅಂಚು ಎಂಬದರ ರೂಪಾಂತರದಂತೆ ತೋರುತ್ತದೆ.

೧. ಪದತಳ. ಗ॥ ೨. ದಿಂತು. ಗ॥ ೩. ಬಿನೆರವಕ್ಕೆ. ಕ॥ ೪. ದೊರ್ಪ೯ಂ. ಗ॥
೫. ತೊಡಸಲ್ಕೆ. ಕ॥ ೬. ಜನಕ. ಕ॥

ಸ್ಥಳಮುಂ ನೆನೆಯಿಸುವುದಸಿಯಳಲಘುನಿತಂಬಂ ॥೬೧
ಅವಳಸಿಯಬಾಸೆಯೆಂಬೀ ।
ನವಯೌವನವ[1]ನದ ಲತೆಯ ಲಾವಣ್ಯಜಳ ॥
ಪ್ಲವಮನೊಳಕೊಳ್ವುದೆಂದಾ ।
ಳವಾಳಮೆನೆ ನಿಮ್ನನಾಭಿಮಂಡಲಮೆಸೆಗುಂ ॥೬೨
ಕಾಯ್ದಿಸುವ ಮನೋಜನ ಕ ।
ರ್ಣಯ್ದಲ ಕೇಸರದ ಮಿಸುಪ ನಾರಾಚಮೆನಲ್ ॥
ಮೆಯ್ದೋರ್ಪಸಿಯಳ ಬಾಸೆಗೆ ।
ಮೆಯ್ದೊಣೆಯೆಂಬೆನೆ ಮನೋಭವಜ್ವಾಲತೆಯುಂ ? ॥೬೩
* ಅ[2]ವಯುವಮೆ ನಾದಜಾದೆನೆ ।
ದಿವಿಜೋರಗಖಚರವಧುಗಳಂ ಗೆಲ್ದಡವ ॥
ರ್ಗಿವು ಗೆಲ್ಲದ ರೇಖೆಗಳೆನೆ ।
ಕುವಲಯನೇತ್ರೆಯ ವಳಿತ್ರಯಂ ಸೊಗಯಿಸುಗುಂ (?)॥೬೪
ಸೆಳೆ[3]ಗೊಂಬಲ್ಲಾಡುವವೊಲ್ ।
ಫಳಭರದಿಂ ಘನಪಯೋಧರಂಗಳ ಭರದಿಂ ॥
ಸೆಳೆದಲ್ಲಾಡಿಯುಮಾಕೆಯ ।
ಸೆಳೆನಡು ನೋಡಿದರ ಮನಮನಲ್ಲಾಡಿಸುಗುಂ ॥೬೫
ಎಸೆವುದು ವಳಿತ್ರಯಂಗಳ ।
ನೆಸೆವಸಿಯಳ ತೆಳ್ವಸಿರ್ಜನಾಲೋಕನಮೀ ॥

೬೪. ಗೆಲ್ಲ.- ಜಯ.

೧. ವದನ. ಗ॥ ೨. ಅವಯವಮೇನಾದೂದೆನೆ. ಗ॥ ೩. ಗೊಂಬಾಡುವವೊಲ್. ಗ

ನಸಮುದ್ವರ್ತನದಿಂ ತೆರೆ ।
ಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ ॥೬೬

ಮೃಗಲಕ್ಷ್ಮನದೇನೆಂದೀ ।
ನಗೆಮೊಗದೊಳೊತ್ತ*ಡರ್ದನೆಂದು ಹಾರಾಂಶುಗಳಿಂ ॥
ನಗುವಂತೆ ಬೀಗಿ ಮೀಗ ।
ಣ್ಗೊಗೆದಿರ್ಪುವು ತುಂಗಕುಚೆಯ ಕುಚಕಲಶಂಗಳ್ ॥೬೭

ಪೊಗ*ರ್ವಟ್ಟನತನುಬಾಣದ ।
ಪೊಗರಂ ನುಣ್ಬೊಗರೊಳಱಿಸಿ ನೋಡಿದ ೧ಕಣ್ಣು ॥
ಣ್ಬುಗುಮೆನಿಪ ನುಣ್ಪಿನಿಂದೇಂ ।
ಸೊಗಯಿಸುವುವೊ ಬಾಹುಮೂಲಮಾಕಾಮಿನಿಯಾ ॥೬೮

ಇರೆ ೨ಕೆಂಡು ನಾರ್ಪ ಕಂದುವ ।
ಸಿರಿಸದ ಬಾಸಿಗಮನೆಂತು ಪೋಲಿಸುವೆಂ ಸುಂ ॥
ದರಿಯ ಮನೋಜನ ಪಾಶದೊ ।
ಳೆರಡೆರಡೆವರಲ್ಕೆ ಸಾಲ್ದ ಭುಜವಲ್ಲರಿಯಂ ? ॥೬೯

ಜಲಜಾಕ್ಷನ ನಾಭೀಕಮ ।
ಳಲಕ್ಷ್ಮ ನೆಲಸಿರ್ಪ ದಿನಕರಂ ಪಿಡಿದಿರ್ಪಾ ॥
ಜಲರುಹದೆಸಳಂ ಮೆಚ್ಚದ ।
ಲಲನೆಯ ಕರತಳಮನೆಳದಳಿರ್ಪೋಲ್ತಪುವೇ ? ॥೭೦

೬೮. ಕಣ್ಣುಣ್ಬುಗುಂ=ಕಣ್+ನುಣ್ಬುಗುಂ (ಜಾರಿ ಹೋಗುತ್ತದೆ.)
೬೯. ನಾರ್ಪ- ನಾರುವ.

೧. ಕಣ್ಣುಣ್ಬ, ಕ॥ ೨. ಕಂದು, ಕ॥

  

ಲೆಕ್ಕದೊಳರ್ಮಡಿ ಮಿಕ್ಕವು ।
ಲೆಕ್ಕಮೆ ನಮಗೆಂದು ಮದನನೈದಂಬಿನೊಳಂ ॥
ಬಿಕ್ಕುವ ಸೌಂದರ್ಯಂ ಕೈ ।
ಮಿಕ್ಕಿರೆ ಕಾಂತೆಯ ಬೆರಲ್ ಬೆರಲ್ಮಿಡಿಯಿಸುಗುಂ ॥೨೧

ಶೃಂಗಾರಲತಾಮುಕುಳಮ ।
ನಂಗಯಶಶ್ರೀಕಟಾಕ್ಷಮಾಲಿಕೆ ಪೊಸವೆ ॥
ಳ್ದಂಗಳನೆ ಬೀಱು ನಾಡೆ ಮ ।
ನಂಗೊಳಿಪುವು ಪೂರ್ಣಚಂದ್ರಮುಖಿಯ ನಖಂಗಳ್ ॥ ೨೨

ಇದು ಮದನಕಮಲಕಂದಳ ।
ಮಿದಲ್ತು ಮುಖದರ್ಪಣಕ್ಕೆ ತಂದಿಕ್ಕಿದ ರ ॥
ನ್ನದ ಹಿಡಿ ಸಂದಯಮೇನೆನೆ ।
ಸುದತಿಯ ಕಮನೀಯಕಂಬುಕಂಧರಮೆಸೆಗುಂ ॥೨೩

ಸುಲಿಪಲ್ಲ ಪೊಳಪು ದರಹಾ ।
ಸಲಕ್ಷ್ಮಿಯೊಳ್ಪಣೆದು ಪುದಿಯೆ ದುಗುಲದ ಮಱೆಯೊಳ್ ॥
ಜಲಜಲಿಪ ರತ್ನದೀಪ ।
ಕ್ಕೆಲಗಣಿಸೆನುತಿರ್ಪುದಧರಮರುಣಾಧರೆಯಾ ॥೨೪

ಕತ್ತರಿಸಿ ಚಂದ್ರಕಳೆಯಂ ।
ಪತ್ತಿಸಿದಂತೆಸೆವ ಸತಿಯ ಸುಲಿಪಲ್ಪೊಳಪಿಂ ॥
ಮುತ್ತಿನ ವಿಲಾಸಮಂ ಪರಿ ।
ಮುತ್ತುಗಳೊಳ್ಸಲ್ದುದೆಂಬುದೊಂದಚ್ಚರಿಯೇ ॥೨೫ (?)

ಲಲನೆಯ ಕಪೋಲಮಂ ಪೋ ।

---

೧. ಪಿಡಿಯಿದು ಸಂದಯುಮೆನೆ. ಕ॥

ಲಲೆಂದು ಕುಸಿದಿಂದ್ರಿಯಂಗಳಂ ಮರವೊದಲೊಳ್ ॥
ನೆಲಸಿ ವನವಾಸದೊಳ್ ನವ ।
ದೆಲೆವಳ್ಳಿಗಳೆಲೆಗಳೆಂತುಮೇಂ ಪ್ರೋಲ್ತುವುವೇ ? ॥೭೬

ವಗೆ ತುಂಬಿಯೊಳ್ ಚಿರಂ ಸಂ ।
ವಗೆಗೀಕೋಮಳೆಯ ನಾಸಿಕಾಮುಕುಳಂ ಸಂ ॥
ವಗೆಯ ವಗೆ ನಾಸಿಕಾಸುರ ।
ಭಿಗೆ ಕೆಳೆಯಂ ತುಂಬಿ ವಗೆಯ ವಗೆ ಕೆಳೆಯಲ್ತೇ ॥೭೭

ಗೇಣ್ಗಗ್ಗಳವೆನಿಪವಳಲ ।
ರ್ಗಣ್ಗಳ ಕೊನೆ ಸಾಲ್ವುದಿಲ್ಲ ಕರ್ಬಿನ ಬಿಲ್ಲೊಳ್ ॥
ಜಾಣ್ಗೆಡೆಯೆನೆ ಕಡೆಗಣ್ಣಿನೆ ।
ಕಣ್ಗಾದು ಮನೋಜನರಲ ಸರಲಂ ತೊಱೆದಂ ॥೭೮

ತಾವರೆಗೆ ಮುಂಜು ನೀರ್ನಿಂ ।
ದಾವನಿಮಿೀಂಗುತ್ಪಳಕ್ಕೆ ಪಗಲೆನ್ನದೆ ಪೇ ॥
ಱಾವಧುವಿನಲರ್ಗಣ್ಣಿನ ।
ದೇವಣ್ಣಿಸುವೆಂ ದ್ವಿತೀಯಮೋಹನಶರಮಂ ॥೭೯

ವಿಭ್ರಮದಿನಾರ ಬಗೆಗಂ ।
ವಿಭ್ರಮಮಂ ಮಾಳ್ಪ ಗುಣದೊಳಂ ಚಿತ್ತಜಚಾ ॥
ಪಭ್ರಾಂತಿಯನಾಕೆಯ ಲಲಿ ।
ತಭ್ರೂಲತೆ ವಕ್ರರೂಪದೊಳಮುಗ್ಗಳಿಕುಂ ॥೮೦

೧. ಮೇಣೆಲೆವಳ್ಳಿ. ಕ॥ ೨. ವಗೆಯ ಕೆಳೆ ವಗೆಯಲ್ತೆ. ಕ॥
೩. ವಳ ಪೆರ್ಗಂಗಳ್. ಕ॥

ಅವಲೋಕನದಿಂದಾರ್ಗಂ ।
ಕಿವಿವೇಟಮನುಂಟುಮಾಡುವಚ್ಚರಿಗೆಡೆಯಾ ॥
ದವಳಸಿಯ ಕರ್ಣಯುಗಳ ।
ಕ್ಕವತಂಸೋತ್ಪಲಮೆನಿಪ್ಪವೆಲ್ಲರ ಕಣ್ಗಳ್ ॥೪೧

ಎಱಗಿಸುವುದೊಂದೆ ದಿವಸದೊ ।
ಳೆಱಗಿಸದೀತೆಱದಿನೆಂದುಮೆನಿಪುನ್ನತಿಯಿಂ ॥
ಪೆಱೆಯ ವಿಲಾಸಮುದೀಗಳ್ ।
ಪೆಱಗಾಯ್ತೆನೆ ರೂಪವತಿಯ ಪೆಱೆನೊಸಲೆಸೆಗುಂ ॥೪೨

ಮೊರೆಯುದ ಮುದಾಳ ಬೆಳಗಿಂ ।
ಪರೆಯುದ ಕಟ್ಟಲೆಯ ಬಿಟ್ಟನಿಪ್ಪವಳ ಪೊದ ॥
ಱ್ದರುಳೆಗುರುಳ್ವೆಶ್ಯಾಂಜನ ।
ದುರುಳಯೆನಲ್ ನೃಪನ ಮನಮನುಱೆ ಸೆಱೆವಿಡಿಗುಂ ॥೪೩

ಜನದಮನಕ್ಕಂಗಜವೋ ।
ಹನಶರಮಂ ಕಱೆವ ಕಾರ ನಿಱೆಮುಗಿಲೊಡ್ಡಂ ॥
ನೆನೆಯಿಪುವವಳ ಬಱಲ್ಮುಡಿ ।
ನೆನೆಯಿಪುದಚ್ಚರಿಯೆ ಸೋಗೆಸವಿಲ ಬೆಡಂಗಂ ॥೪೪

ಅನುಲೇಪಂ ಪಳಮೇಱೆದತ್ತು ನಿಜದಿವ್ಯಾಮೋದದಿಂ ರತ್ನಮಂ।
ಡನಮುದ್ಯೋತಿಸಿದತ್ತು ದೇಹರುಚಿಯಿಂ ಕರ್ಣೋತ್ಪಲಂ ಲೋಲ
ಲೋ॥ಚನಚಂದ್ರಾತಪದಿಂದರಲ್ದುದೆನೆ ಮಾತೇಂ ಮುಂಡನಶ್ರೀಗೆ ಮಂ।
ಡನಮೆಂದೆಂ ನೆಱೆ ಬಣ್ಣಿಸಲ್ಕೆಱೆಯೆನಾಂ ಲಕ್ಷ್ಮೀಮಹಾದೇವಿಯಂ॥

೧. ವಡೆಯಾದ, ಕ॥ ಗ॥ ೨. ರಸಮಂ. ಗ॥

ಅತನುಶ್ರೀಕಾಂತೆಗೀಕಾಂತೆಯೆ ಮಿಗಿಲೆನೆ ಕಾರ್ಗಾಲದೊಳ್ ಹಂಸಿಲೀಲಾ । ಗತಿಯಿಂ ಹೇಮಂತದೊಳ್ಕೋಗಿಲೆ ಕಳರುತಿಯಿಂ ಗ್ರೀಷ್ಮದೊಳ್ಕರ್ಣಿಕಾರಂ ॥ ದ್ಯುತಿಯಿಂ ತನ್ನಂತೆ ಚೆಲ್ವಂ ತಳೆಯುವೆನಿಸಿ ಲಕ್ಷ್ಮೀಮಹಾದೇವಿ ಧಾತ್ರೀ । ಪತಿಯುಂ ಸರ್ವಾಂಗಸೌಂದರ್ಯದಿನೆಸೆಗೆ ಸೌಭಾಗ್ಯಸಂಪನ್ನೆಯಾದಳ್ ॥೮೬

ಆಕಾಂತೆಯೊಳಾಸಕಲಮು ।
ಹೀಕಾಂತಂ ವಜ್ರಲೇಪದನುಬಂಧಮನಿ ॥
ತ್ತಾತ್ಕೃತಿಯಿಂ ಪತ್ತುಗೆವೆ ।
ತ್ತೋಕುಳಯಾಡುವನನಂಗರಾಗಾಮೃತದೊಳ್ ॥೮೭

ಆಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊಕ್ಕುಳಂ ಪೊಕ್ಕುಱಿದುಮುಸಿಯು ಬಾಸೆಯುಂ ಬಾಸಣಿಸಿಯುಂ ನೆಲೆವೊಲೆಯುಂ ನೆಲೆಮಾಡಿಯುಂ ಬಾಯ್ದೆಱಗೆ ತೆಱದೆಂತುಂ ನಿಱದಲೆಯೊಳ್ಕೈನಿಱದಾಡಿಯುಮಾಹರಿಣಲೋಚನೆಯು ಲೋಚನದೊಳಳಿಪಂ ಮನದೊಳುತ್ಸುಕತೆಯುಂ ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ ॥೮೮

ಕೃತವಿದ್ಯಂ ಬಿದಿ ಸೃಷ್ಟಿಯೊಳ್ ಸಮಸಮಾಕಾರಂ ಚಿತಂಗಾಗೆದಂ । ಪತಿಯುಂ ಪುಟ್ಟಸೆ ಪುಪ್ಪವೆತ್ತನೆನಿಪತ್ಯಾಶ್ಚರ್ಯಸೌಂದರ್ಯಮುಂ ॥ ಸತಿಯುಂ ಭೂಪನುಮುಪ್ಪಕೆಯ್ದು ದೊರೆವೆತ್ತನ್ಯೋನ್ಯಸಂಪ್ರೀತಿಯಿಂ । ರತಿಯುಂ ಕಾಮನುಮೆಂಬಿನಂ ಸಲಿಸಿದರ್ ನಾನಾವಿನೋದಂಗಳಂ ॥೮೯

ವದನಾಸ್ವಾದದೊಳಾದಲಂಪನಮೃತಂ ನೇತ್ರೋತ್ಪಳಾನಂದಸಂ ।

೮೮. ನಿಱದಲೆ- ಅಲೆಗಳಂತಿರುವ ಕುರುಳು, ಸುಕ್ಕುಗುರುಳು.

ಪದಮಂ ಚಂದ್ರಮನಿಂಪುವೆತ್ತನುಡಿಯಂ ವಶ್ಯಾಕ್ಷರಂ ಸುಯ್ಯೊಳು ॥
ಣ್ಮಿದ ಕಂಪಂ ಮೃಗನಾಭಿ ಸೋಂಕಿನೊದವಂ ಮಂದಾನಿಳಂ ಕೊಟ್ಟ
ವೊ । ಲ್ಪುದೆದೋರೊರ್ವರೊಳೊರ್ವರಂದು ಪಡೆದರ್ ಪಂಚೇಂದ್ರಿಯ
ಪ್ರೀತಿಯಂ ॥೯೦

ಅಂತಾದಂಪತಿಗಳ್ ಇಷ್ಟವಿಷಯಸುಖಸಂತುಷ್ಟಸ್ವಾಂತರಾಗಿ ಪಿರ್ನನು ॥೯೧

ಚಾಮರದಡಪದ ಡವಕೆಯ ।
ಕೋಮಳೆಯರ ಚರಣರಣಿತನೂಪುರದಿಂದು ॥
ಡಾಮರರವಮತನುಜಂಗಮ ।
ಹೇಮಲತಾಸಕ್ತಭೃಂಗರವಮೆಂಬಿನೆಗಂ ॥೯೨

ಒಂದು ದಿವಸಂ ಧನಶ್ರೀ ।
ಸುಂದರಿ ನಿಜಭವನವನದ ಮಣಿಮಯಲೀಲಾ ॥
ಮಂದಿರಮಣಿವೇದಿಕೆಗೇ।
ಱ್ತಂದಳ್ಮಣಿಮೇಖಳಾರವಂ ಪೊಣ್ಮಿವಿನಂ ॥೯೩

ಆಗಳ್ ॥೯೪

ಮೃಗನೇತ್ರೆಯ ತೊಳಗುವ ಕಾ।
ಲುಗುರ್*ಗಳ ನೂಪುರದ ಪೊಳೆವ ವಜ್ರಂಗಳ ಕಾಂ ॥
ತಿಗಳಡರೆ ಪರ್ವಿ ಪಚ್ಚೆಯ ।
ಜಗಲಿಯೊಳೊಪ್ಪಿದುವು ರಂಗವಲಿಯಿಕ್ಕಿದವೊಲ್ ॥೯೫

ಶ್ರೀವಧುವಿರ್ಪಂತಿರೆ ಪೊಂ।
ದಾವರೆಯೊಳ್ ಪೊಳೆವ ಕಾಂಚನಾಸನದೊಳ್ ಬಂ ॥
ದಾವಧು ಕುಳ್ಳಿರ್ದಳ್ ಸಲೆ।
ಲಾವಣ್ಯರಸಪ್ರವಾಹದೊಳ್ ತೇಂಕುವಿನಂ ॥೯೬

ಪಳುಕಿನ ಪಾದಪೀಠಮರುಣೋಪಳದಿಂ ಸಮೆದಂತೆ ಕಾಂತಿಯಂ |
ತಳೆದಿರೆ ತನ್ನ ಕೇಸಡಿಯ ಕೆಂಪಿನೊಳುಜ್ಜ್ವಲಚಿತ್ರಭಿತ್ತಿ ನಿ ||
ಸ್ತುಳನಿಜಮೌಕ್ತಿಕಾಭರಣದೀಧಿತಿಯಿಂ ತೆರೆಸುತ್ತಿದಂತೆ ಕ | ಣ್ಗೊ
ಳಿಸೆ ಲತಾಂಗಿ ಪೋಲ್ತಳಸಮೂಯುಧಮೋಹನಮಂತ್ರಶಕ್ತಿಯಂ ||೯೭

ವನಿತಾರತ್ನಮೆ ಸಾಲ್ಗುಂ |
ಜನವಶ್ಯಕ್ಕೆಂದು ಕಾಮನೀಡಾಡಿದ ಮೋ ||
ಹನಶರಮೆನಲಾಕೆಯ ಲೋ |
ಚನರುಚಿ ತಳತಳಿಸಿ ಪೊಳೆದುದಾವೇದಿಕೆಯೊಳ್ |೯೮
ಅಮೃತಾಂಶುಲೇಖೆ ನಕ್ಷ |
ತ್ರಮಾಲೆಯಿಂ ಬಳಸಿದಂತೆ ಪರಿವಾರವಧೂ ||
ಸಮಿತಿ ಪರಿವೇಷ್ಟಿಸಿರೆ ತರು |
ಣಿ ಮಾಡಿದಳ್ ನಯನಕುವಲಯಾನಂದನಮಂ |೯೯
ಚಮರರುಹಗ್ರಾಹಿಣಿಯರ್ |
ಸುಮನೋಮಂಜರಿಯ ಭಾರದಿಂ ಬಳ್ಕುವ ಜಂ ||
ಗಮಲತೆಗಳೆನೆ ಧನಶ್ರೀ |
ರಮಣಿಯೆರಟ್ಟಿಲದೊಳಂ ಚೆಡಂಗಂ ಪಡೆದರ್ ||೧೦೦

ಅಂತಾಕಾಂತೆ ಪರಿಮಿತಪರಿವಾರವನಿತಾಪರೀತೆ ಸೇವಾಚತುರಸಹ ಚರೀಸುಭಾಷಿತಮನಾಲಿಸುತ್ತುಮಿರ್ಪಿನಂ ಮುಂದೆ ಮಂದೈಸಿದ ತ ಮಾಲವನದ ಕಾಳದೊಳಂ ಮುಗುಳ್ತ ಮಾಧವೀಲತೆಯ ಜೊನ್ನದೊಳಂ ತಳರ್ತಶೋಕಪಂಡದೆಳವಿಸಿಲೊಳಂ ಬಂಬಲ್ದೆರೆಯ ತಾಮುರ್

೧೦೧. ಕಾಳ- ಅಂಧಕಾರ. ತಾಮುರ್ಟ್ಟು- ಮಂದಸ್ಪರ್ಶ. (?)

೧. ತಳರ್ದಿರೆ. ಗ||

ಟ್ಟಂ ಪುಟ್ಟದ ತಣ್ಗಾಳಿಯ ಸೋಂಕಿಂ ವಿರಳವಾಗಿ ಸೂಸುವ ತು ಷಾರವರ್ಷದೊಳಂ ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ ನಿಜನಿಕಟಭೂಮಿಯನಳಂಕರಿಸಿ ಜಳಜಕುಸುಮದೆಸಳ ಪಸೆಯೊಳ್ಕುಳ್ಳಿರ್ದು ಸರಸಸಾರಸೋತ್ತಾರಮಂಸ್ವರದೊಳುಪಾಶ್ರಯಂ ಬಡೆದು ಪಾಡುವ ಪೆಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗವಾಗೆ ॥

ಪರಿಪೂರ್ಣಚಂದ್ರಬಿಂಬಮೆ ।
ಪರಿವೇಷಮಗೊಂಡುದೆನಿಸಿ ಬಹುರತ್ನಶಿಲಾ ॥
ಪರಿಘಟಿತಂ ನಯನಮನೋ ।
ಹರಮಾದುದು ಶಿಶಿರಜವನಮಂಭೋಜವನಂ ॥೧೦೨

ನಳನೀಲಕ್ಷ್ಮಿಯ ಮಂದಹಾಸಮೊ ಧನಶ್ರೀದೇವಿಗೇನಟ್ಟದ । ಪ್ಪ ಳೊ ಲಕ್ಷ್ಮೀವಧು ತನ್ನ ಬೆಳ್ಗೊಡೆಯನೇಂ ಡಿಂಡೀರಪಿಂಡಂ ಹಿಮಾ! ನಿ ಳನಿಂ ಕೂಡೆ ತೆರಳ್ದು ಬಂದಪುದೊ ಪೇಳೆಂಬನ್ನೆಗಂ ಬಂದುದಾ । ಕೊ ಳದಿಂದೊಂದು ಮರಾಳಕಾಂತೆ ಮಱಿಯುಂ ತಾನುಂ ನಿಜಸ್ವೈರದಿಂ ॥

ಮುಂದೆ ಬರುತ್ತೆಡೆಯೆಡೆಯೊಳ್ ।
ನಿಂದು ನಿಜಾರ್ಭಕನ ಬರವುವಾರ್ದನಿಸಿನಿಸಂ ॥
ಸಂದು ಮಗುಳ್ದೀಕ್ಷಿಸುತ್ತುಂ ।
ಬಂದುದು ಕಳಹಂಸಿ ಸತಿಯ ಕಣ್ಬಯಸುವಿನಂ ॥೧೦೪

ಅಂತು ಬಂದು ತಿಳಿಗೊಳದ ತಡಿಯ ತಮಾಳದ ತಣ್ಣೆಳಲ ಪದ್ಮ ರಾಗದ ಪಾಸಱೆಯ ಮೇಲೆ ನಿಂದು ಮಂದಮಂದಪದವಿನ್ಯಾಸಮೆಸೆಯೆ ದೆಸೆದೆಸೆಗೆ ಪರಿವರ್ಭಕನ ಮೆಲ್ಲಡಿಗಳೊಡನೆ ದಿಟ್ಟಿಗಳ್ ಪರಿಯೆಯುಂ

೧. ಸೋತ್ತರ. ಗ॥ ೨. ನಿಂದು. ಗ॥

ತಣ್ಣಾಗಿ ಳಿಯಲಪಿನೊಳುಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮ ವಕ್ಷಪುಟದೊಳ್ಪುದುಂಗೊಳಿಸಯುಂ ಕಂಠೋಪಕಂಠದೊಳ್ನಿಂದ ಮ ಱಿಯ ಕೊರಲ ಕಿಱುದುಪ್ಪುೞಿಂ ಚಂಚುಮುಖದಿನಕ್ಕೆಗೆಯ್ದುಂ ಸರ ಸಬಿಸಬೀಜರಾಜಿಯಂ ಖಂಡಿಸಿ ಕುಟುಕನಿಕ್ಕಿಯುಂ ಮೃದುಮೃಣಾ ಳನಾಳರಸಮಂ ಚಂಚುಪುಟಶುಕ್ತಿಕೆಯಿಂದೆಱೆದುಂ ಬಾಳಕನ ಕೊರಲ ಮೇಲೆ ಕಂಠನಾಳಮಂ ಲಘುತ್ವದಿಂ ನೀಡಿಯುಂ ನಸುಜೋಲ್ದು ಕೋ ದ ಗಱಿಯನಿಚ್ಚಣಿಗೆಯಾಗೆ ಅಂಸವೇದಿಕೆಯನೇಱಿಸಿಯುಂ ಮೋಹರ ಸಪ್ರವಾಹದೊಳವಗಾಹಮಿರ್ದ ಕಳಹಂಸಿಯಂ ಧನಶ್ರೀಮಹಾದೇವಿ ನಿಶ್ಚಳವಕ್ಷ್ಮಮಾಳಿಯುಮಕಂಪಿತನಯನವೃತ್ತಿಕೆಯುಮಪಗತಾನ್ಯ ಮನಸ್ಕೆಯುಮಾಗಿ ನೀಡುಂ ಭಾವಿಸಿ ನೋಡುತ್ತುಮದಱ ಸಹಜ ಪ್ರೀತಿಯಂ ಸಖೀಜನಕ್ಕೆತೋಱಿ ತಾನುಂ ಪುತ್ರದೋಹಳಕುತೂಹಳೆ ಯುಮಾಗೆ ॥೧೦೫

ಅವಿವೇಕಂ ನಿಜಮಾದ ಹಂಸಿಮೊದಲಾಗೀಪ್ರೋತನಂ ಪ್ರೀತಿಸಂ।
ಭವಸೌಖ್ಯಾಮೃತಸೇವೆಯಿಂದೆ ನಲಿಯುತ್ತಿರ್ದಪ್ಪುದೆಂದಂದು ಮಾ ॥
ನವರೆಮ್ಮಂದಿಗರಾತ್ಮಜನ್ಮವದನೇಂದುಜ್ಯೋತ್ಸ್ನೆಯಿಂ ಲೋಚನೋ।
ತ್ಸವಮಂ ತಾಳ್ದದೆ ಬಾೞ್ವ ಬಾೞ್ವಡೆಗುಂ ನಿಸ್ಸೀಮನಿರ್ವೇಗಮಂ ॥

ಧರಣೀಶಂ ದಯೆಗೆಯ್ದುಮುಗ್ರಮಹಿಷೀಸಂಪತ್ತಿಯಂ ಪ್ರೇಮನಿ।
ರ್ಭರನಿರ್ಬಂಧದಿನಾಣೆಗೋಸಣೆಯನಿತ್ತುಂ ಬಾೞ್ತಿಯೇ ಪುತ್ರಮೋ॥
ಹರಸಾಸ್ವಾದನತೃಪ್ತಿಯಿಲ್ಲವೆನುತುಂ ತತ್ಕಾಂತೆ ಚಿಂತಾಪರಂ ॥ ಪರೆ
ಯಂ ತಾಳ್ದದಳಾರ್ಗೆ ಪುಟ್ಟದೊ ಸುತವ್ಯಾಮೋಹಕೌತೂಹಳಂ ॥

ಮುದಮುರ್ವೀಶಂಗೆ ಹರ್ಷಂ ಸಕಲಪರಿಜನಕ್ಕುತ್ಸವಂ ಬಂಧು
ಗಳ್ಗ। ಭ್ಯುದಯಂ ವಂಶಕ್ಕೆ ಚಿಂತಾಭರಮಖಿಳಸಪತ್ನೀಜನಕ್ಕುಮ್ಮ

ಳಂ ದು ॥ ವರ್ದವೀರಾರಾತಿವರ್ಗಕ್ಕಭಿಲಷಿತಫಲಂ ವಿಶ್ವಧಾತ್ರೀತಳ
ಕ್ಕಾ । ದುದೆನಲ್ ಸತ್ಪುತ್ರನಂ ಪ್ರೋ ಪಡೆಯದೊಡೆ ವೃಥಾಯಾಸ
ಮೀಶ್ರೀವಿಲಾಸಂ ॥೧೦೮

ಋತುಸಮಯಮೆನಗಿದಪ್ಪೊ ।
ಶ್ಯತೆಯಂ ಸಮನಿಸಲೆ ಹೇತುವಾಧತಾತ್ತದಂ ॥
ಸುತಹೇತುವಾದುದಿಲ್ಲೆಂ ।
ದು ತನೂದರಿ ನೆನೆದು ನೆನೆದು ವಿಹ್ವಳೆಯಾದಳ್ ॥೧೦೯

ಎಳವೆಱ್ ಬಳೆಯದ ಗಗನ ।
ಸ್ಥಳ ಸಸಿ ಬೆಳೆಯದ ಧರಿತ್ರಿ ಮೌಕ್ತಿಕರತ್ನಂ ॥
ಬಳೆಯದ ಶುಕ್ತಿಕೆ ಗರ್ಭಂ ।
ಬಳೆಯದ ಬಾಳಕಿಯ ಬಸಿಱನರ್ಥಕಮಲ್ತೇ ॥೧೧೦

ಅವನೀವಲ್ಲಭನುತ್ಸಂ ।
ಗವೆ ಮಂಗಳಪೀಠವಾಗೆ ಸವತಿಯರಿದಿರೊಳ್ ॥
ವಿವಿಧಾನಕಮೆಸೆದಿರೆ ಪುಂ ।
ಸವನೋತ್ಸವಮೆನಗದೆಂದು ಸಮನಿಸಿದಪ್ಪುದೋ ! ॥೧೧೧

ಸತ್ಸಭೆಗೂರ್ಗಳಂ ಮಣಿಮಯಾಭರಣಾಂಬರಜಾಳಮಂ ಸುಹೃ ।
ದ್ವತ್ಸಲರ್ಗರ್ಥಿಸಂತತಿಗೆ ಸೊಲ್ವನಿತರ್ಥಮನಿತ್ತು ಮಾಡಿ ಜ॥
ನ್ಮೋತ್ಸವಮಂ ನೃಪಂ ಸುತಮುಖಾಬ್ಜನಿರೀಕ್ಷಣಜಾತಹರ್ಷನ ।
ತ್ಯುತ್ಸುಕನಪ್ಪುದಂ ಕ್ಷಣಮನೀಕ್ಷಣಮೂರ್ವಿನವೆಂದು ಕಾಣ್ಬೆನೋ!॥

ಅರಿಸಿನದಂಚೆಯಂ ಪೊದಿಸಿ ಪೊರ್ಕುೞನೆನ್ನಯ ಸೋಂಕಿನೊಳ್ಮ
ರ । ಲ್ದಿರಿಸಿ ಲಲಾಟದೊಳ್ತಿಲಕಮಂ ಸೊಡರ್ವಕ್ಕಿನೊಳಿಟ್ಟು ಮು
ದ್ದಿಸೀ ॥ ವರಮೆರಡುಣ್ಮೆ ಕಣ್ದಣಿಯದರ್ಭಕನಂ ನಡೆ ನೋಡಿ ನೋ

ಡಿ ಪಾ। ಲ್ತೊರೆದು ಕುಚಂಗಳಂ ಬಿಡದೆ ಸೂಸುವ ಸ್ತೈಪೆನಗೆಂದು ಸಾರ್ಗಮೋ ॥೧೧೩

ಸೊರ್ಕಂ ಪುಟ್ಟಿಸಿ ನಿಜಡಿಂ ।
ಕರ್ಕಶದಿಂ [೧]ತಾಬಿ ಮೊಲೆಯು ದೊರೆಯಾ[೨]ದೊಡಮೋ ॥
ತರ್ಕೆ ಗಡ ಬಾಳ್ಕೆ ತನಯನ ।
ನಲ್ಕಿಱಿನೊಡದಳ ಬಱಿದೆ ಬೀಗಿದ ಮೊಲೆಗಳ್ ॥೧೧೪

ಕೈಗನ್ನಡಿಯುವೊಲೆಲ್ಲರ ।
ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ ॥
ಮೈಗಗ್ಗಳಿಸದ ಕಾಂತೆಯ ।
ಕೈಗಮದೇಂ ಭೇದಮುಂಟೆ ಸೀರೆಯ ಕೈಗಂ ॥೧೧೫

ಬಾಲಕನ ಪಿಶಂಗತಲಂ ।
ಬಾಲಕನ ಸ್ಖಲಿತಚಲನವಿನ್ಯಾಸದ ಲೀ ॥
ಲಾಲಸಮಂ ಕಾಣದ ದು ।
ರ್ಲೀಲಮೆನಿಪ್ಪೊಂದು ಜೀವನಂ ಜೀವನಮೋ ॥೧೧೬

ಅಂಗಭವಕೋಮಲಾಂಗಾ ।
ಲಿಂಗನಸುಖದೊರೆಗೆ ವಾರದಲ್ತೆ ಕುಳರ್ಕೋ ॥
ಬ್ಬಿಂಗಡಲೊಳ್ಮುಳುಗಿದೊಡಂ ।
ತಿಂಗಳ ತಣ್ಗದಿರ ಜೊಂಪದೊಳ್ನಲಸಿದೊಡಂ ॥೧೧೭

ಎಡೆಯಾಡಿದಪುದು ರನ್ನದ ।
ಸೊಡರೆನೆ ಹರಿನೀಳರತ್ನಕುಟ್ಟಿಮದೊಳ್ದ ॥

೧. ಮೆನೆತೋಳ್. ಕ॥ ೨. ಮಾಡದೊಡೇತರ್ಕೆ. ಗ॥

ಟ್ಟಡಿಯಿಡುವ ತನೂಭವನಂ ।
ನಡೆ ನೋಡಲ್ಪಡೆದ ತಾಯ ಜನ್ಮಮೆ ಸಫಳಂ ॥೧೧೮

ಪರಿದಾಡುವ ಸುತನ ಪದಾಂ ।
ಬುರುಹಂಗಳೊಳುಲಿವ ಪೊನ್ನಗೆಜ್ಜೆಯ ದನಿಯಂ ॥
ತಿರೆ ನಚ್ಚಿನ ವೀಣಾವೇ ।
ಣುರವಂಗಳ್ಕುಱಿಯುವಲ್ತೆ ಕರ್ಣಾಮೃತಮಂ ॥೧೧೯

ದರವಿಕಸಿತಮಂ ರಜದೊಳ್ ।
ಪೊರೆದಾತ್ಮಜಮುಖಸರೋಜಮಂ ಮೋಹರಸಂ ॥
ತೆರೆಮಸಗೆ ನೋಳ್ಪ ಜನನಿಯ ।
ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ ॥೧೨೦

ಕಣ್ಬಡೆದ ಫಲಂ ಸುತನಂ ।
ಕಾಣ್ಬುದೆ ಸುತವದನಕಮಲಮಂ ಕಾಣದ ಕಣ್ ॥
ಕಣ್ಬೇಲಿಯ ಕಣ್ಣೆನುತುಂ ।
ಕಣ್ಬನಿಯಿಂ ಕರ್ಚಿದಳ್ಕಪೋಲಸ್ಥಳಿಯಂ ॥೧೨೧

ಅಂತಾಕಾಂತೆ ಚಿಂತಿಸುತ್ತಿರ್ಪಿನಂ ॥೧೨೨

ದಿವಸಶ್ರೀ ಮಂಜಿನೊಳ್ಪಡಲಿಯೆ ಕಳೆಯಲಾಬೇಸಱಂ ಬರ್ಪ ತಿಗ್ಮಾಂ। ಶುವೊ ಪೇೞೆಂಬನ್ನೆಗಂ ತೊಟ್ಟರುಣಮಣಿವಿಭೂಷಾಂಶುಬಾಲಾತಪಂ ತೀ॥ ವ್ರವಿನಂ ಕೇಳೀಗೃಹಾಂತಸ್ಥಳಿಯನವನಿಪಾಳಂ ಸುತಾವಾಪ್ತಿಚಿಂತಾ। ಪ್ಲವದೊಳ್ತೇಂಕುತ್ತುಮಿರ್ದಾಸತಿಯ ಪರಿಮಿತಾಸ್ಥಾನಮಂ ಮುಟ್ಟೆವಂದಂ॥೧೨೩

ಅಂತು ಬಂದು ॥೧೨೪

ಜಿನಪಾದಾಂಭೋಜಪೂಜಾವಿಚಕಿಲಸುಮನಶ್ಶೇಖರಂ ಚಾರುಸಚ್ಚಂ। ದನಕಾಶ್ಮೀರಾಂಗರಾಗಂ ತನಗಳವಡೆ ವಕ್ಷಃಸ್ಥಳೀರಂಗದೊಳ್ಳ ॥ ರ್ತನವಂ ಮುಕ್ತಾವಳೀನರ್ತಕಿ ವಿರಚಿಸೆ ತದ್ಗೇಹಮಂ ಬಂದು ಪೊಕ್ಕಂ। ಜನನೇತ್ರಾನಂದರೂಪಂ ಚತುರಕವಿಜನಾಸ್ಥಾನರತ್ನಪ್ರದೀಪಂ ॥೧೨೪॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪುತ್ರದೋಹಳನಿರೂಪಣಂ
ತೃತೀಯಾಶ್ವಾಸಂ ಸಂಪೂರ್ಣಂ.



—ಚತುರ್ಥಾಶ್ವಾಸಂ—

ಶ್ರೀವನಿತೆಯೆನಿಪ್ಪ ಧನ।
ಶ್ರೀವನಿತೆ ಮನಃಪ್ರಿಯಂ ಕೆಲಕ್ಕೇಟ್ತರೆ ಧಾ ॥
ತ್ರೀವಲ್ಲಭನಖಿಳಕಳಾ ।
ಕೋವಿದನೆನಿಸಿದ ನರೇಂದ್ರಚೂತಾರತ್ನಂ ॥೧

ಆಸಮಯದೊಳಾಸತಿ ಹೇ।
ವಾಸನದಿಂ ಬೇಗವಿೞಿದು ಬಾಷ್ಪಾಂಬುಗಳಂ ॥
ಸೂಸುತ್ತುಂ ಪರಿಚಾರಕಿ ।
ಪಾಸಿದ ಧವಳೋತ್ತರೀಯದೊಳ್ಕುಳ್ಳಿರ್ದಳ್ ॥೨

ಆಗಳಾಹೇಮಸಿಂಹಾಸನಾಸೀನನರಸನರಸಿಯ ಪರಿಮ್ಲಾನಮುಖ ಕಮಲಮನತಿವಿಸ್ಮಯಸ್ಫಾರಿತವಿಲೋಚನನಾಗಿ ನೋಡಿ ॥೩

ಕೆಳೆಯಂ ಬಿಟ್ಟುದು ಚಂಪಕಚ್ಛವಿಯೊಳಂಗಚ್ಛಾಯೆ ನೀಲೋತ್ಪಲಂ। ಗಳ ಚೆಲ್ವಂ ನಗಲೊಲ್ದುವಿಲ್ಲ ನಗೆಗಣ್ಗಳ್ ಪಕ್ವಬಿಂಬಾಧರಂ ॥ ಬೆಳಗಿ*ಂಪಂ ಸ್ಮಿತಕಾಂತಿಯಿಂ ತಳೆದುದಿಲ್ಲಾಸ್ಯಾನಿಳಂ ಶೀತಶೀ। ತಳಕಾಸಖ್ಯಮನೊಲ್ದುದಿಲ್ಲಬಲೆಗೀನೋವೇತಱಿಂದಾದುದೋ ? ॥

ಎಂದು ಮನದೊಳ್ ಬಗೆದಾಕೆಯ ಬಗೆಯಂ ಬಗೆದಂತೆ ತೀರ್ಚುವ ಪಾರಿಜಾತದ ಬಲ್ಮುಗಳ ಕಾಂತಿಯಂತೆ ದಂತಕಾಂತಿಗಳ್ಪಸರಿಸೆ ಮಹೀಕಾಂತನಿಂತೆಂದಂ ॥೪

೧. ಕೆಳೆಯಂ. ಗ॥ ೨. ನಾಥ. ಕ॥

ನಲ್ಲಳೆ ನಿನ್ನರುಣಾಧರ ।
ಪಲ್ಲವಮಾಱಿದುದು [೧]ಸುಯ್ದ ಸುಯ್ಯಿಂ ನಿನ್ನ ॥
ತ್ಫುಲ್ಲವಿಲೋಚನವಿದ್ಯು ।
ದ್ವಲ್ಲರಿ ಪೇೞ್ದುದು ಬಾಷ್ಪಜಲಕುಟ್ಮಲಮಂ ॥೬

ಬೇಸಗೆಯ ಬಿಸಿಲ ಸೋಂಕಿಂ ।
ವಾಸಂತೀವಲ್ಲಿ ಸರಡುವಿರ್ದಂತಿರೆ ನಿ ॥
ನ್ನೀಸುಕುಮಾರಲತಾತಿವಿ ।
ಳಾಸಮಿದೇಕಾರಣಂ ನಯಂಗುಂದಿದುದೋ ? ॥೭

[೨](ನಿರುಪಮವೃತ್ತ)

ಪಗಲ ತಿಂಗಳವೊಲೇಕೆ ಕಾಂತಿಯಂ ।
ನಗೆಮೊಗಂ ಕೆದಱಿದಾನೆ ಪ್ರೊಕ್ಕ ಬೇ ॥
ಸಗೆಯ ಕಾಡ ಕೆಱೆಯಂತೆ ನಾಡೆಯುಂ ।
ಬಗೆ ಕಲಂಕಿದುದಿದೇಕೆ ಕೋಮಳೇ ? ॥೮ 

ರಸಗೇಯಂ ನೆಲಿವೆರ್ಚದೇಕೆ ? ವಿತತಾತೋದ್ಯಸ್ವನಂ ಸೂಸದೇ ।
ಕೆ ಸುಧಾಸಾರಮನೀಕ್ಷಣಾಮೃತಮಯಂ ಲಾಸ್ಯಪ್ರಸಂಗಂ ಪ್ರವ ॥
ರ್ತಿಸದೇಕಿಂಚರಮಂ ವಿಪಂಚಿ ಮೊಱೆವತ್ತಿಲ್ಲೇಕೆ ? ತನ್ವಂಗಿ ನಿ ।
ನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲುತ್ತಾನವಂಶಸ್ವನಂ ? ॥೯

ಮಚ್ಚರಿಸುವ ಸವತಿಯರುಂ ।
ಮೆಚ್ಚಿಸದ ಸಖೀಕದಂಬಮುಂ ತಮ್ಮ ಮನಂ ॥
ಪಚ್ಚ ಪರಿಜನಮುಮಿಲ್ಲುಂ ।
ಮಚ್ಚುಮಿದೇಕಾಯ್ತು ನಿನಗೆ ಕಮಲದಳಾಕ್ಷೀ ॥೧೦

೧. ಸುಯ್ದು ಸುಯ್ಯುಂ. ಗ॥ ೨. ಕ॥ ಪುಸ್ತಕದಲ್ಲಿಲ್ಲ.

ಮಱೆಯಿಸದುಳ್ಳುದನುಳ್ಳಂ ।
ತಱಪೆನಗೆ ಶಿರೀಷದಾಮಕೋಮಳೆ ನಿನಗೇ ॥
ತಱ ದೆಸೆಯಿಂ ತೀರದುದಂ ।
ನೆಱ ತೀರ್ಚುವೆನೀಗಳಂತೆ ಬಿಸುಡುಮ್ಮಳಮಂ ॥೧೧
ಎಂದರಸಂ ನುಡಿವುದುಮಾ ।
ಸುಂದರಿಗಂತಂತೆ ಮಸ್ಕ್ಯ ಮಿಕ್ಕ್ಯ ಮನಸ್ತಾ ॥
ಪಂ ದಳ್ಳಿಸೆ ಗದ್ಗದಿಕೆಗ ।
ಳಂದೊಗೆದುವು ಕಂಠಕಂದಳಂ ಬೀಗುವಿನಂ ॥೧೨
ಕಾವಿಲ್ಲದ[1] ಕರ್ನೆಯ್ದಿಲ ।
ಪೂವಿಂ ಬಿಡುಮುತ್ತು ಬಿಡದೆ ಬಿಡುತಂದಪ್ಪುವೆಂ ॥
ಬೀವಿಸ್ಮಯಮಂ ಮಾಡಿದುವಾ ॥
ವನಿತೆಯ ನೀಳ್ದ ಕಣ್ಗಳುಂ ಕಣ್ಬನಿಯುಂ ॥೧೩
ಎಡವಱಯದೆ[2] ಕಣ್ಬನಿ ಪನಿ ।
ತೆಡೆಗಳ್ ಪಸುರೇಱ ನಸುಕಿಲುಂಬೇಱದ[3] ಕ ॥
ನ್ನಡಿಯ ವಿಲಾಸಮನೇಂ ಕ ।
ನ್ನಡಿಸಿದುವೊ ಕಪೋಳಯುಗಳಮಾಕೋಮಳೆಯಾ ॥೧೪
ಆಗಳರಸನತಿಸಂಭ್ರಮರಸಕ್ಷುಭಿತಚಿತ್ತನಾಗಿ ॥೧೫
ನನೆಯಂಬಂ ತಾವರೆವೂ ।
ವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ॥
ವನಿತೆಯ ಸಬಾಷ್ಪಲೋಚನ ।
ಮನವನಿಪತಿ ಶೋಣಪಾಣಿತಳದಿಂ ತೊಡೆದಂ ॥೧೬

೧. ಕನ್ನೆಯ್ದಲ. ಕ॥ ೨. ಎಡೆವಱಯದೆ. ಕ॥ ಗ॥ ೩. ನಸುಕೆಲುಂಬೇ. ಕ॥

ಅಂತು ತೊಡೆದು ॥೧೭

ಕಳವೀಣಾಕ್ವಣಿತಮನ ।
ಗ್ಗಳಸುವ ಕಳಕಂಠರವಮನೇಱಿಪ ನಿನ್ನೀ ॥
ಕಳಭಾಷಿತಮೆಂಬ ಸುಧಾ ।
ಜಳದಿಂ ಶ್ರವಣಾಭಿಷವಣಮಂ ಮಾಡದುದೇಂ ? ॥೧೮

ಎಂದೊಡಂ ಮಱುಮಾತುಗುಡದೆ ॥೧೯

ವದನಖಮಣಿದರ್ಪಣದೊ ।
ಳ್ವದನೇಂದುವನೀಕ್ಷಿಸುತ್ತುಮಿರೆ ಕೋಮಳೆ ಪಾ ॥
ರ್ಶ್ವದೊಳಿರ್ದ ಕೆಳದಿಯಂ ನೋ ।
ಡಿದನೀಷದ್ವಳಿತಕಂಧರಂ ಧರಣೀಶಂ ॥೨೦

ಆಗಳಾ ಪರಿಚಾರಿಕಾಪ್ರಧಾನೆ ಧವಳಪರಿಧಾನಪಲ್ಲವಮನಧರಪಲ್ಲವಕ್ಕೆ ತೆಗೆದು ॥೨೧

ನಿಜಕಾರುಣ್ಯದಿನಾವುದುಂ ಗಹನಮಿಲ್ಲೆತ್ತಂ ಸಪತ್ನೀಜನಂ ।
ನಿಜದಿಂ ಮೀಱುವರಿಲ್ಲ ಬೆರ್ಚದ ಸಖೀಸಂದೋಹಮಿಲ್ಲಾತ್ಮಜಂ ॥
ಭುಜನಂ ಕೂರದರಾರುಮಿಲ್ಲ ಪರಿವಾರಂ ದೇವ ದೇವೀಪದಾಂ ।
ಬುಜಸೇವಾತುರರಲ್ಲದಿಲ್ಲಱಿಯೆನಾಂ ನಿರ್ವೇಗಮಾದಂದಮಂ ॥೨೨

ಎಂದು ಮತ್ತಮಿಂತೆಂದಳ್ :— ಈತಮಾಳದ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತುಮುಮನಂಚೆವಾಳತಿಯಾ ಮಱಿಯೊಳಾದೆಱಕಮುಮಂ ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ

೨೨. ಕೂರದರ್- ಪ್ರೀತಿಸದವರು.
೨೩. ಅಂಚೆವಾಳತಿ=ಅಂಚೆ+ಬಾಳತಿ (ಬಾಣಂತಿ.)

೧. ನಿರ್ವೇದ. ಗ॥ ೨. ಅಂಚೆವಾಣತಿ. ಕ॥

ಪುಟ್ಟಿ ಪೋದ ಭವದೊಳಾದ ವಿಷಾದಕಾರಣಮನೇನಾನುಮಂ ನೆನೆದಂತೆ ಚಿಂತಾಕ್ರಾಂತೆಯಾಗಿರ್ದಳೆಂಬುದುಂ ವಿವೇಕವಿದ್ಯಾಧರಂ ಸುತದೋಹಳಕುತೂಹಳೆಯಾದುದಂ ಜಲಕ್ಕನಱಿದು ‖ ೨೩

ನಿನಗೀಚಿಂತಾಂತರಂ ತಕ್ಕುದೆ ಬಯಸದರಾರ್ ಸಂತತಿಪ್ರಾಪ್ತಿಯಂ ಪ್ರಾ। ಕ್ತನಪುಣ್ಯಪ್ರಾಪ್ತಿಯಿಂದಾಬಯಕೆ ಸಮನಿಕುಂ ಚಿಂತೆವೇಡಂತದರ್ಕೇ ‖ ನೆನೆ ಪುತ್ರೋತ್ಪತ್ತಿಹೇತುವ್ರತಸಮಿತಿಗಳಂ ಕೂಡೆ ನಾವಿರ್ಬರುಂ ಮು। ನ್ನಿನ ಜನ್ಮಂ ನೋಂತವಾಸ್ಸೈಪೆನಗೆ ವಿದಿತವಾಯ್ತಿಂದು ಪೂರ್ಣೇಂದುವಕ್ತ್ರೇ ‖ ೨೪

ಅದೆಂತೆನೆ ತನೂಭವಂ ತನಗೆ ಪುಟ್ಟಿ ಭೂಭಾಗಮಂ।
ತದೀಯಭುಜದಂಡದೊಳ್ತಳೆದು ನಮ್ಮದೊಂದನ್ವಯ ‖
ಪ್ರದೀಪನೆನಿಸಲ್ಕೆ [ಸಲ್ಲನೆ]ನುತುಂ ಮನಕ್ಕುಮ್ಮಳಂ।
ಪೊದಱ್ದೆನಗಂ ಸರೋಜದಳನೇತ್ರೆ ನಿನ್ನಂದದಿಂ ‖ ೨೫

ಅಳವಿಗಳಿದೆನ್ನ ಮನದು।
ಮ್ಮಳದಿಂ ಪರಿಣತನೆನಿಪ್ಪ ನೈಮಿತ್ತಿಕನಂ ‖
ಉಳಿತಾಳಕಿ ಬೆಸಗೊಳ್ಳೆ ತನು।
ಪುಳಕಿತಮಪ್ಪಂತು ಮನಮನಱಿದಿಂತೆಂದಂ ‖ ೨೬

ಭವದೀಯಾಭಿಮತಂ ಸುತಾಭ್ಯುದಯಲಾಭಂ ತತ್ಫಲಪ್ರಾಪ್ತಿ ನಿ। ಕ್ಕುವಮಕ್ಕುಂ ತಡವಿಲ್ಲದಾರ್ಯಜನತಾಶೀರ್ವಾದದಿಂ ಪಾತ್ರದಾ ‖ ನವಿಶೇಷವ್ಯಸನಂಗಳಂ ಜಿನಪದಾಂಭೋಜಾರ್ಚನಾಸಂತತೋ। ತ್ಸವದಿಂದೆಂಬುದುಮಾಸದಂ ನಿನಗೆ ಪೇೞಲ್ಬಂದೆನಬ್ಜಾನನೇ ‖ ೨೭

೨೪. ಜನ್ಮಂ- ಸಪ್ತಮ್ಯರ್ಥದಲ್ಲಿ ಪ್ರಥಮೆ. ಶ.ದ. ಸೂ‖ ೧೩೬
" ...ಸಪ್ತಮಿಯೊಳೆಸಂ‖ಗತಮಾಪ್ರಥಮಾಷಷ್ಠ್ಯೋ।ಚತುರ್ಥಿಗಳ್..."

ಎನಲೊಡಂ ॥ ೨೮

ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗಳ್ಗೆ ಗೆದಪುವಿಂದುಕಾಂತಮಣಿಪುತ್ರಿಕೆಯಿಂದೆನೆ ನಲ್ಲನುತ್ಸವೋ ॥ ಕ್ತಿಗಳವತುಸವಾಗೆ ಪುಳಕಾಂಕುರವೊರ್ವೊಗದಲಾದುವಾಲತಾಂ । ಗಿಗೆ ಪದೆದಾಲಿಸಲ್ಪಡೆವರಾರೊ ತನೂಭವಲಾಭವಾರ್ತೆಯಂ ॥ ೨೯

ಆಸತಿಗೆ ಪುಟ್ಟೆ ಹರ್ಷವಿ ।
ಳಾಸಂ ಮಧುಬಿಂದುಮಾಳೆ ನೀಲೋತ್ಪಲದಿಂ ॥
ಸೂಸುವವೊಲ್ನಗೆಗಣ್ಣಿಂ ।
ಸೂಸಿದುವಾನಂದಬಾಷ್ಪಬಿಂದುವಿತಾನಂ ॥ ೩೦

ಪರಿಯೆ ಪರ್ವಿದ ಮಂಜು ರಂಜಿಸುವಂತೆ ತಾವರೆ ನಾಡೆಯುಂ । ಕೊರಗಿದಾನನಮಾಗಳಾಗಳದೇನರಲ್ದುದೊ ಧೂಳಧೂ ॥ ಸರಿತಮಾದ ಸುವರ್ಣಪುತ್ರಿಕೆ ಬಣ್ಣವಿಟ್ಟವೊಲೆಯ್ದೆ ನಿ । ಬ್ಬರಿಸಿದಂಗಮಪೂರ್ವಕಾಂತಿಗೆ ತೊಟ್ಟನೇನೆಡೆಗೊಟ್ಟುದೋ ! ॥ ೩೧

ಅಂತಾಕಾಂತೆ ಹರ್ಷರಸತರಂಗಿತಾಂತರಂಗೆಯಾಗಿರ್ಪಿನಮಾಪ್ರಸ್ತಾವದೊಳ್ ॥ ೩೨

ಎಳೆಯುಡಕೆಯ ಫಲಮುಂ ಮಾ ।
ತುಳುಂಗಮುಂ ನಾರಿಕೇಳಫಳಮುಂ ದ್ರಾಕ್ಷಾ ॥
ಫಳಮುಂ ಕಾಂಚನಕದಳೀ ।
ಫಳಮುಂ ಗೃಹವನಮಹತ್ತರಂ ತಂದಿತ್ತಂ ॥ ೩೩

ಆಗಳರಸನವಸರೋಚಿತಫಳಪ್ರಾಪ್ತಿಗೆ ಸಂತಸಂಬಟ್ಟು ವನಮಹತ್ತರಂಗೆ ಮೆಚ್ಚುಗೊಟ್ಟು ಪಾರಿಜಾತಪ್ರಲಂಬಶಾಖಾನುಕಾರಿಯಪ್ಪ

ದಕ್ಷಿಣಹಸ್ತದಿಂ ಪ್ರಶಸ್ತಮಾತುಳುಂಗಫಲಮನರಸಿಗೀವುದುಂ ಕೆಲದೊಳಿರ್ದ ಸಂಭಾಷಿತಚತುರೆಯಪ್ಪ ಸಹಚರಿ ॥ ೩೪

ದೇವಿಯರೊಂದಭಿಲಷಿತಫ ।
ಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದ ಫಳಂ ॥
ಕೇವಲಶುಭಸೂಚಕಮೆಂ ।
ದಾವಧು ಗುಡಿಗಟ್ಟಿ ಚೀನಚೇಲಾಂಚಲಮಂ ॥ ೩೫

ಆಗಳರಸನತಿಹರ್ಷಚಿತ್ತನರ್ಹತ್ಪರಮೇಶ್ವರಪೂಜಾವಿಧಿಗಳಂ ನಿಯೋಜಿಸಿ ಬಿಜಯಂಗೆಯ್ವುದುಮಾಮಹಾನುಭಾವೆ ವೈಶ್ರವಣವಲ್ಲಭನಿಯಾಮದಿಂ ಶುಚಿಭೂತೆಯುಮತಿಸಮಾಹಿತಚಿತ್ತೆಯುಮಾಗಿ ॥

ಸುತಲಾಭಾರ್ಥಿ ವಿಶೇಷತೀರ್ಥಜಲದಿಂ ಶ್ರೀಖಂಡದಿಂದಕ್ಷತಾ ।
ಕ್ಷತದಿಂ ಕಾಂತಲತಾಂತಮಾಲಿಕೆಗಳಿಂ ದಿವ್ಯಾನ್ನದಿಂ ರತ್ನರಂ ॥
ಜಿತದೀಪಪ್ರಚಯಂಗಳಿಂದಗರುಧೂಪಸ್ತೋಮದಿಂ ಮಂಗಲೋ ।
ಚಿತನಾನಾಫಲದಿಂ ಲತಾಂಗಿ ಜಿನಪಾದಾಭ್ಯರ್ಚನಂಮಾಡಿದಳ್ ॥ ೩೭

ಮಾಣಿಕದ ಸೊಡರ್*ಗಳಿಂ ನೇ ।
ರಾಣಿಯ ಪೊನ್ನಲರ್*ಗಳಿಂ ಹರಿದ್ರತ್ನಚತು ॥
ಷ್ಕೋಣಕಲಶಂಗಳಿಂ ಗೀ ।
ರ್ವಾಣಾರ್ಚಿತನಂ ನರೇಂದ್ರವಧುವರ್ಚಿಸಿದಳ್ ॥ ೩೮

ಭ್ರಮರಹಿತಂ ಹೃದ್ಯಂ ಸ್ಮೇ ।
ರಮುಖಂ ಲೋಕೈಕಹಿತಕರಂ ಸುಕುಮಾರಂ ॥
ಸಮನಿಸುಗೆಂದರ್ಚಿಸಿದಳ್ ।
ಸುಮನೋಮಂಜರಿಯಿನಾಕೆ ಸುಮನಸ್ಸ್ತುತನಂ ॥ ೩೯

೩೮. ಸೇರಾಣಿಯ- (?)

ತೊಳಗುವ ದೀಪಾವಳಿಯಿಂ ।
ವಿಳಾಸವತಿ ಪಾತ್ರದೊಳ್ಗುಣಸ್ನೇಹದಿನು ॥
ಜ್ಜ್ವಳಿಸುವ ತೇಜೋನಿಲಯಂ ।
ಕುಳದೀಪಕನಕ್ಕೆ ತನಯನೆಂದರ್ಚಿಸಿದಳ್ ॥೪೦

ಅಟ್ಟುವ ಸೀಯನಪ್ಪ ರಸಗೇಯಮುದಂ ಗೆಡೆಗೊಂಡು ಚಿತ್ತಮಂ।
ಮುಟ್ಟುವ ಹೃದ್ಯವಾದ್ಯಲಯದೋಜೆಯಿನೊಂದೆ ಲಯಕ್ಕೆ ಲಕ್ಕೆಯಂ॥
ಮೆಟ್ಟುವ ಪೆಕ್ಕಣಂ ತುಱುಗಿ ಕಟ್ಟುವ ವಂದನಮಾಲೆ ಲೀಲೆಯಂ ।
ಪುಟ್ಟಸೆ ನಿಚ್ಚಮರ್ಚಿಸುವಳಾಸತಿ ದಿವ್ಯಜಿನೇಂದ್ರಗೇಹಮಂ ॥೪೧

ಈವುದತಿವಿಶದವೃತ್ತಿ ಗು ।
ಣಾವಿಷ್ಕೃತನಪ್ಪ ಸುತನನೆಂದುಜ್ಜ್ವಲಮು ॥
ಕ್ತಾವಳಿಯಿಂ ಜಿನಶಾಸನ ।
ದೇವಿಯರಂ ದೇವಿ ರಾಗದಿಂದರ್ಚಿಸಿದಳ್ ॥೪೨

ಪೊಸಗಾರ ತಂದಲೊಳ್ಪರ ।
ಮಸವಾಧಿಯೊಳೊಂದಿ ಮರದ ಮೊದಲೊಳ್ನೀವರ್ ॥
ನಿಸನಂತಿರೆ ಬಗೆಯದೆ ಸ ।
ರ್ವಸಾಧುಗಳನಾನರೇಂದ್ರವಧುವರ್ಚಿಸಿದಳ್ ॥೪೩

ಅಪ್ರಮಿತರಿಂದುಕಾಂತಶಿ ।
ಲಾಪ್ರತಿಮೆವೊಲಾಗೆ ಮಾಗಿಯೊಳ್ಮಂಜಿಂಗಂ ॥
ಗಪ್ರತ್ಯಂಗಂ ಸತಿ ರಾ ।
ತ್ರಿಪ್ರತಿಮಾಯೋಗಮಿರ್ದರಂ ಬಲಗೊಂಡಳ್ ॥೪೪

ತಪದಿಂ ಶ್ರುತದಿಂ ನೆಱೆದಾ ।

೧. ಯೊಲಾಗೆ.ಕ॥, ಯೊಳಾಗೆ.ಗ॥ ೨. ಭೃತದಿಂ.ಗ॥

ತಪಯೋಗಂ ತಮ್ಮ ಬಗೆಗೆ ಶರದದ ಚಂದ್ರಾ ||
ತಪಯೋಗಮೆನಿಪ ಮುನಿಯುಂ |
ತಪನೀಯಸರೋಜರಾಜಿಯಿಂ ಪೂಜಿಸಿದಳ್ ||೪೫

ಮಾನಿನಿ ನಾಲ್ಕುಂ ನಿಯಮವಿ |
ಧಾನದ ಬೞಸಂದು ನಿಟ್ಟೆಯಿಂ ಚರಿಯಿಸಿ ಸಂ ||
ತಾನಾರ್ಥಮೆನೆ ಚತುರ್ವಿಧ |
ದಾನವ್ಯಸನದೊಳೆ ದಿವಸಮಂ ನಡೆಯಿಸುವಳ್ ||೪೬

ಅನುಲೇಪಂ ತನುವಿಂಗೆ ಮಾಲೆ ಕಬರೀಭಾರಕ್ಕೆ ಹಾರಂ ಘನ |
ಸ್ತನಭಾರಕ್ಕತಿಭಾರಮೆಂಬ ಸುಕುಮಾರಶ್ರೀಯನಾಳ್ದನಿತಂ ||
ಬಿನಿ ಭೂಶಯ್ಯೆಗೆ ಜಾಗರಕ್ಕನಶನಕ್ಕೇಕಾಂತರಕ್ಕೇಕಭು |
ಕ್ತಿನಿಯಾಮಕ್ಕೊಡಲಂ ನಿಯೋಜಿಸಿದಳಾಶಾಶಕ್ತಿ ಸಾಮಾನ್ಯಮೇ ||

ಅಂತಾಕಾಂತೆ ಚಿಂತಿತಫಲಪ್ರದಾನದಕ್ಷಮಪ್ಪ [೧]ದಾನಮುಂ ಬಂಧು ಸಂಭಾವಿತಪುತ್ರಜನ್ಮೋತ್ಸವಮಪ್ಪ ಪೂಜೆಯುಮಂ ಸುತದೋಹಳಾನುಕೂಲಮಪ್ಪ ಶಿಲೀಮುಖಕಾಮ್ಯಫಲಜನ್ಮಾವಾಸಮುಮನುತ್ತರೋತ್ತರಮೆನೆ ನೆಗೞುತ್ತುಂ||೪೭

[೨]ಪೊರೆಯದೆ ರಾಗದೊಳ್ ಪೊಡರಲೀಯದೆ ತಾಳ್ದ ಕಳಂಕಮಂ ಮ
ಸುಂ | ಧರೆ ತನಗಳ್ಕಱುಂದೆಱಗೆ ಸತ್ಪಥವರ್ತನೆ ಮುಂದದುತ್ತರೋ ||
ತ್ತರಮೆನೆ ನಿರ್ಮಲಾಂಬರವಿಚಿತ್ರಿತಕೋಮಳಗಾತ್ರೆ ನಾಡೆಯುಂ | ತ
ರುಣಿ ಕೃಶತ್ವಮಂ ನಿಯಮದಿಂ ತಳೆದಳ್ ತುಹಿನಾಂ[೩]ಶುಲೇಖೆವೋಲ್ ||

ಸಕಲಸುಖಹೇತುವಂ ಪು |

೧. ದಾನಮೆ ಬಂದು. ಕ||, ದಾನಮೆಂಬುದು. ಗ||
೨. ಪೊರೆಯದ. ಕ||　　೩. ಲೇಖೆಯೋಲ್. ಕ|| ಗ||

ತ್ರಕಾವ್ಯದಿಂ ವ್ರತಮನಱಿಗೆ ಮಾಱುವವ್ರೋಲ್ ಮಾ ॥
ಣಿಕಮಂ ನೋಂತಳದೆಂತುಱಿ ।
ಸುಕುಮಾರಂಗಳ್ವಿಲಾಸವತಿಯರ ಮತಿಗಳ್ ॥೫೦

ಅಂತು ಅನೇಕನಿಯಮನಿಯಮಿತೆಯಾಗಿರ್ದೊಂದು ದಿವಸಂ ಲ
ಕ್ಷ್ಮೀಮಹಾದೇವಿ ॥೫೧

ಫಳವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್ ।
ಕುಳವತಿದೇವಿ ಪುಷ್ಪವತಿಯಾಗಿ ವಿಲಾಸಮನಪ್ಪುಕೆಯ್ದು ಕ ॥
ಣ್ಗೊಳಸಿದಳಿಂದುಕಾಂತಮಣಿಮಂಗಳರಂಗದೊಳಬ್ಜನಾಳಮಂ ।
ಸೆಳೆವಿಡಿದಂಗಜನ್ಮಜಯಲಕ್ಷ್ಮಿಯ ಲಾಸಿಕೆಯೀಕೆಯೆಂಬಿನಂ ॥೫೨

ಅಂತು ಪುಷ್ಪವತಿಯಾಗಿ ಚತುರ್ಥಸ್ನಪನಮಾಂಗಲ್ಯಪುರಸ್ಸರ
ಮರ್ಹತ್ಪೂಜಾಮಂಗಳಮನಾಚರಿಸಿ ॥೫೩

ಕಡೆದನೊ ಚಂದ್ರಕಾಂತಮಣಿಯಿಂ ಮದನಂ ಬಿಸಕಾಂಡಗರ್ಭದಿಂ ।
ಪಡೆದನೊ ಪದ್ಮಗರ್ಭನೆನೆ ಭೂಷಣವಸ್ತ್ರವಿಲೇಪನಾಂಶುಗಳ್ ॥
ಪಡೆಯೆ ವಿಲಾಸಮಂ ದಶನದೀಧಿತಿಯಿಂ ದರಹಾಸಲಕ್ಷ್ಮಿ ನೊ ।
ರ್ಮಡಿಸೆ ಬೆಡಂಗುವೆತ್ತುದು ನರೇಂದ್ರವಧೂಧವಳಪ್ರಸಾಧನಂ ॥೫೪

ಅಂತು ಕೈಗೆಯ್ದು ಸೆಜ್ಜೆವನೆಗೆ ಬಿಜಯಂಗೆಯ್ದನಲ್ಪತಳ್ಪತಳ
ದೊಳ್ ನಿಜಮನೋವಲ್ಲಭನೊಡನೆ ಪವಡಿಸಿ ॥೫೫

---

೫೦. ಅಱಿ-ತಕ್ರ, ಮಜ್ಜಿಗೆ.
೫೨. ಲಾಸಿಕೆ- ನರ್ತಕಿಯು.
೫೫. ಕೈಗೆಯ್ದು- ಅಲಂಕರಿಸಿಕೊಂಡು.

---

೧. ತುಟಿ: ಕ॥

ಹೇಮಸರೋಜದೊಳ್ತಳೆದು ಮಾಣಿಕಮಂ ಶರದಭ್ರಶುಭ್ರಮಂ ।
ತಾಮರಸಪ್ರಸೂನಮನದಕ್ಕೆ ನೆಲಲ್ವಿಡಿದೊರ್ವಳುತ್ಪಲ ॥
ಶ್ಯಾಮಳೆ ಮಂಗಳಾಭರಣಭೂಷಿತೆ ತಂದದನೀವುದಂ ಲತಾ ।
ಕೋಮಳೆ ಕಂಡಳಭ್ಯುದಯಕಾರಣಮಂ ಕನಸಂ ನಿಶಾಂತ್ಯದೊಳ್ ॥

ತದನಂತರಮಾಕಾಂತೆಗೆ ॥೫೭

ಗೃಹದೀರ್ಘಿಕೆಯಿಂದೆಬ್ಬಿ ।
ರ್ಕೆ ಹಂಸರುತಿ ಮಧುರಮಧುಕರೀಝಂಕಾರಂ ॥
ಬಹುವಿಧಗೀತರಸಾಮೃತ ।
ಲಹರಿಗಳತ್ತುವು ಸುಖಪ್ರಬೋಧಮನಾಗಳ್ ॥೫೮

ಅಂತೆಬ್ಬಿರ್ತು ನಿತ್ಯನಿಯಮಂಗಳಂ ತೀರ್ಚಿ ಲಕ್ಷ್ಮೀಮಹಾದೇವಿ ಕಮಳನೀಲಕ್ಷ್ಮಿಯಂತೆ ವಿಕಾಸಲಕ್ಷ್ಮಿಯನಪ್ಪುಕೆಯ್ದು ಮಣಿಮಯಾಸನಮನಲಂಕರಿಸಿ ಮಂಗಳಾಭರಣಭೂಷಿತೆ ಮಣಿದರ್ಪಣಮನಾಳೋಕಿಸುತ್ತುಂ ವಿದಗ್ಧವನಿತಾಪರೀತೆಯಾಗಿರ್ಪಿನಂ ॥೫೯

ಅತಿಲಲಿತಾರ್ಯವೇಷಮುಳವಟ್ಟರೆ ಸಜ್ಜನಸಂಸ್ತುತಂ ನಿಜಾ ।
ಕೃತಿಯೆನೆ ಬಂದು ಮಂತ್ರಯುತಮಾನ್ರುಪಕಾಂತೆಗೆ ಕೊಟ್ಟನಕ್ಷತಾ ॥ ಕ್ಷತಫಲಪುಷ್ಪಮಾಲೆಯನಶೇಷನಿಮಿತ್ತಕಳಾಸಮಾಹಿತಂ ॥ ಹಿತನಧಿಕಪ್ರಮೋದಸಹಿತಂ ವಸುಧಾಮಹಿತಂ ಪುರೋಹಿತಂ ॥೬೦

ಅನಂತರಮಾಪುರೋಹಿತಂ ನಿಜನಿಯಮಪ್ರಮಿತಪ್ರದೇಶನಿವೇದಿತಾಸನಾಸೀನನಪ್ಪುದುಮಾಸಮಯದೊಳವನಿಪತಿಯ ಪರಮಪ್ರೀತಿಯೇ ಮೂರ್ತಿಮತಿಯಾಗಿ ಬರ್ಪಂತೆ ಮತಿಯೊಳತಿಶೀಘ್ರಗತಿಯೊಳುತ್ಸುಕೆಯಾಗಿಯುಂ ನಿಬಿಡನಿತಂಬಭಾರದಿಂ ಗುಜ್ಜುಮೆಟ್ಟುತ್ತುಂ ನೂಲ ತೊಂಗುಲುಲಿಯಿನರಸಿಯಂ ಪುತ್ರವತಿಯಾಗೆಂದು ಪರಸುವಂತೆ

ಮುಗುಳ್ನಗೆಯನುಗುಳ್ವ ಕಡೆಗಣ್ಣ ಕಾಂತಿಯಿಂ ಗುಡಿಗಟ್ಟುವಂತೆ ಮಣಿಕುಟ್ಟಿಮತಳಮನೆಯ್ದಿವಂದು ಲಲಾಟತಟಘಟಿತ ಪಾಣಿಪಲ್ಲವೆ ದೇವಿ ದೇವಿಯರ್ಗೆ ರಸನಿರುಳ್ ಪರಿಹಾಸವಚನದಿಂ ಸೋಲ್ತು ಸೋಲ ದಿಂ ಕೊಟ್ಟಪಟ್ಟದನೆಂದು ಬಿನ್ನವಿಸಿ ಬೆಳ್ಮುಗಿಲ ತೆಳ್ವೊರೆಯಿನಿಂದ್ರ ಚಾಪಲೇಖೆಯಂ ತೆಗೆವ ಶರಲ್ಲಕ್ಷ್ಮಿಯಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು ॥೬೧

ನವದೂರ್ವಾಂಕುರಮಂ ಪ।
ಲ್ಲವಮಂ ಪೂಗೊಂಚಲಂ ತೆರಂ ತೆರದಿಂ ನೀ ॥
ಡುವಪೊಲ್ಮಣಿಕಿರಣಂ ಪೊ।
ಣ್ಮುವಿನಂ ಮಣಿದೊಡವನೊರ್ವಳಂಗನೆಗಿತ್ತಳ್ ॥೬೨

ಆಗಳರಸಿಯುಮಿರುಳಿನ ಶುಭಸ್ವಪ್ನಕ್ಕೆ ನೆರವಾದುದೆಂಬನುರಾಗೆ ಮಳುಂಬವಾಗೆ ॥೬೩

ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಹುರತ್ನಕಾಂತಿಗಳ್ ।
ಪುದಿಯೆ ಲತಾಂಗಿ ತಾಂಗಿ ಲಲಿತಾಂಗುಳಿಯೊಳ್ ನಡೆ ನೋಡಿ ನಲ್ಲನ ॥
ಟ್ಟಿದ ದಯೆ ರತ್ನಭೂಷಣದ ಚೆಲ್ವನುರಾಗದ ಬಳ್ಳಿವಳ್ಳಿಯಂ।
ಹೃದಯದೊಳಂದು ಪರ್ವಿಸುವುದುಂ ತಳೆದಳ್ ಪುಳಕಾಂಕುರಂಗಳಂ॥

ಅಂತು ಸಂತಸದಂತನೆಯ್ದಿ ವಿಚಿತ್ರಾಭರಣಂಗಳಂ ಪರಿಚಾರಿಕೆಗೆ ತರಿಸಿ ಕೊಟ್ಟಾಕೆಯನುಚಿತಸಂಭಾಷಣೆಗಳಂ ತಣಿಪಿ ನಿಜಪ್ರಮೋದದ ಮನಱಿಪಲಟ್ಟುವಂತರಸನಲ್ಲಿಗೆ ವಿಸರ್ಜಿಸಿ ತಾಂಬೂಲದಾನಪುರಸ್ಸರಂ ಪುರೋಹಿತಂಗಿರುಳ್ ಕಂಡ ಕನಸನಱಿಪುಪುದುಮುದನವಧಾರಿಸಿ ॥೬೫

ದೇವಿಯರಿನ್ನೆಗಂ ನೆಗಟ್ದಿ* ನಿತ್ಯನಿಯಾಮದ ನಿಟ್ಟೆ ದೇವಪೂ।
ಜಾವಿಧಿ ಪಾತ್ರದಾನದೆಸಕಂ ಫಳದಾಯಕವಾದುದಲ್ಲದಂ ॥

ದಾವಳೊ ಕಾಣ್ಬಳೀದೊರೆಯನುತ್ಸವಹೇತುವನಿಷ್ಟಸಿದ್ಧಿಸ । ದ್ಭಾವವುನನ್ವಯಾಭ್ಯುದಯಕಾರಣಮಂ ಕನಸಂ ತನೂದರೀ ॥೬೬

ಒಡೆಯಂ ಶ್ವೇತಾತಪತ್ರಕ್ಕಮಳಕಮಳದಿಂ ಹೇಮಸಾಮ್ರಾಜ್ಯ ಪೀಠ। ಕ್ಕೊಡೆಯಂ ಹೇಮಾಬ್ಜದಿಂ ರತ್ನದಿನಖಿಳದಿಶಾಕ್ರಾಂತತೇಜಂ ತನೂಜಂ ॥ ತೊಡವೀಲೋಕಕ್ಕೆನಿಪ್ಪಂ ಸಮನಿಸುಗುಮದಂ ಕಾಮಿ ನೀರೂಪದಿಂ ಕ। ನ್ನಡಿಸಿತ್ತವ್ಯಾಕುಳಂ ಪುಣ್ಯವತಿ ಕನಸಿನೊಳ್ನನ್ನ ಪುಣ್ಯಾಧಿದೈವಂ ॥೬೭

ಅದಲ್ಲದೆಯುಂ ॥೬೮

ಗುಣಮನೊಳಕೊಂಡು ಕಾಂತಿಯೊ ।
ಳ್ಗಣೆ ತನಗಿಲ್ಲೆನೆ ಕಳಂಕವಿಲ್ಲದ ಶುಭಲ ।
ಕ್ಷಣನಂದನಲಾಭಮನೀ ।
ಮಣಿಭೂಷಣಲಾಭಮುಱಪದೇ ಪುಣ್ಯವತೀ ॥೬೯

ಎಂದಱಪಿದ ಪುರೋಹಿತನಂ ಮಣಿಕುಂಡಲದುಕೂಲವಸನಾದಿದಾನ ಸನ್ಮಾನದಿಂ ಸಂತಸಂಬಡಿಸಿ ತದಾಶೀರ್ವಾದಪಾರಿಜಾತಸ್ತಬಕಾವತಂ ಸೆ ವಿನಯದಿಂ ವಿಸರ್ಜಿಸೆ ॥೭೦

ಕಿವಿಯೊಳ್ಪೊಯ್ದು ಪುರೋಹಿತಂ ಹಿತವಚಃಪೀಯೂಷಮಂ ಪೋಪುದುಂ। ಯುವತೀರತ್ನಮದೆಲ್ಲಮಂ ಮನದೆಗೊಂಡಾಗಳ್ಪ್ರತೋ ತ್ಸಾಹಮಾ ॥ ದವೊಲುತ್ಸಾಹಮನಾಳ್ದು ಚಂದ್ರಕಿರಣಂ ತಳ್ಪೊಯ್ದು ಮಾದ್ಯಚ್ಚಕೋ । ರವಧೂಲೀಲೆಯನೇಂ ಲಸತ್ಕುಮುದಿನೀಸೌಂದ ರ್ಯಮಂ ತಾಳ್ದಿದಳ್ ॥೭೧

ಅಂತತಿಪ್ರಮೋದರಸಪ್ರವಾಹದೊಳ್ ಮನಮನೋಲಾಡಿಸಿ ಕಿಱು ದುಂ ಪೊಟ್ತುನಿರ್ದು ಮಣಿಮಯಾಸನದಿಂದೆರ್ದು ಮದನಮೋಹನ

ವಿದ್ಯಾದೇವತೆಯು ಪರಿವಾರದೇವತೆಯುರಂತೆ ಪರಿಚರ್ಯಾಚಾತುರ್ಯಮನೆ ಪ್ಪುಕೆಯ್ದು ಪರಿವಾರವಧೂಜನವಳಕಜಾಳದಿನಳಿಮಾಳೆಯುಂ ನೆರ ಪುವಂತೆ ತರಳಲೋಚನಮರೀಚಿಯಿಂ ದಿಗ್ಭಿತ್ತಿಯುಂ ತೆರೆಸುತ್ತು ವಂತೆ ವಿಭ್ರಮಭ್ರೂಲತಿಕೆಯಿನತನುಚಾಪಮಂ ಪಸರಿಸುವಂತೆ ಬಿಂಬಾ ಧರಕಾಂತಿಯಿಂ ಕುತುರಾಗರಸದ ಪ್ರೊನಲಂ ತಿರ್ದುವಂತೆ ಮಣಿಭೂಷ ಣಮಯೂಖಮಾಲೆಯಿನಂಬರಮಂ ಚಿತ್ರಿಸುವಂತೆ ಬಳಸಿಬರೆ ‖೭೦

ಆವೆಡೆ ಹಂಸಿಗೀನಡೆಯ ಚೆಲ್ವೆನೆ ನೂಪುರದಿಂಚರಂ ಸ್ಮರಂ ।
ಜೇವೊಡೆದಂದಮಾಗೆ ಮೃದುಪಾದತಳಂಗಳ ಕೆಂಪು ಕೂಡೆ ಕೆಂ ‖
ದಾವರೆವೂಗಳಂ ಕೆದಱುವಂತಿರೆ ಕುಂತಳ ಸೌರಭಕ್ಕೆ ಭೃಂ ।
ಗಾವಳಿ ಮೇಲೆ ಪೇಲಿದಱಿಯುಂತಿರೆ ಬಂದಳದೊಂದು ಲೀಲೆಯಿಂ ‖೭೩

ಆಗಳವನೀಪತಿ ಭೋಂಕನುಣ್ಮಿ ಪ್ರೊಣ್ಮಿದ ಮಣಿನೂಪುರಕಿಂಕಿ ಣೀಕ್ವಣಿತಂಗಳುಮಂ ಮಣಿಮೇಖಳಾವಳಯಘಟಿತಘುಂಟಾರವಂಗಳು ಮಂ ಮಣಿಶೃಂಖಳಾಕಳಾಪಝುಂಕಾರಂಗಳುಮಂ ಮಣಿಕಟಕಚಟು ಳನಿನದಂಗಳುಮನಾಲಿಸಿ ನಿಜಮನೋವಲ್ಲಭೆಯ ಬರವನಱಿದೆಮೆಯಿ ಕ್ಕದಾದೆಸೆಯುನವಳೋಕಿಸುತ್ತಿರ್ಪುದುಂ ಸಂತತಸೇವಾಗತಮಹಾ ಸಾಮಂತಸಂದೋಹಮುವಸರಭೀತಿಯಿಂ ತೊಲಗಿ ಪೋಗೆಯುಂ ನಿಜ ನಿಯತಪ್ರದೇಶದಿಂ ಪ್ರತೀಹಾರರತಿದೂರಮಾಗೆಯುಂ ಲಕ್ಷ್ಮೀಮತಿ ಮಹಾದೇವಿ ತದಾಸ್ಥಾನಭವನಮಂ ಪುಗುವುದುಂ ‖೭೪

ತನುವಿನ ರುಚಿಯುಂ ಮಣಿಮಂ ।
ಡನರುಚಿಯುಂ ನಯನಶಫರಮಂ ತೆಗೆವ ಮನೋ ‖
ಜನ ಜಾಲಮೆಂಬಿನಂ ತೆ ।
ಕ್ಕನೆ ತೀವಿದುವಾಗಳಾಸಭಾಂಭೋಜಿನಿಯಂ ‖೭೫

ನೆರೆದು ನರೇಂದ್ರನೋಲಗದೊಳಿರ್ದ ವಧೂಜನಮಿರ್ದು ಸಂಭ್ರಮಂ।
ಬೆರಸು ನೊಸಲ್ಗೆ ಕಯ್ಯನಿರದೊಯ್ಯೆ ಪಸುರ್ಮಣಿಕಂಕಣಂಗಳಿಂ ॥
ಚರಮೊಡನುಣ್ಮಿ ಮಾಡಿದುದು ರಕ್ತಸರೋರುಹನಾಳಜಾಳಮಂ।
ತರತರದಿಂದೆ ಸುತ್ತಿವಳನೀಕರರಝುಂಕೃತಮೆಂಬ ಶಂಕೆಯಂ ॥೭೬

ಆಸಮಯದೊಳ್ ॥೭೭

ಪ್ರೇಮಾಲೋಕನಸುಮನೋ।
ಧಾಮದೆ ಬರೆ ತೆಗೆಯೆ ಭೂಭುಜಂ ನಿಜತನುದಿ।
ವ್ಯಾಮೋದಂ ಬಳಸೆ ಲತಾ।
ಕೋಮಳೆ ಕುಳ್ಳಿರ್ದಳೊಡನೆ ಹೇಮಾಸನದೊಳ್ ॥೭೮

ಅಂತಿರ್ದುಂ ॥೭೯

ಚಳಲೋಚನಚಂದ್ರಾತಪ।
ವಿಳಾಸಮುಖಚಂದ್ರಬಿಂಬಮೀಗಳತ್ತರಾ ॥
ವಳಯಿತಮಾಯ್ತೆನಲಿಕ್ಕಿದ।
ನಿಳಾಧಿಪತಿ ಸತಿಯ ಕೊರಲೊಳೆಕ್ಕಾವಳಿಯಂ ॥೮೦

ಆಗಳೊರ್ವಳಂತಃಪುರಕಾಂತೆ ವಯಃಪರಿಣತಿಯೊಡನೆ ಪರಿಣತಿವಡೆದ ವಚನಚಾತುರ್ಯಮುಂ ಮೆಱೆಯಲರಸಿಗಿಂತೆಂದಳ್ ॥೮೧

ತಾಂ ಬಂದು ನಿಮ್ಮ ಬಯಸಿದು।
ದಂ ಬೇಗಂ ತೀರ್ಚೆ ಪೋದುದಿನ್ನೆಗಮೀಗಳ್ ॥
ನೀಂ ಬಿಜಯಂಗೆಯ್ದರಸಂ।
ಗಂಬುಜಮುಖಿ ಬಱದೆ ಸೊಬಗನಿಂತೇಱಿಸುವೈ ॥೮೨

ಎಂಬುದುಮರಸಂ ದರಹಸಿತವದನಾರವಿಂದನಾಗಿ ॥೮೩

ಆಂ ಬರ್ಪೆನ್ನೆಗಮಿರದೆ।

ನ್ನಂ ಬರವೇೞ್ದಿಟ್ಟದೆನ್ನ ಕಣ್ಬೊಣರೆಂಬೀ ||
ಮೀಂಬೊಣರಂ ಲಾವಣ್ಯರ |
ಸಾಂಬುಧಿಯೊಳ್ದೇವಿ ಮೂಡಿ ಮುಳ್ಕಾಡಿಸುವೈ ||೮೪

ಎನಲೊಡಂ ||೮೫

ಪವಳದ ಬಟ್ಟಂ ನಿಪ್ಪೊಸ |
೧ತಿವೆನಿಪ ಮುತ್ತುಗಳ ಕಾಂತಿಗಳ್ ಮುತ್ತುವವೊಲ್ ||
ಧವಳೇಕ್ಷಣೆ ಬಾಯ್ದೆೞೆಯುಂ |
ಧವಳಿಸೆ ನಿಜದಂತಕಾಂತಿಸಂತಾನಂಗಳ್ ||೮೬

ಪೂರ್ಣೇಂದುವದನೆ ಕೞ್ೞುದು |
ಕರ್ಣಾಮೃತವರ್ಷಮೆನಿಸಿ ಕನಸಿನ ಫಲಮಂ ||
ನಿರ್ಣಯಮಾಗಿರೆ ತನಗಾ |
ವರ್ಣೋತ್ತಮನಱಿಪಿದನಿತುಮಂ ನೆಱೆ ನುಡಿದಳ್ ||೮೭

ಲಲನೆಯ ನುಡಿಯಿಂ ಹರ್ಷಂ |
ನೆಲೆವೆರ್ಚೆ ಸುಧಾಂಶುಲೇಖೆಯೆಳವೆಳಗಿಂದಂ ||
ನೆಲೆವೆರ್ಚುವ ಪಾಲ್ಗಡಲಂ |
ಗೆಲೆವಂದಂ ನೃಪಗುಣಾಶ್ರಯಂ ವೈಶ್ರವಣಂ ||೮೮

ನೆರವೆನಗಕ್ಕುಮೀಸತಿಗೆ ಪುಟ್ಟದ ಬಾಳಕನೀಧರಿತ್ರಿಯಂ |
ಧರಿಯಿಸಲೆಂಬ ಸಂತಸದಿನುಣ್ಮಿದವೊಲ್ಪುಳಕಂ ನೃಪಾಲದೋಃ ||
ಪರಿಘದೊಳಾಗಳುಣ್ಮಿದುವು ಮೋಹಲತಾಪರಿವೃದ್ಧಿಗೀಗಳೀ |
ಸುರಿವುವೆ ಕಣ್ಣ ಪಾಪೆಯೆನೆ ಪೊಣ್ಮಿದುವುತ್ಸವಬಾಷ್ಪವಾರಿಗಳ್ ||

೧. ತುವೆನಿಪ್ಪ, ಕ||  ೨. ಬಾಯ್ದೆೞೆದಳ್, ಗ||

ಆವಧು ಬಂದಳಿರ್ದೆಡೆಗೆ ಸಾಲದೆ ಕಾಂತೆಯ ವಕ್ತ್ರದರ್ಶನಂ ।
ಕೇವಳಮೀ ವಿಲಾಸವತಿ ಸೋಂಕಿ ಸಮೀಪದೆ ಕುಳ್ಳಿರಿರ್ದಳಿ ॥
ನ್ನೇವುದೊ ಪುತ್ರಲಾಭಶುಭಮಂ ಕನಸಂ ಸತಿ ಪೇಳ್ದಳೆಂದೊಡಿ ।
ನ್ನೇವೆಸಗೊಳ್ವೆ ಮಾಡವೆ ನೃಪಂಗಿವು ರಾಗದ ಬಳ್ಳಿವಳ್ಳಿಯಂ ॥೯೦

ಅಂತರಸನತಿಹರ್ಷಚಿತ್ತನಾಗಿ ॥೯೧

ವನಿತಾಸಾಮಾನ್ಯಮಲ್ತೀನಿಯಮುಮೆನಿಸಿ ತಾತ್ಪರ್ಯದಿಂ ನೋಂತು ವಿಶ್ವಾ । ವನಿಯಂ ಕೈಕೊಂಡು ತಾಳ್ದಲ್ ನೆಱೆವ ತನಯುನಂ ಗರ್ಭದೊಳಾತ್ತಳ್ದಳೈ ॥ ಮಾನಿನಿ ನಿನ್ನಿಂದೆನ್ನ ರಾಜ್ಯಂ ಸಫಲಮೆನಿಸಿದತ್ತೆನ್ನ ರಾಜಾಲಯಂ ಪಾ । ವನಮಾದತ್ತೆನ್ನ ವಂಶಂ ಕುಲನದಿಯುವ್ರೊಲಾಯ್ತವ್ಯವಚ್ಛಿನ್ನಮೀಗಳ್ ॥೯೨

ಎಂದು ವಿಲಾಸವತಿಗೆ ಮನೋವಿಕಾಸಮನೆರಡಱಿಯದೊಲವಿನ ಮನ್ನಣೆಯ ಮಾತುಗಳಂ ಪಡೆದು ಶರೀರರಕ್ಷಣೆಗಂ ಪರಿಚರ್ಯೆಗಂ ಸಮುಚಿತಕುಶಲರಪ್ಪ ಗುರುಜನಭಿಷಗ್ಜನಗಣಕಜನಗಣಿಕಾಜನಧಾತ್ರೀಜನಕುಲಮಹತ್ತರಿಕಾಜನಮಂ ಸಮರ್ಪಿಸುವುದುಮನಂತರಂ ॥

ಜನಪತಿಗಂ ಸತಿಗಂ ನಿ ।
ತ್ಯನಿಯಾಮುಕ್ಷಣಮುನಱಿಪುವಂತಿರೆ ಮಧ್ಯಂ ॥
ದಿನಸಮಯಭೂರಿಭೇರೀ ।
ಧ್ವನಿ ಕರ್ಣಪಥಾವತೀರ್ಣಮಾದತ್ತಾಗಳ್ ॥೯೩

ಅದಂ ಕೇಳ್ದು ॥೯೪

ಸಂಗೀತಕದಿಂ ಕಾವ್ಯರ ।
ಸಂಗಳನತಿಚತುರವಿಬುಧಗೋಷ್ಠಿಗಳಿಂದು ॥

---

೧. ನಿಯಮಾಕ್ಷಣ, ಗ॥ ೨. ಅಂತು, ಕ॥

ತ್ತುಂಗಕುಚೆ ತಡೆದುದೀನಿಜ।
ಸಂಗತಿಯಿಂ ಪೊಟ್ಟು ಪೋದುದರೆಗಳಗೆಯ ವೋಲ್ ॥೯೬

ಎಂದು ವೇಳಾತಿಕ್ರಮಶಂಕೆಯಿಂ ಮನ್ನಿಸಿ ವಿಸರ್ಜಿಸುವುದುಮ ರ್ಧಾಸನದಿನೆರ್ದು ಪೂವಮಾಲೆಯುಮನವನೀಪತಿಯ ನಯನಕುವಲಯ ಮಾಲೆಯುಮನಾಂತು ಬೞಿಲ್ಮುಡಿಚೆಲುವಿಂಗೆ ಮುಡಿಗವಿಂದಂತೆ ಸೊಗ ಯಿಸೆಯುಂ ಕೊರಲೊಳಕ್ಕಿದೆಕ್ಕಸರದ ಕೆಂಬಟ್ಟೆಯ ತೊಂಗಲನಂಗ ಜಂಗಮಲತೆಯ ತಳಿರ ತೊಂಗಲಂತೆ ಪೊಳೆಯೆಯುಂ ಮೇಲುದಱ ಸೆಱಂಗನುಱ ಸೆಱಗೆಯ್ದು ಪೊಱಪೊಣ್ಮುವ ವರಭಾಗಶರೀರಕಾಂತಿ ಲಾವಣ್ಯರಸದ ತಂದಲನಗುಂದಲೆವಮಾಡಿಯುಂ ಘನನಿತಂಬಬಿಂಬಮಂ ಬಳಸಿದ ನೂಲ ತೊಂಗಲ ಮಧುರಧ್ವನಿ ಮನುಜಮಕರಧ್ವಜನ ಮನ ಮನೊಡನೊಡನೆ ಕರೆವಂತಡಿಗಡಿಗೆ ಪೊಣ್ಮೆಯುಂ ಮುಂದೆರಡಡಿಯುಂ ನಡೆದು ಸುಖಾಸನಾರೂಢೆ ತನ್ನಿನಿಯನ ಬಲ್ಮೆಯಲ್ಲದ ನಲ್ಮೆಯ ಪರ ಮಪದಮನೋರೊರ್ವರೊಳ್ ನುಡಿವ ಕೆಳದಿಯರ ನುಡಿಯನಾಲಿಸು ತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು ಮಜ್ಜನಭೋಜನಾದಿದಿವಸ ವ್ಯಾಪಾರಮಂ ತೀರ್ಚಿ ಕೆಲವು ದಿವಸಮಿರ್ಪನ್ನೆಗಂ ॥೯೭

ಧವಳಾಪಾಂಗಮರೀಚಿಗಳ್ಪುದಿದುವೆಂಬನ್ನಂ ಕಪೋಳಂ ಬೆಳ ।
ರ್ತುವು ಭೃಂಗಾವಳಿ ಸುಯ್ಗೆ ಸಾರ್ವ ತೆಱದಿಂ ಸುಕುಂಗುರುಳ್ಮಾಲೆ
ನೀ॥ ಳ್ದುವು ತನ್ನೊಳ್ನೆಲೆವೆರ್ಚೆ ರಾಗರಸವಾಗಳ್ತೀವಿ ತಳ್ಪಂಕಗು ।
ಟ್ಟುವ ಪದ್ಮಾಕರದಂತೆ ಕಾಂತೆ ತಳೆದಳ್ ಬೇಱೊಂದು ಲಾವಣ್ಯಮಂ ॥

ಅತಿವೃತ್ತೋನ್ನತಿಯಿಂ ವಿರಾಜಿಪುವು ಮುನ್ನಂ ಗರ್ಭದೊಳ್
ಕೊರ್ವಿ ಬಾ। ಹುತಟಕ್ಕೆಯ್ದಿದುವೀಗಳೆಂದು ಪದಪಿಂ ತತ್ಕಾಮಿನೀ

೧. ಯು ಮೊಂದೆರಡಡಿ. ಗ॥ ೨. ನೋರೊರ್ಬರೊಳ್. ಗ॥

ಪುಣ್ಯದೇ ॥ ವತೆ ಕಣ್ಣಿಂಜಲ ದೋಷಮಂ ಪುರಿಪಲೆಂದುದಿಟ್ಟ ರಕ್ಷಾಂಜನಾ । ಕೃತಿಯಿಂ ಪೀನವಯೋಧರಾನನಮುಮೇಂ ಕರ್ಪಿಂಗಡಮರ್ದುವ್ರೋ ॥೯೮

ಉದರದೊಳಿರ್ದ ತನೂಜನ ।
ಹೃದಯನಿವಾಸಿನಿಯೆನಿಪ್ಪ ಲಕ್ಷ್ಮೀವಧು ತಾ ॥
ಳ್ದದ ಲೀಲಾಂಭೋರುಹನಾ ।
ಳದ ನೆಬಲೆನೆ ರೋಮರಾಜಿ ತಳೆದುದು ಕರ್ಪಂ ।೯೯
ವಳಿರೇಖೆ ಮಸುಳೆ ಗರ್ಭಂ ।
ಬಳೆವುದುಮೊಡವಳೆದು ಸತಿಯ ಮಧ್ಯಂ ಚೆಲ್ವಂ ॥
ತಳೆದುದು ನಯನಾನಂದಮು ।
ನೆಳವೆಱ ಪರಿಪೂರ್ಣಮಾದೊಡಂ ಪುಟ್ಟುವವೊಲ್ ॥೧೦೦
ಸುರಭೂರುಹದಗೆಯನಿಡಲ್ ।
ಪರಿಜನದಭಿಜನದ ಗೇಹದೊಳ್ ಬಯಸಿದಳಾ ॥
ಸರಸಿಜಮುಖಿ ಗರ್ಭಸ್ಥನ ।
ಪರಮೌದಾರ್ಯಪ್ರಭಾವಮಂ ಪ್ರಕಟಪವೊಲ್ ॥೧೦೧
ಬಸಿಱ ಮಗಂಗಿಲ್ಲಿವರಂ ।
ವಸುಧಾತಳಮೇಕಭೋಗ್ಯಮೆಂದಱಿಪುವವೊಲ್ ॥
ವಸುಧೆಯ ನಾಲ್ಕುಂ ಕಡೆಯೆಡೆ ।
ಯ ಸುರಭಿಮೃತ್ತಿಕೆಯನಱ್ತಯಿಂ ಸೇವಿಸುವಳ್ ॥೧೦೨
ಆಗಳವನೀಶ್ವರನನೇಕಮಂಗಳಾನಕರವಂಗಳೊದವೆ ॥೧೦೩
ರನ್ನದ ಬಾಯಿನಕ್ಕೆ ಪಲವಂದದ ಚಂದದ ಸೀರೆಗೆನ್ನವ ।
ರ್ತನ್ನವರೆನ್ನದಿತ್ತೊಸಗೆಗೀ ನೆಲದೊಳ್ ಪೊಱಗಾಱುಮಿಲ್ಲೆನಲ್ ॥

ಮನ್ನಿಸಿ ಮೆಯ್ಮೆಯುಂ ಮೆಱೆದು ಪುಂಸವನಂ ಮೊದಲಾಗೆ ತಕ್ಕುವಂ।
ತನ್ನಿನಿಯಳ್ಗೆ ಮಾಡಿಸಿದನುತ್ಸವದಿಂ ನೃಪನುತ್ಸವಂಗಳಂ ॥೧೦೪

ಅಂತು ನೆಗೞ್ವ ಮಹೋತ್ಸವಂಗಳೊಡನೆ ಗರ್ಭಮುಂ ಬಂಧುಜನ ಹರ್ಷಗರ್ಭಮುಂ ಪರಿಪೂರ್ಣವಾಗೆ ॥೧೦೫

ಮರಕತರಂಗದೊಳ್ ರಮಣಿ ತೀವಿದ ಗರ್ಭದ ಬಿಣ್ಪಿನಿಂ ನಯಂ।
ಬೆರಸೆತೆಯಾಡುವಾಗಳಡಿಯೂಡಿದ ಮೆಲ್ಲಡಿವಜ್ಜೆಗಳ್ ಮನೋ॥
ಹರಮೆನಿಸಿರ್ದುವೀಸತಿಯ ಗರ್ಭದೊಳಿರ್ದ ತನೂಜನಾದವಂ।
ವರನೆನಗೆಂದಿಳಾವಧುಗೆ ಪಲ್ಲವಿಸಿತ್ತನುರಾಗಮೆಂಬಿನಂ ॥೧೦೬

ಹಾರಮನಿಕ್ಕಿ ಮಿಕ್ಕ ಕನಕಾಭರಣಂಗಳ ಬಿಣ್ಪನೇನುಮಂ।
ಸೈರಿಸದಿರ್ಪುದಪ್ಪುದೆ ವಲಂ ಕನಕಾದ್ರಿಯ ಬಿಣ್ಪನಪ್ಪೊಡಂ॥
ಸೈರಿಸದರ್ಭಕಂ ಬಳೆಯೆ ಗರ್ಭಸರೋಜದೊಳಾವಿನೀಳನೀ।
ರೇರುಹನೇತ್ರೆ ತತ್ಕನಕಮಾತ್ರದ ಬಿಣ್ಪನದೇಕೆ ಸೈರಿವಳ್ ॥೧೦೭

ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತಮಂಗಳಪ್ರಸಾ।
ಧನಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣಮಾಲೆ ತೆಂ॥
ಗಿನ ತಿರುಳೋಲೆ ತಾವರೆಯ ನೂಲುಡೆನೂಲ್ಸಿರಿಕಂಡದಣ್ಕೆ ಮು।
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಬಿಂಡುಗಂಕಣಂ॥

ಘನಕುಚೆ ಮೇಳದಂಗನೆಯ ಮೇಲೆ ಮಲಂಗಿ ಸರೋಜಪತ್ರವೀ।
ಜನಪವನಂ ವಿಕಾಸಮನೊಡರ್ಚೆ ಮನಕ್ಕೆ ಸುಧಾಪ್ರವಾಹಮೆಂ॥
ಬಿನಮೆರಡುಂ ಕೆಲಂಬಿಡಿದು ಬಾಜಿಪ ವಂಶದಿನೋಜೆವೆತ್ತ ಗಾ।
ಯಿನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳೊರ್ಮೆಯುಂ॥

೧. ಸಿರಿಖಂಡದಣ್ಪು. ಗ॥ ೨. ರ್ಮೆಯುಂ. ಗ॥

ಸೋರ್ಮುಡಿ ಮಾಲೆಯಿಂ ಕದಪುಗಳ್ ಮಲಯೋದ್ಭವಪತ್ರಭಂಗದಿಂ । ಪೆರ್ಮೊಲೆ ಹಾರದಿಂದೆಸೆಯೆ ಬಂಬಲಬಾಡಿದ ರೂಪು ಗಾಡಿಯಂ ॥ ನೂರ್ಮುಡಿ ಮಾಡೆ ಮೇಳದವಳಂ ಸತಿ ನಿರ್ಭರಗರ್ಭಭಾರದಿಂ । ನೆರ್ಮಿ ನಿಮಿರ್ಚುವಳ್ ಪುರುಳಯೊಳ್ಪರಿಹಾಸವಚೋವಿಳಾಸಮಂ ॥೧೧೧

ಅಂತು ವಿವಿಧವಿಲಾಸಂಗಳಿಂ ದಿವಸಂಗಳಭಿಲಷಿತಫಳಪ್ರಸವಂಗಳಾಗೆ ಸುಖಪ್ರಸವಸಮಯದೊಳ್ ॥೧೧೧

ಶುಭವಾರಂ ಶುಭವಾಸರಂ ಶುಭಮುಹೂರ್ತಂ ಕೂಡೆ ತಾರಾಬಲಂ । ಶುಭಮಂ ಮಾ[ಡೆ ಶುಭಗ್ರಹಂ ನಿಲೆ ನಿ]ಜೋಚ್ಚಸ್ಥಾನದೊಳ್ಬಾಭುಜ ॥ ಪ್ರಭುಚಿಹ್ನಂ ಶುಭಲಕ್ಷಣಂ ತನುವಿನೊಳ್ಮೆಯ್ದೋರೆ ಬಾಲಾರ್ಕಸ । ನ್ನಿಭತೇಜೋನಿಧಿ ನಂದನಂ ಸತಿಗೆ ವಂಶಾನಂದನಂ ಪುಟ್ಟಿದಂ ॥

ಆಸಮಯದೊಳ್ ॥೧೧೩

. . . . . . . . . . . . . . . . . . . . . . . . । . . . . . . . . . . . . ಸೆ ತೆಕ್ಕನೆ ತೀವೆ ತಳಿತ್ತುಮಿ ॥ ಳ್ಳಸಿದುದು ಕೇತನಾವಳಿ ವಿಯತ್ತಳಮಿಟ್ಟೆಡೆಯಾಗೆ ಕಾಳ್ಪುರಂ ॥ ಮಸಗಿದುದುತ್ಸವಾಮೃತತರಂಗಿಣಿ ಪೌರಜನಾಂತರಂಗದೊಳ್ ॥೧೧೪

ಮಂಗಳಗಾಯಿನಿ . . . ।
. . . . . . . . . . . . . . . . ॥
. . . . . . . . . . ।
. . . ಡಿಸಿದತ್ತು ರಾಜಾಂಗಣದೊಳ್ ॥೧೧೫

ಅಲ್ಲದೆಯುಂ ॥೧೧೬

ಪಾಡುವ ಗಾಣರಾಡುವೆಳವೆಂಡಿರುಪಾಯನಮಂ ಪರಸ್ಪರಂ ।

ನೀಡುವ ಸಜ್ಜನಂಗಳೆಡೆಯಾಡುವ ದಾದಿಯರಚ್ಛ . . . ॥
. . . . . . . . . . . . . . . . . . . . . |
. . . ಳ್ ನೃಪನಿವಾಸವಿಳಾಸಮನುಂಟುಮಾಡುವರ್ ॥೧೧೭

ಮತ್ತಮಲ್ಲಿ ಶುಭಗೃಹಸ್ಥಾನಮಂ ತಮ್ಮೊಳೋರೊರ್ವರ್ ತಿಳಿಪುವ ಗಣಕರುಂ ಧವಳಕಳವಾಕ್ಷತಪ್ರಶಸ್ತಹಸ್ತರಪ್ಪ ... ಗೃಹಮಹತ್ತರಪರಿಚಾರಕರುಂ ಮಂಗಳವೃತ್ತಂಗಳನೋದುವ ಪುಣ್ಯಪಾಠಕರುಂ ಕೆದಱುವ ಪಿಷ್ಟಾತಕಚೂರ್ಣಮುಂ ಪಸರಿಸುವ ಪಟವಾಸಮುಮೆಸೆಯೆ ತತ್ಸಮಯದೊಳ್ ॥೧೧೮

[ಮುದದಿ] ಸುತಸವಾರ್ತೆಯಂ ತಿಳಿಪೆ ಬೇಗಂ ಬಂದಲಂಪಿಂದಮಿ।ಕ್ಕಿದ ಕೇಯೂರಮನೀಬ್ದು ಕೊಂಡು ಸುತಜನ್ಮೋತ್ಸಾಹಮಂ ಪೇಬ್ದುವಾ ॥ ಡಿದಳೊರ್ವಳ್ ಪರಿಚಾರಿಕಾ . . . . . . |
. . . . . . . . . . . ॥೧೧೯

ಆಗಳವನಿಪತಿ ಸುತೋತ್ಸವಸಂಭ್ರಮಸ್ವಾಂತ . . ನಂತಃಪುರಪ್ರವೇಶಯೋಗ್ಯಪರಿಮಿತಪರಿಜನಂ [ಬೆರಸು] ಧನಶ್ರೀಮಹಾದೇವಿಯ ಗೃಹಕ್ಕೆ ಬಿಜಯಂಗೆಯ್ದು ಗಣಕಗಣನಿರೂಪಿತಶುಭಮುಹೂರ್ತದೊಳ್ ಜಾತಕರ್ಮಕಲ್ಯಾಣಮಂ ಮೆಱೆದು ರಕ್ಷಾವಿಧಾನವಿಳಸಿತಪ್ರಸೂತಿಕಾಸದನಮಂ ಪೊಕ್ಕು ನಿಜಮನೋವಲ್ಲಭೆಯ ಲಜ್ಜಾರಸಮನುಗುಳ್ವ ಮುಖಚಂದ್ರನಂ ನೋಡಿ ॥೧೨೦

ಇವಳೀಸಂಬಂಧದಿಂದಂ ಸಫಳಮೆನಿಸಿದತ್ತೆನ್ನ ಸಂಸಾರಮೆಂದು।ತ್ಸವದಿಂ ತತ್ಸೂತಿಕಾಗೇಹಮನನುಪಮದೇಹಾಂಶುವಿಂದಾವಗಂ ತೀ॥ವುವ ಪುತ್ರಾಸ್ಯೇಂದುವಂ ಕಾಣಲೊಡಮತಿಶಯಪ್ರೇಮಮಂ ತಾಳ್ದಿದಂವೈ। ಶ್ರವಣಂ ಸಸ್ಮೇರವಕ್ತ್ರಂ ಸಮುದಿತಪುಳಕೋತ್ಕರ್ಷಹ

ಷಾರ್ಶಪ್ರವರ್ಷಂ ||೧೨೧

ಪ್ರತ್ಯಗ್ರಸಮುತ್ಪನ್ನಾ |
ಪತ್ಯಮುಖಾಳೋಕಸುಖಮನಱಿಯದ ದಿವಿಜ ||
ಸ್ತ್ರೀತ್ಯಸುಖಂ ಸುಖಮಲ್ತೆಂ |
ದತ್ಯಂತಸುಖಾನುಭವದೊಳರಸಂ ತಣಿದಂ ||೧೨೨

ಅಂತು ಸುತಮುಖಾಲೋಕನಸುಖಸುಧಾರಸಮನನುಭವಿಸಿ ||೧೨೩

ಸುರಕುಜಮೀವ ದಿವ್ಯವಸನಂಗಳನರ್ಘ್ಯವಿಭೂಷಣಂಗಳೀ |
ದೊರೆಯುವೆ ಮಂದರಾಚಳದ ಕಾಂಚನಮೀನಿನಿತುಂಟೆ ಪನ್ನಗೇ |
ಶ್ವರನ ಫಣಾಮಣಿಪ್ರಚಯಮಿನ್ನವೆ ಪೇೞನಿಪನ್ನವಂ ನಿರಂ |
ತರಮಿರದರ್ಥಿಸಂತತಿಗೆ ಬಾಂಧವಕೋಟಿಗೆ ಕೊಟ್ಟನಾನೃಪಂ ||೧೨೪

ಕನಕಮನಾರ್ಪನಿತಂ ಬೀ |
ಱ್ವನಿತಂ ದಿವ್ಯಾಂಬರಂಗಳಂ ರತ್ನಮನೊ ||
ಲ್ವನಿತಂ ಭೂಷಣಮಂ ಸಾ |
ಲ್ವನಿತಂ ಧರೆಗೆಲ್ಲಮಿತ್ತನಾಧರಣೀಶಂ ||೧೨೫

ಅಂತು ಮಹೋತ್ಸವಮಹಾಮಹಿಮೆಯಂ ಮಾಡಿ ದಶಮದಿವಸ
ದೊಳ್ ||೧೨೬

ಈಧರೆಗೆಲ್ಲಂ ಕನಕಮ |
ಹೀಧರಮೀಂ ಮನೆಯೊಳುಂಟೆ ಪೇೞನೆ ಪಿರಿದಿ ||
ತಾ್ತಧರಣೀಶಂ ಸುತನಂ|
ಶ್ರೀಧರಶುಭಕರಣನಾಮದೊಳ್ ಯೋಜಿಸಿದಂ ||೧೨೭

ಅಂತಾನಾಮಕರಣಕಲ್ಯಾಣಾನಂತರಂಕತಿಪಯದಿನದೊಳ್ ||೧೨೮

ಅನಿಮಿತ್ತದರಸ್ಮಿತದಿಂ |

ದನಪೇಕ್ಷಿತಸಕಲದೃಷ್ಟದರ್ಶನದಿಂ ತ ॥
ಜ್ಞನನೀಜನಕರ ಮನದೊಳ್ ।
ತನೂಭವಂ ಮೋಹರಸಮನೇಂ ತೀವಿದನೋ ॥೧೨೯

ಅಂತು ನಿರಂತರೋಪಚಯಮನಪ್ಪುಕೆಯ್ದು ॥೧೩೦

(ಹರಿಣೀ ವೃತ್ತ)

ಸ್ಖಲಿತಗಮನಂ ಮುಗ್ಧಾಲಾಪಂ ಸ್ಮಿತೋಜ್ಜ್ವಲದಂತಕಂ ।
ಟ್ಮಿಳಿತವದನಂ ಸ್ನಿಗ್ಧಾಲೋಕಂ ಪ್ರಸಾರಿತಕಜ್ಜಲಂ ॥
ತಿಳಕಪಿಸಳದ್ಭಾಳಂ ಭೂಷಾಪರಂಪರಲೀಲೆಯಿಂ ।
ತಳೆಯೆ ತಳೆದಂ ಚೆಲ್ವಂ ಲಂಬಾಳಕಂ ನೃಪಬಾಲಕಂ ॥೧೩೧

ಅಂತದೃಷ್ಟಪೂರ್ವಶೈಶವಾತಿಶಯಮಂ ತಳೆದು ಸಕಲಜನಸುಕೃತಸುರಮಹೀರುಹಂ ಬೆಳೆವಂತೆ ಬಳೆದು ॥೧೩೨

ಸಿರಿಗೆ ನೆಲೆಯಾದ ಪೊಂದಾ ।
ವರೆಯ ಮುಗುಳ್ಮೆಲ್ಲಮೆಲ್ಲನಲ*ರ್ದಪ್ಪುವೆಂಬಂ ॥
ತಿರೆ ದಿವಸಕ್ರಮದಿನಧಃ ।
ಕರಿಸಿದನಾನೃಪತನೂಭವಂ ಶೈಶವಮಂ ॥ ೧೩೩

ಗುರುಸನ್ನಿಧಿಯೊಳ್ಮುನ್ನಂ ।
ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್ ॥
ಪರಿವಿಡಿಗೆಯ್ವಂತೆ ಕಳಾ ।
ಧರನಾದಂ ಶ್ರೀಧರಂ ಧರಾಧರಧೈರ್ಯಂ ॥೧೩೪

ಅಂತಖಿಳಶಸ್ತ್ರಶಾಸ್ತ್ರವಿದ್ಯಾವಿಶಾರದನಾಗಿ ॥೧೩೫

ಚೂಳಾಕರಣದಿನತ್ತಲೆ ।
ಭಾಳಚ್ಛಾಯೆಯೊಳೆ ಭಂಗಮಂ ಪಡೆದರಿಭೂ ।

ಪಾಳರ್ಗೆ ದೀನವೃತ್ತಿಯು ।
ಚೋಳಾಕರ್ಷಮನೊಡರ್ಚಿದಂ ನೃಪತನಯಂ ॥೧೩೬
ಉಡೆವಣಿ ಪಱಿಯಲೊಡಂ ಪಡ ।
ಲಿಡೆ ಕೆಲವಣಿ ತೋಳೊಳಿರ್ದ ಜಯಲಕ್ಷ್ಮಿಗೆ ಪಾ ।
ರ್ವಡೆಯಾನೆಯ ಕೆಲವಣಿಯಿಂ ।
ದುಡೆವಣಿಗಟ್ಟಿಸಿದನಾನರೇಂದ್ರಕುಮಾರಂ ॥೧೩೭
ಉಪನಯನಾನಂತರವೊಂ ।
ದುಪನಯನಂ ನಿಟಿಲತಟದೊಳುಂಟೆನೆ ವಿಪ್ವ ॥
ಷ್ಟಪುರಂಗಳನಂದುರಿಪಿದ ।
ನುಪಮಾತೀತಪ್ರತಾಪನಿಧಿ ನೃಪತನಯಂ ॥೧೩೮

ನಿಡುದೋಳ್ ನೀಳ್ದುವು ನೀಳ್ಕಲುದ್ಧತಸಿತಚ್ಛತ್ರಂಗಳಂ ನಾಡೆ
ಯುಂ । ತೊಡೆಗಳ್ಕೂರ್ದುವುಗ್ರದಂತಿಯನವಿರ್ದಲ್ ವಕ್ಷವಕ್ಷ...
ವಾ ॥ ಯ್ತೊಡೆಯಾಗಲ್ ಪಿರಿದಪ್ಪ ಲಕ್ಷ್ಮಿಗೆನೆ ಲೋಕಾಶ್ಚರ್ಯಚಾತು
ರ್ಯಮಂ । ಪಡೆದಂ ಯೌವನವೇೞ್ಗೆಯೊಳ್ಸುಜನಸಸ್ಯಾಂಭೋಧ
ರಂ ಶ್ರೀಧರಂ ॥೧೩೯

ಅಂತು ನವಯೌವನಶ್ರೀಯನಪ್ಪಕೆಯಲೊಡಂ ॥೧೪೦

ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟು ಮಾ ।
ಡಿದ ಕಳಹಂಸಿಯಂತುಭಯಪಕ್ಷವಿಶುದ್ಧಿಯನಪ್ಪಕೆಯ್ದ ಪೆಂ ॥
ಪೊದವಿದ ರಾಜಕನ್ಯಕೆಯರಂ ಪಲರಂ ತನಯಂಗೆ ಮಾಡಿದಂ ।
ಮದುವೆಯನಾನೃಪಂ ವ್ಯಯದ ಚಾಗದ ದೊಡ್ಡವಗೆಡ್ಡಮೆಂಬಿನಂ ॥

೧೪೧. ಪೆಣ್ಬರಿಜು-ಸ್ತ್ರೀವೇಷ.

೧.ತೋಳಲಿರ್ದ.ಕ॥ಗ॥ ೨.ಪುರ್ಡಿ.ಗ॥ ೩.ಬಿಮುದ.ಕ॥ಗ॥ ೪.ದೊಡ್ಡಿನವೆಡ.

ತದನಂತರಂ ॥೧೪೪

ಗಂಗಾಸಿಂಧುಜಲಂಗಳಿಂದಮಭಿಷೇಕಂಗೆಯ್ದು ಪಸಾಂಗಲ್ಯಗೀ ।
ತಂಗಳ್ ಕರ್ಪೂರದಾಯುಧಂಗಳೊಡವೃತ್ತಿರ್ವನಸ್ಪತ್ಯಾಸ್ಪದತೆ ॥
ಯರ್ಗಂಗಳ್ ಘೂರ್ಣಿಸುವನ್ನಮುತ್ಸವಮನಿತ್ಯಾನಂದದಿಂ ಪಾಡಿ ಪ್ರ।
ತ್ರಂಗೆತ್ತಂ ಯುವರಾಜರುಪದಮನಾಗಳ್ ರಾಜವಿದ್ಯಾಧರಂ ॥೧೪೫.

ಪ್ರಿಯಕಾಂತಾತನಯಂ ಗಡವೃತ್ತಿಮವಿದ್ಯಾವಿಶ್ರಮಾಚಾರಕು । ಸ್ವ
ಜನೋಳಾಗರ್ಂ ಪಿರಿಯಂ ಗಡುತ್ತಮವಯಸ್ಕಂಪತ್ತಿಪ್ರಜ್ಞಾನಂ ಗಡಾನ್ವ
ಯರಾಜೈಶ್ವರ್ಯಧುರೀಣ್ಯಮಂಗಡ ಮಗಂಗಿನ್ನಂಗೆ ಸಾಮ್ರಾಜ್ಯಮಿ। ಶ್ರೀಪ್ರ
ದನಿಂತಿಪ್ಪುದುಗೆಯ್ದ ತಂದೆ ಯುವರಾಜಶ್ರೀಯನೀಸಿಯನೇ ॥

ಅಂತು ಯುವರಾಜಪದವೀಪ್ರತಿಬದ್ಧಂಮಾಡಿ ॥೧೪೬

ಪಲವು ಗಜಂಗಳಂ ಪಲವು ವಾಜಿಗಳಂ ಮಣಿಭೂಷಣಂಗಳಂ ।
ದಲವನನೇಕಯುದ್ಧರಸಲಾಲಸರಂ ತಳತಂತ್ರಮುಖ್ಯರಿಂ ॥
ಲಬರಸೂಗರ್ಗಳಂ ಪಲವು ನಾಡುಗಳಂ ದಯೆಗೆಯ್ದು ಕರ್ಮರ್ಣ ಸ।
ಲ್ಪಿಸಿನಿಸೆ ತನ್ನನುಂ ಮಗನುಮಂ ಸಿರಿವೆರೆಸಿಕೊಳ್ಳಮನಾಗಿ ಮಾಡಿದಂ

ಅಂತು ಮಾಡಿ ॥೧೪೭

ತಳೆದರ್ ಮಹಿಮೆಯನವಿರ್ ।
ತಳಪತಿಯುಂ ಸುತನುಮೊಂದೆ ಲಕ್ಷ್ಮಿಯನೆರಡುಂ ॥
ಕಳಧೌತಸ್ತಂಭಂ ಮಂ ।
ಗಳತೋರಣರತ್ನಮಾಲೆಯಿಂ ರಂಜಿಪಪ್ಪೋಲ್ ॥೧೪೮

ಧರೆಯುಂ ಶ್ರೀಯಲುಮರ್ಥಿಗಂ ಪರಿಜನಕ್ಕಂ ಬಂಧುವರ್ಗಕ್ಕಮಾ ।

---

೧೪೭. ತಳತಂತ್ರ-ಸೇನೆ.   ೧೪೮. ಕಳಧೌತ-ಚಿನ್ನ.

ದರದಿಂದೀಯಲುಮುದ್ಧತಾರಿನೃಪರಂ ಸಂಗ್ರಾಮದೊಳ್ ಸೋವಲುಂ॥
ಧರಣೀಶಂಗೆರಡಾದುವಲ್ತೆ ಬಲಗೈಯೆಂಬನ್ನೆಗಂ ಶೌರ್ಯದಿಂ।
ಪರಮೌದಾರ್ಯದಿನುದು ತಂದೆಗೆ ತನೂಜಂ ತಂದನಾನಂದಮಂ॥

ದ್ವಿಗುಣಿಸಿದತ್ತು ದೋರ್ಬಳಚತುರ್ಬಳಮೀತನಿನೀನೃಪಂಗೆ ಕಾಂ।
ದೆಗೆ ಮಿಗಿಲಾದನೀತನಯನೆಂದು ಭಯಾಕುಲವೈರಿಸಂಕುಳಂ॥
ಪುಗಲೆಡೆಗಾಣದುಳ್ಳೊಡಮೆಯೆಲ್ಲಮನೊಪ್ಪಿಸಿ ನಿರ್ಣಯಂ ನಯಂ।
ಬಗೆವುಗೆ ಮಾಡಿದರ್ಕಲುಷವೇಷಮನೊಲ್ಲದನುಪ್ರವೇಶವಂ॥ ೧೫೦

ಪರಿಪೂರ್ಣಂ ಕೋಶಗೃಹಂ।
ಧರೆ ನಿದಾ೯ಯಾದವಾತ್ಮಜಂ ರಾಜ್ಯಸಮು॥
ದ್ಧರಣಕ್ಷಮನೆನೆ ತನಗಾ।
ದೊ೯ರೆಯೆನೆ ವೈಶ್ರವಣನರಸುಗೆಯ್ಯುತ್ತಿರ್ದಂ॥೧೫೧

ಎರಡೇ ಶೇಷಪ್ರಭಾಮಂಡಳಮೆರಡೆ ಸುಧಾವಾರ್ಧಿ ಚಂದ್ರಾತಪಂ ಮೇ। ಣೆರಡೇ ದೇವಾಪಗಾಂಭಃಪ್ಲವಮೆರಡೆ ಜಗಕ್ಕಾದುದಾಶ್ಚರ್ಯ ಮೆಂಬಂ॥ ತಿರೆ ಮೂಱುಂ ಲೋಕಮಂ ಮೂವಳಸೆ ನಿಜಯಶಂ ಸಜ್ಜನಾಧಾರನಾದಂ। ನಿರವದ್ಯಾಚಾರನಾದಂ ಚತುರಕವಿಜನಾಸ್ಥಾನ ರತ್ನಪ್ರದೀಪಂ॥೧೫೨

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಕುಮಾರೋದಯ ವರ್ಣನಂ
ಚತುರ್ಥಾಶ್ವಾಸಂ ಸಂಪೂರ್ಣಂ.

೧. ಸೋಯಲುಂ. ಕ॥ಗ॥

## —ಪಂಚಮಾಶ್ವಾಸಂ—

ಶ್ರೀವನಿತೆ ವಕ್ಷದೊಳ್ಮ |
ಕಾ್ತವಳಿಯಂತೆಸೆಯೆ ಕೀರ್ತಿ ಪೂವಾಲೆವೊಲಾ ||
ಶಾವನಿತೆಗೆ ಶೇಖರಮೆನೆ |
ಭೂವಿಶ್ರುತವಿಭವನಾದನಭಿನವಪಂಪಂ ||೧

ಆಮಹೀವಲ್ಲಭನ ದಾನದಕ್ಷಿಣಸಮೀರಂ ಜನಾನುರಾಗಮನೊದವಿಸೆಯುಂ ಭುಜಪ್ರತಾಪತಪನೋತ್ತಾಯಣಮುತ್ತರೋತ್ತರಮಾಗೆಯುಂ ಭಾಸ್ವನ್ಮಂಡಲಾಗ್ರಮರೀಚಿ ಭೂಮಂಡಳಮಂ ಬೆಳಗೆಯುಂ ಧರ್ಮಾಮೃತರುಚಿ ವಿಶದಮಾಗೆಯುಂ ಯಶಸ್ತಿಳಕಮಖಿಳದಿಙ್ಮುಖಮನಳಂಕರಿಸೆಯುಂ ಬಾಂಧವಕುಳಮಭ್ಯುದಯಪರಂಪರೆಯನಪ್ಪೈಕೆಯ್ಯೆಯುಂ ಅನುರಕ್ತಾಶೋಕವಲ್ಲರಿ ಪಲ್ಲವಿತಮಾಗೆಯುಮಿಂತಿಳಾಕಾಂತೆಗೆ ಸಂತತೋತ್ಸವಮನೀವ ಸಾಮ್ರಾಜ್ಯಂ ವಸಂತಸಮಯದೊಳ್ಮಚ್ಚರಿಸುವಂತೆ [ಇರೆ] ||೨

ಪದವಿಟ್ಟಳ್ಳಿಯ್ದಲಿಂ ತಾವರೆಗೆ ಸಿರಿ ಲತಾಕೋರಕಗ್ರಂಥಿ ನೀರೇ |
ಱದುವೇಱುಂಜೌವನಂ ಚಂದ್ರಿಕೆಯನೆಳಸಿದತ್ತನ್ಯಪುಷ್ಟಸ್ವನಕ್ಕಾ ||
ದುದು ಬಾಳಕ್ರೀಡೆ ಪೆಱ್ದಂಬಿಗೆ ಕುಸುಮಶರಜ್ಯಾರವಂ ತಾರಶಿಕ್ಷಾ |
ಪ್ರದಮಾದತ್ತೀಗಳೀಗಳ್ ಶಿಶಿರದೆಸಕಮಂ ಮಿಕ್ಕುದಕ್ಕುಂ ಬಸಂತಂ||

ಮಧು ಬಂದುದೆಂದು ನಳಿನೀ |
ವಧು ವಿರಚಿಸಿದರ್ಘ್ಯಪೂರ್ಣಹಸ್ತಾಕೃತಿಯಿಂ||
ಮಧುಬಿಂದುಪೂರ್ಣಮೆಸೆದುದು |
ಮಧುಕರನೀಲಾಂಗುಳೀಯಕಂ ಕೋಕನದಂ ||೪

ದರದಳಿತಾಂಭೋರುಹದಳ ।
ಪರೀತಷಟ್ಪದನಿಬದ್ಧಝಂಕಾರೈಕಾ ॥
ಕ್ಷರದಿವ್ಯಮಂತ್ರದಿಂದಂ ।
ವಿರಚಿಸಿದನೊ ಮನಸಿಜಂಗೆ ಮಧು ಶಾಂತಿಕಮಂ ॥೫

ಹಿಮವಲೆದಿನ್ನೆಗಂ ಕಮಳಮಂ ಹಿಮಶೈಳಮನೊತ್ತುಗೊಂಡೊಡಾ । ಕಮಳದ ಬನ್ನಮಂ ಕಮಳಬಂಧು ಕಟಲ್ಬಲೊಡರ್ಚೆ ಬರ್ಪವೋಲ್ ॥ ಹಿಮಗಿರಿಗುತ್ತರಾಯಣಕೆ ಬಂದನದಂತೆ ವಲಂ ಪ್ರಚಂಡವಿ । ಕ್ರಮಧನರಾತ್ತಬಾಂಧವಪರಾಭವಭಾರವನೇಕೆ ಸೈರಿಪರ್ ॥೬

ನನೆದೋಱುತ್ತು ವಸಂತದೂತಿ ಸೊಬಗಂ ಕೊಂಡಾಡುವೀಡೊಂಬುವೇ । ಡೆನುತುಂ ಚಿತ್ತಜನಾಜ್ಞೆಮುತ್ತೆ ದೆಸೆಬಿದ್ದಂ ಬಿರ್ಚೆ ಲಜ್ಜಾಜ್ಞರಸಂ ॥ ಮನದಿಂ ಸೂಸಿದುದೆಂಬಿನಂ ನಿಟಿಲದೊಳ್ಕಾಂತಾಕಪೋಳಂಗಳೊಳ್ । ಸ್ತನದೊಳ್ತೋಳ ಮೊದಲ್ಗಳೊಳ್ನೆಗೆದುವಂದೋರೊಂದೆ ಘರ್ಮಾಂಬುಗಳ್॥೭

ರಾಗಂ ಪಿರಿದಾಯ್ತು ವಸಂ ।
ತಾಗಮದೊಳ್ ಮಿಕ್ಕ ರಾಗಮೇವುದೊ ಪೇೞಿಂ ॥
ದೋಗಡಿಸುವಂತೆ ಕುಂಕುಮ ।
ರಾಗಮನುಱಿದೆಸಗಿದುದು ಜನಂ ಚಂದನಮಂ ॥೮

ಚಿತ್ತಭವಂ ಬಿಲ್ಲಂ ಗೊಳೆ ।
ಗೆತ್ತಿದನಿಸಲೆಂದು ಬಿರಯಿಯುಂ ಬಿರಯಿಗೆ ಪ ॥
ಲ್ಲೊತ್ತುವ ತೆಱದಿಂ ಬಲ್ನನೆ ।

೧. ದೆಸೆಬಿರ್ದಂ ಬಿರ್ಚೆ. ಕ॥ ದೆಸೆಬಿಲ್ದಂಬಿರ್ಚೆ. ಗ॥ ೨. ಗೊತ್ತಿದ. ಗ॥ ೩. ಬಲ್ಮೊನೆ. ಕ॥

ಯೊತ್ತುವ ಮಾಧವಿಯ ನನೆಯ ಮೊನೆಯಂಬುಗಳಿಂ ॥೯
ಕಯ್ವಂದುದು ಸಹಕಾರಂ ।
ಕಯ್ವಾರ್ಪುದು ಸಮಯಮಲ್ಲದೆಂದು ಮನೋಜಂ ॥
ಮುಯ್ಯಂ ನೋಡಿ ವಿಯೋಗಿಗೆ ।
ಕಯ್ವೀಸಿದನಾಯ್ತು ಡಾಮರಂ ಮಾಮರದಿಂ ॥೧೦
ಕೊನೆಯೊಳ್ಕನೆಗೊಂಬಿನ ಸಂ ।
ದಿನೊಳೆಲೆ ಪಣ್ತುದಿರ್ದು* ಪೋದ ನೆಲೆಯೊಳ್ಕನರ್ಗಳ್* ॥
೧ಕೊನೆದೋಱೆ ಮದನನಲಗಿನ ।
ಮೊನೆದೋಱಿದನೊಡನೆ ಬಿರಯಿಗೆಳಮಾವುಗಳೊಳ್ ॥೧೧
ಎಳದಳಿರುಂ ಕೋರಕಮುಂ ।
ಬಳಸಿರೆ ಕೊನೆಗೊಂಬಿನೊಳ್ಕವಲ್ಗೊಂಬುಗಳೊಳ್ ॥
ಗಿಳಿಗಳ್ ಕೋರಕಮುಂ ಪಸು ।
*ರ್ದಳಿರುಂ ಬಳಸಿದವ್ರೊಲೆಸೆದುವಿಮ್ಮಾವುಗಳೊಳ್ ॥೧೨
ಆವುದಱೊಳ್ ಪಿಕಪಂಚಮ ।
ರಾವಮತಿಪ್ರೌಢಮಾದುದದಱಿಂದೆನಗಿ ।
ನ್ನಾವುದೊ ತೀರದುದೆಂದಿ ।
ಮ್ಮಾವಿನ ಪಣೆಗತನು ಪಟ್ಟಮಂ ಕಟ್ಟಿಸಿದಂ ॥೧೩
ಮುಗುಳ್ದಿಂ* ಮುಗುಳ್ದಿಂ* ಪೊಸಮ ।
ಲ್ಲಿಗೆಯ ಮುಗುಳ್ನನೆಯ ದೇಸೆಯಿಂ ಕಂದರ್ಪಂ ॥
ಪೊಗೞ್ವಿಂ* ರತಿಗಂ ತೆಂಗಾ ।
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ ॥೧೪

೧. ಮೊನೆದೋಱೆ. ಕ॥

ಕುಸುಮಾಸವಕ್ಕೆ ಪೆಱವಂ ।
ಪೆಸ*ರ್ಗೊಳ್ವವು ತುಂಬಿ ಬಾಣರಚನೆಗೆ ಪೆಱವಂ ॥
ಪೆಸ*ರ್ಗೊಳ್ವಂ ಮನಸಿಜನೆನೆ ।
ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯೆ ಪೊಲಂ ॥೧೫

ಮನಸಿಜಕರೀಂದ್ರಕಟದೊಳ್ ।
ಸೊನೆ ತೊಟ್ಟನೆ ಪುಟ್ಟುವಂತೆ ವಕುಳಕ್ಕೆ ಪಸು ॥
ರ್ಸನೆ ಪುಟ್ಟೆ ಬಿರಯಿಯೆ*ರ್ದೆಗಳ್ ।
ನನೆಗುದಿಗೊಂಡುವು ಬಸಂತಮಾಸದ ಪುಗಿಲೊಳ್ ॥೧೬

ತಿಳಕಂ ಬನದೊಳ್ಕಾತ್ತರಾ ।
ತಿಳಕಂ ತುಹಿನಾಂಶುಬಿಂಬಮಂಬರದೊಳ್ ಕ ॥
ಣ್ಗೊಳಿಸಿದುದಿಲ್ಲಿಂ ಮುನ್ನಮೆ ।
ತಿಳಕಿಸದಿರ್ಕುಮೆ ಮನೋಜವಿಜಯಗಜೇಂದ್ರಂ ॥೧೭

ಕಣ್ಣಾರೆ ಬಿರಯಿಯಂ ಮಾೞ ।
ವಣ್ಣಂ ಬರಿಸಿದುವರಲ್ದ ಸುರಹೊನ್ನೆಯ ಪೊಂ ॥
ಬಣ್ಣದ ಬೆಳ*ರ್ವಣ್ಣದ ಕೆಂ ।
ಬಣ್ಣದ ಕೇಸರಮುಮೆ*ಸಳ್ಗಳುಂ ಕರ್ಣಿಕೆಯುಂ ॥೧೮

ಪಗೆಗೊಂಡ ತುಂಬಿಯಂ ನಸು ।
ನಗುವವೊ*ಲುಳ್ಳಲರ್ದು ಪೊಂಗಿ ಕಂಪಾದುದೆನಲ್ ॥
ಸೊಗಯಿಸಿ ಕಾಮನ ಪಗೆಯುಂ ।
ಬಗೆಯಂ ತೀರ್ಚಿದುವು ಸುಗ್ಗಿಯೊಳ್ಸಂಪಗೆಗಳ್ ॥೧೯

೧. ದಿಲ್ಲಿಯೆಂನಮೆ. ಕ॥

ಸುೞಿವಳರಾಯ್ತು ಪೂಗಣೆಗೆ ಕೆಂಗೞಿ ಕೈಪೊಡೆಯಾಯ್ತು ನು
ಣ್ದಳಿ । ರ್ತಳಿದಳಿದೊರ್ಂಗಲಾಯ್ತು ನಿೞಿಗೊಂಡು ತಳಿರ್ವದವಿಲ್ಲ
ಕೊಪ್ಪಿನೊಳ್ ॥ ಪೞಿಯಿಗೆಯಾಯ್ತು ಕಂತುಗೆನಲೇಂಪುದೊ ಮಿಕ್ಕ
ತಳಿರ್ವಿಯೋಗಿಯಂ । ಕಳಕುಳವಾಗೆ ಮಾೞ್ಪಡೆಗಶೋಕೆಯ ಕೆಂ
ದಳಿರೊಂದೆ ಸಾಲದೇ ॥೨೦

ಪೂಜಿಸಿ ಮಂತ್ರದೇವತೆಯುರಂ ಮಧುವಂ ವನಲಕ್ಷ್ಮಿ ಪೀರ್ವ
ಪೊಂ । ಗಾಜಿನ ಬಟ್ಟಲಂತೆ [1]ರತಿನರ್ತನಕಾಂಚನತಾಳದಂತೆ ರಾ ॥
ರಾಜಿಪ ಕರ್ಣಿಕಾರಕುಸುಮಾಗ್ರದೊಳರ್ದಳವಾಳಿ ಕಂತುನೀ ।
ರಾಜನದೀಪವಾಳಿಕೆಯ ಚೂಳಿಕೆಯಂತೆ [2]ಕರಂ ಮನೋಹರಂ ॥೨೧

ಬಿರಯಿಗಳಂಜಿ ರಂಜಿಸಿತು ಮಾಧವಿ ಪೂಗುಡಿಯಿಂ ತಮಾಳಮು ।
ಬ್ಬರಿಪಲರ್ಗಂಪಿನಿಂ ವಿಚಕಿಳಂ ಸ್ಮಿತಮಂಜರಿಯಿಂ ನವಾಮ್ರವ ॥
ಲ್ಲರಿ ಕೊನರಿಂದಶೋಕೆ ತಳಿರಿಂ ತಿಳಕಂ ಕಳಿಕಾಕದಂಬದಿಂ ।
ಕುರವಕವಂಕುರಪ್ರಕರದಿಂ ವಕುಳಂ ಮುಕುಳಪ್ರತಾನದಿಂ ॥೨೨

[3]ಸಮಧಿಕಸೌಖ್ಯಮಾಗೆ ವನಲಕ್ಷ್ಮಿಗೆ ತಿರ್ದಿ ತಮಾಳನೀಳಕೇ ।
ಶಮನಿನಿಸುಳ್ಳರಲ್ಚಿ ಕಮಳಾನನಮಂ ಸ್ತಬಕಸ್ತನಾಗ್ರದೊಳ್ ॥
ರಮಿಯಿಸಿ ಪಾಟಳಾಧರಸುಧಾರಸಮಂ ಸವಿದಟ್ಟಿ ಱಿಂ ಲತಾಂ ।
ಗಮನವರ್ದಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಳಂ ॥೨೩

ನನೆಯ ತೊಡಂಬೆ ಮಲ್ಲಿಗೆಯೊಳೊಂದೆರಡಾದುವು ಮಾಮರಂಗಳೊಳ್ ।
ಕನರ್ಗೊನೆ ಮೂಱು ನಾಲ್ಕು ತಲೆದೋಱಿದುವುಂಡಿಗೆಸಾಧ್ಯಮಾದುದಿ ॥
ನ್ನೆನೆಗೆ ಜಗತ್ತ್ರಯಂ ಮಲೆವರಾರೆನುತುಂ ಕುಸುಮಾಯುಧಂ ರತಿ ।

೧. ರತ. ಕ॥ ಗ॥ ೨. ಮನೋಹರಂ ಕರಂ. ಗ॥
೩. ಸಮುದಿತ. ಕ॥ ೪. ರಿನಿತುಂ. ಗ॥

ಸ್ತನಪರಿರಂಭಣಪ್ರಣಯಿ ಪಾಡಿಸುವಂ ಬಿರುದಂ ಮದಾಳಿಯಿಂ ॥೨೮

ಚೆಳಕೆಗೆಯಾದುವಾವುದಱ ಬಲ್ಮುಗುಳಾವುದಱಗ್ರಪಲ್ಲವಾ । ವಳ
ಮುಡಿಯುಳ್ತೊಡರ್ಚೆ ರತಿಗೊಪ್ಪಮನಿತ್ತುದು ಪುಷ್ಪವಲ್ಲಿಯುಂ॥
ಫಳತರುವುಂ ದಿಟಕ್ಕೆ ಪೆಱದಾವುದೊ ಮಲ್ಲಿಗೆ ಚೂತವೆಂದೆ. ಕ।
ಣ್ಗಳ ಪಸಿವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ॥

ಕಳಕೆಯ ಮಾವಿನೊಳ್ನಡಿಯುಬಣ್ಣಸರಂ ಮಱದುಂಬಿವೆಣ್ಣ ಕಾ ।
ಕಳಿಯ ಸರಂ ಪಿಕಾವಳಿಯ ಕಯ್ಸೆಸರಂ ಬಗೆಮುಟ್ಟೆ ಪಾಡುವಿಂ ॥
ದೊಳದ ಸರಂ ಧನುರ್ಧರಮನಾಗಿಸವೆಂದಸಮಾಸ್ತ್ರನೈಸರಂ ।
ಗಳಲಿಸದೀಗಳೀನೆಗಬ್ದ* ನಾಲ್ಸರದಿಂದಿಸುವಂ ವಿಯೋಗಿಯುಂ ॥೨೯

ಅಗೆ ಪಲವಾಗವೇ ಪಲವು ಬಿತ್ತುಗಳಂ ಕೊನರಂಕುರಂ ತಳ ।
ರ್ಮುಗುಳಲರಿಂದೊಳಂ ಮಲೆಯೊಲರ್ಕೆಱಿಂಗಳರಲ್ದ ಪ್ರೂಗೊಳಂ ॥
ಪುಗಿಲೆನುತಿರ್ಪ ಕೋಗಿಲೆ ಮದಾಳಿಗಳೆಂಬಿವು ಬೇಱವೇಱ ಬಿ ।
ತ್ತುಗಳೆನೆ ಬೇಂಟವೊಂದೆ ಬಳೆದಪ್ಪುದು ಚೈತ್ರಮಿದೇಂ ವಿಚಿತ್ರಮೋ॥

ಅದಲ್ಲದೆಯುಮಭಿನವಯೌವನಮದೋನ್ಮತ್ತೆಯರ ಮಾನಗರ್ಭ ದೊಡನೆ ಮನೋಭವಭ್ರೂಭಂಗಮೋಸರಿಸೆಯುಂ ಪಲ್ಲವದೊಡನೆ ಮನೋಜವಿಜಯವೈಜಯಂತಿ ಮಿಳಿರ್ದು ಮಿಳ್ಳಿಸೆಯುಂ ಕುಸುಮಸ್ತಬಕದೊಡನೆ ಮದನಮುಖವಿಕಾಸಮೆಸೆಯೆಯುಂ ಪುಷ್ಪಪಾಂಸುಪಟಳದೊಡನೆ ಪುಷ್ಪಶರನಾಜ್ಞೆ ದೆಸೆದೆಸೆಗೆ ಪಸರಿಸೆಯುಂ ಹೇಮತಾಮರಸಪರಾಗದೊಡನೆ ಮದನರಾಗಮುಗ್ಗಳಿಸೆಯುಂ ಪೆಣ್ದುಂಬಿಯ ಗಂ

೨೯. ಇಂದೊಳಂ- ಧ್ವ.' ಹಿಂದೋಳಂ.

೧. ಪಸದೊ. ಗ॥ ೨. ಮಾವಿನೊಳ್ಮಡಿಯ. ಕ॥

ಡುಗೋಗಿಲೆಯ ರವದೊಡನೆ ಕುಸುಮಕೋದಂಡಧನುರ್ದಂಡನಿನಾದ ಮೆಸೆಯೆಯುಂ ಪೊಸವೇಂಟದೊಡನೆ ಕಂದರ್ಪನ ದರ್ಪಂ ದಳ್ಳಿಸೆಯುಂ ಬೆಳ್ದಿಂಗಳೊಡನೆ ಮನ್ಮಥನ ಜಸಂ ಬೆಳ್ಪಂಗೆಡೆಯೆಯುಂ ಅತಿರಮಣೀಯಮಾದ ಪೊಸಸುಗ್ಗಿಯ ಪುಗಿಲೊಳೊಂದು ದಿವಸಮವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ ವಿದ್ವಜ್ಜನಪರಿವೃತಂ ಮಂಗಳಗಾಯಿನೀಮಧುರಗೀತಮನಾಲಿಸುತ್ತುಮಿರ್ಪಿನಂ ॥೨೮

ದ್ವಿಗುಣಿಸೆ ಪತ್ತಿದಿಂಗುಲಿಕದಿಂ ನಖದೀಧಿತಿ ತನ್ನ ಪಿಂತೆ ಮೆ ।
ಲ್ಲಗೆ ಬರೆ ಕನ್ನೆ ಚಿತ್ರಪಟಧಾರಿಣಿ ಬಣ್ಣದ ಸೀರೆ ಮೇಘುವಂ ॥
ಣಿಗೆಯ ಝುಳಂಬಮೆಂಬಿವಳವಟ್ಟರೆ ಭೂಭುಜನಿರ್ದ ಚಿತ್ರಶಾ ।
ಲೆಗೆ ಸಡೆತಂದನಂದು ನವಯೌವನನೊರ್ವನಪೂರ್ವಚಿತ್ರಿಕಂ ॥೨೯

ಅಂತು ದೌವಾರಿಕಪುರಸ್ಸರಂ ಬಂದು ॥೩೦

ಅಣಮೆಮೆಯಿಕ್ಕದೆ ಪರಿಷ ।
ದ್ಗಣಮೀಕ್ಷಿಸೆ ನೃಪಶಿಖಂಡಮಂಡನನಿರ್ದಾ ॥
ಮಣಿವೇದಿಕಾತಟೀಧಾ ।
ರಿಣಿಯೊಳ್ ಸರ್ವಾಂಗವಿನಯವಿನಮಿತನಾದಂ ॥೩೧

ಆಗಿ ತದನಂತರಂ ಕೆಲದೊಳಿರ್ದ ಕನ್ನೆಯ ಕಯ್ಯ ಚಿತ್ರಪಟಮಂ ಕೊಂಡು ಬಾಸಣಿಸಿದ ದುಗುಲದ ಸೆಜಗನೋಸರಿಸಿ ಮನೋಜರಾಜವಿಜಯಪತಾಕಾಪಟಮಂ ಬಿರ್ಚುವಂತೆ ಬಿರ್ಚಿ ಬಹುಕಳಾಕಮಳಗರ್ಭನಂ ಮೆಚ್ಚಿಸುವುದೆನಗೆ ವಿಷಯಮಲ್ತೆಂದು ಮನಮನಲ್ಲಾಡುತ್ತುಮರಸನ ಪದನಖಮಯೂಖಲೇಖೆಯಿಂ ನಿರ್ವಾಣರೇಖೆವಡೆದುದೆನಿಸಿ

೨೮. ಬೆಳ್ಪಂಗೆಡೆಯೆಯುಂ- ನದಿಯಂತೆ ಪ್ರವಹಿಸಲು.
೨೯. ಝುಳಂಬ- ಮುಸುಕಿನ ಸೆರಗು.

ಪದಪಯೋಜಪಾರ್ಶ್ವದೊಳ್ಪಸರಿಸುವುದುಂ ವಿಳೋಕನಕುತೂಹಳನಿಳಾಧಿಪತಿ [1]ನಿಜೋತ್ಸಂಗಸಂಗತಂಮಾಡಿ ಸಮುದಾಯಶೋಭೆ ಲೋಚನಾಕೃಷ್ಟಿಯುಂ ಪುಟ್ಟಸೆ ಬಳ್ಳಿಮಾವಿನ ಪಂಚಪಲ್ಲವದ ಪಲವುಂ ಬಣ್ಣದ ಚೆರಕೆಯುಮನಸುಕೆಯ ಪೊಸದಳರಿಂಗುಲಿಕದಣ್ಕೆಯುಮಂ ಕೊಸಗಿನೆಸಳ ಪೊಂಬಣ್ಣಮುಮಂ ವಸಂತದೂತಿಯ [2]ಕಪೋತಕಾಂತಿಯುಮಂ ಸುರಪೊನ್ನೆಯ ತಿಳಕದರಲ ಬೆಳ್ಪುಮಂ ದವನದ ತಮಾಳವನದ ಕಪ್ರುಮಂ ಮರುಗದ ಮಯಿಂದವಾಳೆಯ ಪಸುಪ್ಪುಮಂ ವಿವಿಧತರುಲತಾಗುಲ್ಮ[3]ಜಾತಿಯ ಜಾತಿವ್ಯಕ್ತಿಯುಮಂ ಬೇಱೆವೇಱೆ ಭಾವಿಸಿ ನೋಡಿ ॥೩೨

ತಿಱಿದುಕೊಳಲ್ಕೆ ಬಂದಪ್ಪುವು ಕೆಂದಳಿರಂ ಗಿಳಿ ತಾವು ತುಂಡದಿಂ ।
ಬಿಱಿದಪುದಾವು ನೊಳ್ಮಡಿಗಳಂ ಬಿಸಕಾಂಡಮನಂಚೆ ಚಂಚುವಿಂ ॥
ಕಿಱಿಕಿಱಿದಾಗಿ ಕರ್ಚೆ ಕುಡುಕಂ ಮಱಿಗಿತ್ತಪುವೆಂಬ ಬಲ್ಮೆ ಕ।
ಣ್ದೆಱೆದಪ್ಪೊಲಿರ್ದ ಚಿತ್ರಕನ ಚಿತ್ರದ ಚಿತ್ರವಿಧಕ್ಕೆ ಮೆಚ್ಚಿದಂ॥೩೩

ತೆರೆ ಕರೆಗಣ್ಮಿದಪ್ಪುವಿವೆ ತಣ್ಣೆಲರಿಂ ತಡಿಯೊಳ್ ರಥಾಂಗವೀ।
ನೆರೆವುವೆ ರಾಜಹಂಸಚರಣಾಹತಿಯಿಂ ಜಳಬುದ್ಬುದಂಗಳುಂ ॥
ನೊರೆಗಳುಮೀತೆರಳ್ದಪುವೆ ಹೇಮಸರೋರುಹಕುಟ್ಮಳಂಗಳೀ।
ಬಿರಿವುವೆ ಪೋಲೆ ಪೂಗೊಳನನಿಂತಜನುಂ ಬರೆಯಲ್ಕೆ ಬಲ್ಲನೇ॥೩೪

*ಅಲರ್ವಂತಿರ್ದುವು ಕುಟ್ಮಳಂಗಳವಱೊಳ್ಬಂಡುಂಡು ಪೆಣ್ದುಂಬಿಗಳ್ । ನಲಿವಂತಿರ್ದುವು ಕೋರಕಂ ಪೊರೆಸಡಿಲ್ವಂತಿರ್ದುವೊಱ್ವಂತೆ ಕೋ ॥ ಗಿಲೆವಿಂಡಿರ್ದುವು ಡಿಟ್ಟ ನಟ್ಟುದೆನೆ ವರ್ಣವ್ಯಕ್ತಿಯಿಂ ವ

೧. ನಿಜೋತ್ಸಂಗವಂ. ಕ॥ ೨. ಕಪೋಳ. ಗ॥
೩. ಜಾತಿಯ ಜಾತಿಯ ಜಾತಿವ್ಯಕ್ತಿ. ಗ॥

ಷ್ಟೆಗು । ಲ್ಮಲತಾಜಾತಿಗಳೆರ್ದುವಿಂತು ಬರೆಯಲ್ ಪೇೞಾರ್ಗಮೇಂ ತೀರ್ಗುವೇ ॥ ೩೫

ಬಟ್ಟಿದುವಾದ ಕಣ್ಣ ಕಱಿಯಾಲಿಯ ಸುತ್ತಣ ಸಣ್ಣ ಬೆಳ್ಪು ನೇ।
ರ್ಪಟ್ಟದು ಕರ್ಬುರಚ್ಛವಿಯ ಚುಂಚು ಮನಂಗೊಳಿಸಿತ್ತು ಮೆಯ್ಯ
ಬೆ ॥ ಳ್ಪಟ್ಟಳವಾಯ್ತು ಕಾಲ್ಗಳರಿದಾಳದ ಮೇಗಣ ಕೆಂಪಿನಣ್ಮೆಯಿಂ।
ದಿಟ್ಟಗೆ ಬಂದುದಾರ್ಬರೆವರಿಂತಳವಟ್ಟರೆ ರಾಜಹಂಸನಂ ॥ ೩೬

ಇಂಗುಳಿಕದಣ್ಮೆಯಿಂ ನಯ ।
ನಂಗಳ್ ಕಾಡಿಗೆಯ ತೊಡವಡಿಂ ರಂಜಿಸೆ ಸ ॥
ರ್ವಾಂಗಂ ಮುದ್ಗಶ್ಯಾಮತೆ ।
ರಂಗಿತತುಷ್ಟಂ ಸಪುಷ್ಟನೀಪರಪುಷ್ಟಂ ॥ ೩೭

ಕುಡಿದಳಿರನುಗುರ ಮೊನೆಯೊಳ್ ।
ಪಿಡಿದುದು ನತಚುಂಚು ನೀಡಿ ಗಳಕಂದಳಮಂ ॥
ಮಡಗೆದಱ ನವಾಮ್ರದ ಪೂ ।
ಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ ॥ ೩೮

ಪೊಸತಲರ್ದ ವಕುಳರಸದೊಳ್ ।
ಮುಸುಂಬು ಮುೞುಗುವಿನಮೊಱಗಿ ಕೋಡೆಱಕೆಗಳಂ ॥
ಪಸರಿಸಿ ಕಂಪನಲುಂಪಿಂ ।
ದುಸಿರ್ದುಸಿರ್ದಿಂಟಿದುದು ಮಧುಪನೆರ್ದೆ ಮುೞುಗುವಿನಂ ॥

ಎಂದವಱ ಜಾತಿಕ್ರಿಯಾಜಾತಿರೂಪಪರಿಣತಿಯಂ ಪರಿಭಾವಿಸಿ ॥ ೪೦

ಗಿಳಿ ಋಜ್ವಾಗತದಿಂದಮರ್ಧಋಜುವಿಂದಂ ಕೋಕಿಳಂ ಸಾಚಿಯಿಂ । ಕಳಹಂಸೀಕಳಭಂ ರಥಾಂಗಮಿಥುನಂ ದ್ವ್ಯರ್ಧಾಕ್ಷಿಯಿಂ ಬರ್ಹಿಣಂ ॥ ಡಳ ಪಾರ್ಶ್ವಾಗತದಿಂದದೇಂ ಪಡೆದುವೋ ಪಂಚಾಂಡಕವ್ಯಕ್ತಿ

ಕ। ಣ್ಗೊಳಿ ಕಂದರ್ಪನ ಬಾಣಪಂಚಕದವೊಲ್ ಚಿತ್ರಕ್ಕತಿಕ್ಷೋಭ
ಮಂ ॥೪೧

ಎಂದವನತಿಪ್ರೀತಿಯಿಂದವಳೀಕಿಸುತ್ತುಮೀಕಳಕೆಯಿಂ ಮಸಂ ಕಳಕೆಗರ್ಚಿದ ಕೋಗಿಲೆಯಂತೆ ನಲಿದುದೀಕಂಟಕದಿಂ ಕಂತುರಾಜ್ಯಂ ನಿಷ್ಕಂಟಕಮಾದುದೀತ್ರಿಭಂಗದಿಂ ಚೀರಘಟ್ಟಿಗೆ ಮಾನಭಂಗಮಂ ಪ್ರ ಟ್ಟಿಸಿದುದೀಶಿಶುನಿರೀಕ್ಷಣದಿಂ ಬಂಜೆ ಶಿಶುನಿರೀಕ್ಷಣಂಬಡೆದಂತೆ ಮನ ಮನಲರ್ಚಿದುದೀಸಕಳದಿಂ ಸಕಳಸಾಮ್ರಾಜ್ಯಸುಖಂ ಪರಮಾಣುಪ್ರಾ ಯಮಾದುದೀಸ್ವಸ್ತಿಕದಿಂ ಕರ್ಪೂರಶಲಾಕೆಯಂ ನಯನವೃತ್ತಿಕಾಸ್ವ ಸ್ತಿಕಮೆನಿಸಿದುದೀವರ್ಧಮಾನಂ ನಯನಾನಂದವರ್ಧಮಾನಮಾದು ದೀಸರ್ವತೋಭದ್ರಂ ಸರ್ವತೋಭದ್ರಮೆಂಬ ವಾಕ್ಯಾರ್ಥಮನನ್ವರ್ಥಂ ಮಾಡಿದುದೆನುತ್ತುಮಾಱುಂ ತೆಱದ ಮೊದಲ ಬಣ್ಣಮುಮನವನೋ ರೊಂದಱೊಳ್ಬೆರಸುವ ಪರಿಣತಿಯುಮನನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಮುದ್ವರ್ತನಂ ಚಿತ್ರಪ್ರವರ್ತನಮೆಂಬಾಱುಂ ತೆಱದ ಣ್ಕೆಯುಮಂ ಚಿತ್ರಚಿತ್ರಾರ್ಧಚಿತ್ರಾಭಾಸಮೆಂಬ ಮೂಱುಂ ಪ್ರಕಾರ ಮುಮಂ ರಸಚಿತ್ರಧೂಳೀಚಿತ್ರದೋಜೆಯುಮಂ ಶ್ರುತಿವಿದ್ಧಮಾತ್ಮವಿ ದ್ಧಂ[3]ಪರವಿದ್ಧಮೆಂಬ ವಿದ್ಧಪದ್ಧತಿಯುಮಂ ಲಾಕ್ಷಾರಸರೇಖಾಶುದ್ಧಿ ಯುಮಂ ನೇತ್ರಕ್ಕಂ ಸೂತ್ರಕ್ಕಮಳವಡಿಸಿದ ಧೇಶೀಯುಮುಮಪ್ಪ ಭಂಗಿಯುಮಂ ಮೃದುರೇಖಾವಿಳಾಸಮುಮಂ ಪರಿಭಾವಿಸಿ ನೋಡಿ ವಜ್ರಕುಂಡಳದ ಕಾಂತಿ ತಳತಳಿಸೆ ತಲೆಯಂ ತೂಗಿ ॥೪೨

(ತರಳವೃತ್ತ)

ಅಕಟ ! ರೇಖೆಯಿನಪ್ಪ ವರ್ಣದ ಮಿಶ್ರವರ್ಣದೊಳಾದ ಕಾ।

೧. ಶಲಾಕೆಯಿ, ಗ॥ ೨. ವರ್ತನ, ಗ॥ ೩. ರಸ, ಗ॥

ತುಕಮೆ ವೃಕ್ಷಲತಾದಿಜಾತಿಯೊಳೋಜೆಯಂ ಗಡೆಗೊಂಡ ಚಿ॥ತ್ರಿಕನ
ಭಾವಮೆ ಪತ್ರಭಂಗದ ಪೂರ್ಣಭುಂಗದ ಭಂಗಿಯೇ ಮರುಭಾವು!
ಲೌ। ಕಿಕಮಮಾನುಷಮೆಂದು ಕಂಟಕಿತಾಂಗನಾದನಿಳಾಧಿಪಂ ॥೪೩

ನಯನಾನಂದಮನುಂಟು ಮಾಡಿ ಮಧುವಿಂ ಕೈವಂದುದಂ ಚೀರ
ಘ॥ ಟ್ಟಯ ಮಾಂತವ್ಯನ ವಿಶ್ವಕರ್ಮನಳವಲ್ತೆಂಬನ್ನಮುದ್ಯಾನಮಾ।
ಲೆಯನಾವಂ ರಸಚಿತ್ರಮಾಗೆ ಬರೆವಂ ಪೇಟೆಂದು ಕಾರುಣ್ಯದೃಷ್ಟಿ
ಯೊ। ಳಿತ್ತಂ ಧರಣೀಶ್ವರಂ ಕನಕಮಂ ಭ್ರೂಕೋಟಿಯಿಂ ಕೋ
ಟಿಯಂ॥೪೪

ಅಂತು ಮೆಚ್ಚುಗೊಟ್ಟು ಚಿತ್ರಪಟಮಂ ನೋಡಲುತ್ಕಂಠರಾದ ಸ
ಭಾಜನಕ್ಕೆ ನೀಡುವುದುಂ ಮಹಾಪ್ರಸಾದಮೆಂದು ಕಳೆದು ಕೊಂಡು
ನಿರ್ಮಾಣಿಸಿದ ಚಿತ್ರಿಕನ ಚಿತ್ರವಿದ್ಯಾಪ್ರಾಗಲ್ಭ್ಯಮಂ ಪ್ರತ್ಯೇಕಮವ
ಳೋಕಿಸಿ ॥೪೫

ಎವೆಯಿಕ್ಕಲ್ ಮಱೆದುದು ಪುಳ।
ಕಮನಾನಂದಾಶ್ರುಪೂರಮಂ ತಳೆದುದು ಸಂ॥
ಭ್ರಮದಿಂ ಬೆರಲಂ ಮಿಡಿದು।
ತ್ತಮಾಂಗಮಂ ತೂಗಿದುದು ಸಭಾಜನಮನಿತುಂ ॥೪೬

ಅಂತು ಹರ್ಷರಸಸುಧಾವರ್ಷದೊಳೆ ನಾಂದು ॥೪೭

ಬಿಚ್ಚಳಿಸಲ್ಕೆ ನಾಲಗೆಗಳೆಯ್ದವೆನಲ್ ಬನಮಂ ವಿಲೋಕನ। ಕ್ಕ
ಚ್ಚರಿಯಪ್ಪಿನಂ ಬರೆದ ಚಿತ್ರಿಕನಾವನೊ ದೇವ ದೇವರಂ॥ ಮೆಚ್ಚಿಸು
ವನ್ನನೀದೊರೆಯನಾವನೊ ಭೂಭುಜನೊಂದು ಕೋಟಿಯುಂ। ಮೆ
ಚ್ಚುಱಿವನೆಂದು ಪರಿಷಜ್ಜನಮುಂದುಲಿಯುತ್ತುಮಿರ್ದನಂ॥೪೮

೧. ನಿರ್ಮಾಣಿಸಿದ, ಕ॥ಗ॥

ಆವ್ರಸ್ತಾವದೊಳ್ ಆಮಧುಪ್ರಸಂಗರಾಗರಸತರಂಗಿತೆಯಾದ ವನಲಕ್ಷ್ಮೀವಿಲಾಸಮಂ ವನಪಾಲಕನವನಿಪಾಲಕಂಗಱಪಲೆಂದು ಪೊಂಬಾಳೆಯ ಹಾಳೆಯೊಳವಮ್ಮಾವಿನ ಕೊನೆಯುಮಂ ಮಲ್ಲಿಗೆಯ ನನೆಯುಮಂ ಚೆನ್ನೆಯ್ದಿಲೆಲೆಯೊಳತಿಮುಕ್ತದಲರುಮಂ ತಮಾಳದ ತಳಿರುಮಂ ತಾವರೆಯ ಕೋಡೆಲೆಯೊಳಸುಕೆಯ ಕುಡಿಯೆಲೆಯುಮಂ ಸುರಪೊನ್ನೆಯ ಪೂಗೊಂಚಲುಮನೆಳವಾೞೆಯ ಪಸುರೆಲೆಯೊಳ್ ಕೊಸಗಿನ ಕುಸುಮಮುಮಂ ಸಂಪಗೆಯ ಮುಗುಳುಮಂ ಪೊಂಗೇದಗೆಯೆಸಳ ದೋಣಿಯೊಳ್ ತಿಳಕದ ಕಳಿಕೆಯುಮಂ ವಕುಳದ ಮುಕುಳಮುಮಂ ಪ್ರತ್ಯಗ್ರಸಮುತ್ಪನ್ನಪಲಾಶಪತ್ರದೊಳ್ ದವನದ ನಿಡುಪೂವುಮಂ ಮರುಗದ ಕುಡಿಯುಮಂ ಬಿಸಲತೆಯೊಳಂ ನೆಯ್ದಿಲ[2] ಸಣ್ಣಕಾವಿನೊಳಂ ಬಿಸತಂತುವಿನೊಳಂ ಕರ್ಬಾಳದ[3] ಬಳ್ಳಿಯೊಳಂ ತೆಂಗಿನ ತಿರುಳೆಲೆಯ ಸುಲಿಕೆಯೊಳಂ ಕೇದಗೆಯ ಬೆಳ್ಸುಱಯ ಸಿಪ್ಪುಱೊಳಂ ಬೇಱವೇಱ ಸುತ್ತಿ ಸೊವಡಿಂಗೆಱಗಿದ ಮಱದುಂಬಿಯ ಮುದ್ರೆಯಾಗೆ ತಂದು ಮುಂದಿಱಪಿ ॥೪೯

ವನಲಕ್ಷ್ಮಿ ನಿನಗೆ ನವಯೌ ।
ವನಲಕ್ಷ್ಮಿಯನೆಯ್ದೆ ಮೆಱೆಯಲೆನ್ನಂ ಪಿಕನಿ ॥
ಸ್ವನದಿಂ ಪ್ರಾರ್ಥಿಸಿದಳ್ ದೇ ।
ವ ನೋಡಲೇೞ್ತರ್ಪುದಾಲತಾಕೋಮಳೆಯಂ ॥೫೦

ಎಂದು ಬಿನ್ನವಿಸೆ ವನವಿಲಾಸದೊಳಾದ ವಿಸ್ಮಯರಸಾವೇಶದಿಂ ಪೊಡಮಡಲ್ಮಱದೆನೆಂದು ಸರ್ವಾಂಗಪ್ರಣತನಾಗಿ ಮತ್ತಮಿಂತೆಂದಂ ॥೫೧

---

೧. ಹಾಳಿ. ಗ॥ ೨. ಸಣ್ಣಗಾವಿನೊಳಂ. ಕ॥ ೩. ಬಳಿ. ಗ॥

ತಾವರೆಯ ನೂಲೆ ನುಸುಳ ।
ಲ್ಲಾವೆಡೆಗುಡವೆನಿಪ ಘನಕುಚಂಗಳ ನಿನ್ನೀ ॥
ಲಾವಣ್ಯವತಿಯರಿಂ ಪಡೆ ।
ದೇವ ! ನವಾಂಕುರಕದಂಬಮಂ ಕುರವಕದೊಳ್ ॥೫೨
ಪೊಳೆವೆಳಮಿಂಚು ಪಾಲೊಳ್ ।
ತೊಳೆದಂತೆವೊಲಪ್ಪ ಲೋಲಲೋಚನದಬಳಾ ॥
ತಿಳಕಾಲೋಕನದಿಂ ಕು ।
ಟ್ಮಳತಂಮಾಡುವುದು ತಿಳಕಮಂ ನೃಪತಿಳಕಾ ! ॥೫೩
ಪದಪಲ್ಲವದೊಳ್ಮಚ್ಚರಿ ।
ಪುದು ಪಲ್ಲವದಿಂದಮೆಂಬ ಮೇಳದ ಮುನಿಸಿಂ ॥
ದೊಪೆಯಿಸಿ ನಿನ್ನಬಲೆಯರಿಂ ।
ಪೊದೆಯಿಸು ಪೊಸದಳರ್ಗಳಿಂದಶೋಕದ್ರುಮಮಂ ॥೫೪
ಎಂದು ಬಿನ್ನವಿಸೆ ಮನದೆಗೊಂಡು ॥೫೫
ಉಗುರ್ಗಳ ಕೆಂದಳಂಗಳ ಮರೀಚಿಗಳಿಂದಮವರ್ಕೆ ರಾಗಮಂ ।
ನಗೆಯುಮನೀವವೊಲ್ಕಳೆದು ಕೊಂಡು ನೃಪಂ ವನಪಾಲನಾಗಳೋ ॥
ಲಗಿಸಿದಪೂರ್ವವಸ್ತುವನವೆಲ್ಲವನಾವರಿಸಿರ್ದ ಪಲ್ಲವಾ ।
ಳಿಗಳ ಬೆಡಂಗು ಕಣ್ಗೊಳಿಸೆ ಸುತ್ತಿದ ಸುತ್ತುಗಳಂ ಸಡಿಲ್ಚಿದಂ ॥೫೬
ಅಂತು ಕಲ್ಪಪಾದಪಪ್ರವಾಳಾನುಕಾರಿಯಪ್ಪ ಕೋಮಲಕರಾಂಗು
ಲಿಗಳಿಂ ಬೇಱವೇಱ ಸುತ್ತಿದ ಸುತ್ತುಗಳನೋಸರಿಸಿ ॥೫೭
ಪೊಸಸುಗ್ಗಿಯ ಮೆಯ್ಸಿರಿಯಂ ।
ಪೊಸವಂ ಕಂಡವನಿಪಾಲದೃಷ್ಟಿಪ್ರಸರಂ ॥

೧. ತಳೆವಂತೆ. ಗ॥ ೨. ಪಳಿಯ. ಕ॥

ಪಸವಟ್ಟಂತೆವೊಲಾದುವು ।
ಪೊಸತೆನಿಸಿದ ವಸ್ತು ಸೋಲಮಂ ಪುಟ್ಟಿಸದೇ? ॥೫೮

ಅಂತವನತಿಪ್ರೀತಿವಿಸ್ತಾರಿತವಿಲೋಚನನಾಗಿ ನೋಡಿ ॥೫೯

ಬನದೊಡಮೆಯೊಳಾದೊಲವುಂ ।
ವನಪಾಲನೊಳಾದ ಮೆಚ್ಚುಮೆಕ್ಕೆಕ್ಕೆಯಿನಂ ।
ದನುವಿಸೆ ವಿದಗ್ಧಚತುರಾ
ನನನಾದಂ ಪ್ರೀತಿವಿಕಸಿತಾನನನಾದಂ ॥೬೦

ಚಿತ್ತದೊಳಚ್ಚುತ್ತಿಯಂ ತನಗೆ ಮಾಡಿದ ಸುಗ್ಗಿಯ ಸೊಂಪೆನಿಪ್ಪ ಸಂ।
ಪತ್ತಿಗೆ ನೋಂತ ಪೊಚ್ಚಪೊಸವಂ ಪದಪಿಂ ಪೆಸರ್ಗೊಂಡಿವರ್ಕೆ ಮು॥
ಚ್ಚಿತ್ತಮಿವೆಂದು ಮೆಚ್ಚು ಪೆಱರ್ಗೊಪ್ಪದೆನಲ್ ವನಪಾಲಕಂಗೆ ಮೆ ।
ಚ್ಚಿತ್ತನನರ್ಘರತ್ನಮಯಭೂಷಣಮಂ ಗುಣರತ್ನಭೂಷಣಂ ॥೬೧

ಅಲಘುಲಘುಗಣನೆಯಂ ಪಂ ।
ಬಲಿಸದು ಬಗೆ ಧನಮನರ್ಥಿಗೀವೆಡೆಯೊಳೆನಲ್ ॥
ಚಲೆಯಿಡಲರಿದೆನಿಪೊಡಮೆಯು ।
ನಲರ್ಗಂ ಪೊಸದಳರ್ಗಮಿತ್ತನವನೀಪಾಲಂ ॥೬೨

ಅಂತು ಮೆಚ್ಚುಗೊಟ್ಟು ॥೬೩

ಅಳಿನೀಝಂಕಾರಮಂ ಕೋಕಿಳಕಳಭಕಳಧ್ವಾನಮಂ ಕೇಳಲುಂ
ವೃ । ಕ್ಷಲತಾಸೌಂದರ್ಯಮಂ ನಂದನವಿಹರಣವಿಶ್ರಾಂತಶುದ್ಧಾಂತಕಾಂ
ತಾ॥ ಜಳಕೇಳೀಲೀಲೆಯಂ ನೋಡಲುಮವರ್ಗನುಲೇಪಂಗಳಂ ವಸ್ತ್ರ
ಭೂಷಾ । ವಳಿಯಂ ಮೆಚ್ಚೀಯಲುಂ ಚಂಪಕಮಧುಮಧುರಾಲೋಕ
ನುತ್ಕಂಠನಾದಂ ॥೬೪

೧. ಯುಲಾ. ಕ॥ ೨. ಮಮರಾನೋಕ. ಕ॥ ಗ॥

ಅ[1]ನಂತರಂ ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಪಶೋಭಿತಮುಂ [2]ನಕ್ಷತ್ರಚಕ್ರದಂತೆ ಹಸ್ತಪ್ರಶಸ್ತಮುಂ ಘನಸಮಯದಂತೆ ಪುಷ್ಕರವಿರಾಜಿತಮುಂ ವಸಂತಸಮಯಸಹಕಾರದಂತೆಗ್ರಪಲ್ಲವೋಲ್ಲಸಿತಮುಂ ಶಿಶಿರಸಮಯದಂತೆ ಜಾತಿಭಂಗಭಂಗುರಮುಂ ನಿದಾಘಸಮಯದಂತಪಘನಮನೋಹರಮುಂ ತನ್ನಂತುದಾತ್ತವಂಶಮುಂ ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ ॥೬೫

ಲೀಲಾಮಣಿಭೂಷಣರು ।
ಗ್ಜಾಲಂ ಜಳಜಳಿಸೆ ಗಗನದೊಳ್ ನೃಪರತ್ನಂ ।
ವ್ಯಾಳಗಜೇಂದ್ರಾರೂಢಂ ।
ನೀಲಾಚಲರತ್ನಶಿಖರಮಂ ಗೆಲೆವಂದಂ ॥೬೬

ಕೊಂಕುವಡೆ[3]ದವಱ ವಕ್ರತೆ ।
ಯಂ ಕಳೆವಚ್ಚರಿಯನಪ್ಪುಕೆಯ್ದೆತ್ತಿದ ಕೞ ।
ರಂಕುಸಮೆಸೆದುದು ಶೌರ್ಯಲ ।
ತಾಂಕುರವೆನೆ ರಿಪುಮದೇಭವಜ್ರಾಂಕುಶನಾ ॥೬೭

ನೀಲಾಚಲೇಂದ್ರಮಣಿಮಯ ।
ಚೂಳಿಕೆಯೊಳ್ತೋರ್ಪ ಮೇಘಡಂಬರಮೆಂಬೀ ।
ಲೀಲೆಯನೇಂ ಮೆಱೆದುದೊ ಭೂ ।
ಪಾಲಂಗೆತ್ತಿರ್ದ ಮೇಘಡಂಬರಮಾಗಳ್ ॥೬೮

ಸಿರಿ ಬಂದು ವಕ್ಷದೊಳ್ನೆಲ ।
ಸಿರೆ ಬೆನ್ನನೆ ಬಂದ ಪುಂಡರೀಕಮಿದೆಂಬಾ ॥

೬೫. ಪಟ್ಟವರ್ಧನಂ-ಪ್ರೂಜಾಗಜಂ. ಶ.ದ. ಪು. 404

೧. ಅಂತನಂತ. ಕ॥ ೨. ಮಹಾನಕ್ಷತ್ರ. ಗ॥ ೩. ನಿದಿರ. ಕ॥ಗ॥

ತಿರೆ ಪಿಡಿದ ಪುಂಡರೀಕಂ ।
ಕರಮೆಸೆದುದು ರಾಜಪುಂಡರೀಕಂಗಾಗಳ್ ॥೬
ಎರಡುಂ ಕೆಲದೊಳ್ ಪಣ್ಣಿದ ।
ಕರಿಣಿಯ ಮೇಲಿರ್ದ ಚಾಮರಗ್ರಾಹಿಣಿಯರ್ ॥
ಕರಮೆಸೆದರ್ ಕಾರ ಮುಗಿ ।
[1]ಲ್ವೊರೆಯೊಳ್ಸಂಚಳಿಪ ಬಳ್ಳಿಮಿಂಚೆಂಬಿನೆಗಂ ॥೨೦

ಆಪ್ರಸ್ತಾವದೊಳ್ ॥೨೧

ಅವನೀಶ್ವರಂ ವಸಂತೋ ।
ತ್ಸವಮಂ ನೋಡಲ್ ಬನಕ್ಕೆಬಿಜಯಂಗೆಯ್ದಂ ॥
ದವಸರಮಂ ಭೋಂಕೆನಲಱ ।
ಪುವವ್ರೋಲುಣ್ಮಿದುದನೇಕಶಂಖಧ್ವಾನಂ ॥೨೨

ತದನಂತರಂ ॥೨೩

ಎಳವೆಱೆಯುಂತೆ ಕೊಂಕುವಡೆದಂಕುಶಮಂ ಮನುಜೇಂದ್ರಚಂದ್ರಮಂ। ಪೊಳೆಯಿಸುತುಂ ಕಪೋಳದೊಳುದುಶುಗಳಿಂದಗೆವ್ರೊಯ್ಯೆ ವಜ್ರಕಂ॥ ಡಳಮುರದೊಳ್ ತಳತ್ತಳಿಸೆ ಹಾರಮರೀಚಿ ಕಿರೀಟಕಾಂತಿಪ । ಜ್ಜಳಿಸೆ ವಿಳಾಸದಿಂದಣೆದು ನೂಂಕಿದನಂಕದ ಪಟ್ಟದಾನೆಯಂ ॥

ಅಂತು ತಳೆದು ॥೨೪

ಎಡೆಯಱಿದು ಬರ್ಪ ಮೇಳದ ।
ಕಡುಗಾಡಿಯ ಚೆದುರ ಚೆಲ್ಲದಬಳಾಜನದೊಳ್ ॥
ನುಡಿಯುತ್ತುಂ ಪೊಸಸುಗ್ಗಿಯ ।
[3]ಪಡಿಮಾತಂ ನೃಪತಿ ಬನಕೆ ಬಿಜಯಂಗೆಯ್ದಂ ॥೨೫

೧. ಲ್ವೊರೆಯೊಳ್. ಗ॥ ೨. ವೊಲುತ್ಥಾನನೇಕ. ಕ॥ಗ॥ ೩. ಪಡೆಮಾತಂ. ಕ॥

ಮುತ್ತಿನ ಕೊಡೆ ಕಣ್ಬೇಲಿಯ ।
ಸತ್ತಿಗೆ ತೞ್ ಮೇಘಡಂಬರಂ ಬೆಳ್ಗೊಡೆ ತ ॥
ಱತ್ತಮಿರೆ ಬನಮೆ ಬನಮಂ ।
ಮುತ್ತುವವೊಲ್ನಡೆದುದೊಡನೆ ರಾಣಿಯ ವಾಸಂ ॥೭೬

ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪೆ ।
ರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದಗ್ರಾಯಕರ್ವಾದಕರ್ ॥
ನುಡಿಕಾಱರ್ಬಗೆಕಾಱರೊಳ್ಗವಿಗಳೊಳ್ವಂಡಿರ್ಕರ್ವಮಾರರ್ ಮನಂ ।
ಬಡೆದಂತೆಃಪುರಕಾಂತೆಯರ್ಬಹುಕಳಾಸಂಪನ್ನೆಯರ್ಕನ್ನೆಯರ್ ॥೭೭

ಆಗಳುತ್ತುಂಗಮಾತಂಗಮಣಿಘಂಟಾನಿನಾದಮುಮುಚ್ಚಾರಣಚ್ಛ್ರವಣರಮಣೀಯರವಮುಮುಂಕುಶದ ಮುಸೆಯುಮಾಭರಣಕಿರಣಮುಮೊಡನೊಡನೆ ಪಸರಿಸೆ ಸೌಂದರ್ಯಪುರಂದರಂ ಪುರಮಂ ಪೊಱಮಟ್ಟು ಲೀಲೋದ್ಯಾನಕ್ಕಭಿಮುಖನಪ್ಪುದುಂ ॥೭೮

ರತಿ ಲಾಸ್ಯಪ್ರೌಢಿಯಂ ಕಂತುಗೆ ನೆಱೆ ಮೆಱೆಯಲ್ಪೂರ್ವರಂಗಪ್ರಸಂಗೋ । ಚಿತಮಂ ಪುಷ್ಪಾಂಜಲಿಕ್ಷೇಪಮನೊಡರಿಸಲೆಂದಿರ್ಪುದುಂ ತತ್ಕ್ಷಣಪ್ರ ॥ ಸ್ತುತಮಂ ವಿಸ್ತೀರ್ಣಮಂ ಪಚ್ಚೆಯ ಜವನಿಕೆಯಂ ಬಿರ್ಚಿದಂತಿರ್ದುದುಜ್ಜ್ವಲಂ । ಭಿತರಂಭಾಸಸ್ಯಪೂಗೀವನವೃತಿಹರಿತಾಕಾಶಮುದ್ಯಾನದೇಶಂ ॥೭೯

ಮತ್ತಮತನುಗಾಜಮರಕತಕೃತಕಾಚಳದಂತೆಯುಂ ವಸಂತಕರಿಮಕರಕ್ಷುಭಿತಶೃಂಗಾರನೀರಾಕರದಂತೆಯುಂ ವಿರಹಿಜನಸಂತಮಸಸ್ತೋಮದಂತೆಯುಂ ಕಱಂಗಿ ಕಱ್ತಲಿಸಿ ಲೋಚನಪಥಕ್ಕನತಿದೂರವಾಗಿ ॥೮೦

೭೯. ವೃತಿ- ಬೇಲಿ.

ಕಳಿಕೆಯ ಪೊಸದಳಗ*ಳ ಕು।
ಟ್ಮಳಂಗಳಲ*ಳ ವಿಚಿತ್ರವರ್ಣದಿನೇಂ ಕ॥
ಣ್ಗೊಳಸಿದುದೊ ಸುರಧನುವ೯ಂ।
ಡಳದಿಂ ಕೇರ್ಗಟ್ಟಿದಂತಿರುದ್ಯಾನವನಂ ॥೪೧

ತದನಂತರದೊಳ್ ॥೪೨

[ ಒದವಿಸಿ ಮುದವಮಂ ] ಕಿವಿಗೆ।
ಯ್ದಿದುದುಲಿವ ರಥಾಂಗಮಿಥುನದುಲಿಪ್ರಂ ಕನರ್*॥
ರ್ಚಿದ ಕನ್ನಡವಕ್ಕಿಯ ದನಿ॥
ಮದಾಳಿನೀವಿರುತಿ ಸಾರಸೋತ್ತರರವಂ ॥೪೩

ನೆಲಸುತ್ತುಂ ಕೊಳದೊಳ್ಸರೋಜಮುಕುಳಂ ಸಸ್ಮೇರಮಪ್ಪಂತು ಜ। ಕ್ಕುಲಿಸುತ್ತುಂ ಪೊಸತಂ ಲತಾಪ್ರಸವಮಂ ಮುಂಡಾಡಿ ತಣ್ಗಂ ಪನ॥ ಗ್ಗಲಿಸುತ್ತುಂ ಪರಪುಷ್ಟಕೀರರವಮಂ ತಂದೊಂದನೊಂದಂ ದಱೊ। ಳ್ಕಲಸುತ್ತುಂ ಬನದಿಂ ವಿನೋದಚತುರಂ ಬಂದತ್ತು ಮಂದಾನಿಲಂ ॥೪೪

ವನಕುಸುಮಾಸವಂಬೆರಸು ತನ್ನೊಡವಂದ ನರೇಂದ್ರಸುಂದರೀ।
ಜನಮುಖಸೌರಭಕ್ಕೆ ಬಗೆ ಸೋಲಲೊಡಂ ಬಿಸುಟಂತದಂ ತದಂ।
ಗನೆಯರ ವಕ್ತ್ರಸೌರಭಮನಾಗಳೆ ತಾಂ ಮೆಱೆದಂ ಚಳಂ ಪುರೀ॥
ವನಪವಮಾನನಾವೆಡೆಗಮಸ್ಥಿರರಪ್ಪರ ಕೂಟಮೇಪ್ರದೋ! ॥೪೫

ಅಂತು ಪವನಪವನಂ ನಿಜನಿತಂಬಿನೀವದನಾರವಿಂದಮಕರಂದಸುಂದರಸ್ವೇದಾಪನೋದಿಯಾದ ತದನಂತರದೊಳ್ ॥೪೬

೪೧. ಕೇರ್ಗಟ್ಟಿದಂತೆ- ಗೋಡೆಹಾಕಿದಹಾಗೆ.

೧. ಬಿಡೆ. ಗ॥ ೨. ದೇಗಳೆ. ಕ॥

ಸುರಗಿರಿಯಿಂ ಸುರರಾಜಂ ।
ಧರೆಯ ವನೋಪಾಂತಭೂಮಿಭಾಗಕ್ಕಿೞಿವಂ ।
ತಿರೆ ಸಿಂಧುರದಿಂದಿೞಿದಂ ।
ಧರಣೀನಾಥಂ ವಿನೋದವನಪರಿಸರದೊಳ್ ॥೮೭

ಎಳಮಿಂಚು ಕಾರ ಮುಗಿಲಿಂ ।
ದಿೞಿವಂತೆಮೃತಾಂಶುಲಕ್ಷ್ಮಿ ಶಶಿಮಂಡಲದಿಂ ॥
ದಿೞಿವಂತೆ ವಾಹನಂಗಳ ।
ನಿೞಿವೆಸೆದುದು ನೃಪನ ಪೆಂಡವಾಸದ ತಂಡಂ ॥೮೮

ಆಗಳೊರ್ವಳ್ ॥೮೯

(ಪೃಥ್ವೀವೃತ್ತಂ)

ನಿತಂಬಭರಮಂದಯಾನದೊಳೆ ಯಾನಮಂ ಕೊರ್ಬುವೆ ।
ತ್ತ ತುಂಗಕುಚದಿಂ ಪೊದೞ್ದೊಗೆದ ಕುಂಭಮಂ ಗೆಲ್ದವಾ ॥
ಮತಂಗಜಮನಿಕ್ಕಿ ಮೆಟ್ಟೆ ಮೆಱೆದಪ್ಪಳೆಂಬನ್ನೆಗಂ ।
ಲತಾಂಗಿ ಪೊಱಮಟ್ಟು ನಿಂದಳಭಿಸಾರಿಕಾದ್ವಾರದೊಳ್ ॥೯೦

ಅಮರವಿಮಾನಂಗಳನಿೞಿ ।
ವಮರಿಯರಂ ಪೋಲ್ತು ಪುಷ್ಪಕಂಗಳನಿೞಿದಾ ॥
ರಮಣಿಯರೇನೆಸೆದಿರ್ದರೊ ।
ರಮಣೀಯತೆವೆತ್ತುಮಾನರೇಂದ್ರನ ಕೆಲದೊಳ್ ॥೯೧

ಲಾವಣ್ಯವತಿಯರುಂ ನಾ ।
ನಾವಾಹನದಿಂದಮಿೞಿದು ಮೋಹನವಿದ್ಯಾ ॥
ದೇವತೆಯರಂತೆ ಕೆಲದೊಳ ।
ಳಾವಲ್ಲಭನತನುವಲ್ಲಭಂಗೆಣೆಯಾದಂ ॥೯೨

ಆಗಳಾಮಹೀವಲ್ಲಭಂ ಪ್ರತಿಹಾರಿಕಾಪ್ರಕೋಷ್ಠಪ್ರತಿಷ್ಠಿತಕರಪಲ್ಲವನುಂ ತಾಂಬೂಲವಾಹಿನೀಸಮನ್ವಿತನಾಗವಲ್ಲೀದಳಪ್ರಸಾರಿತಕರಾಗ್ರನುಂ ಮಂದಪದಸಂಚಾರಸಂಚಲಿತವಜ್ರಕುಂಡಳಪ್ರಭಾಚಕ್ರಚಾಮರೋಪವೀಜಿತನುಂ ಸ್ಥೂಲಮುಕ್ತಾಫಳಪ್ರಲಂಬಹಾರಚಂದ್ರಿಕಾಧವಳಿತವಿಶಾಲವಕ್ಷಸ್ಸ್ಥಳನುಂ ಘನನಿತಂಬಾಭೋಗಭಾರಸ್ಖಲಿತಕಾಮಿನೀಪದವಿನ್ಯಾಸದರಹಾಸಸ್ಫುರಿತಕಪೋಲನುಂ ಗಮನಶ್ರಮಸ್ವೇದಸಲಿಲಸುಧಾಬಿಂದುಲಲಿತಾಂತಃಪುರಪುರಂಧ್ರೀಮುಗ್ಧಮುಖಚಂದ್ರಾವಲೋಕನವಿಕಸಿತವಿಲೋಚನೋತ್ಪಲನುಂ ವಂದಿವೃಂದಜಯ[1]ಜಯಾನಂದನಿನಿದಾ[2]ಪೂರ್ಣಕರ್ಣನುಮಾಗಿ ॥೯೩

ಸುತ್ತಿದ ಪೆಂಡವಾಸದೆಳವೆಂಡಿರ ಲೋಲಕಟಾಕ್ಷಮಾಲೆ ದಿ।
ಗ್ಭಿತ್ತಿಗಕಾಂಡಕಾಂಡಪಟಮಂ ಕುಡೆ ತನ್ಮಣಿಮೇಖಳಾರವಂ॥
ಮುತ್ತೆ ಮದಾಳಿನೀಮಧುರಸಿಂಜಿತಮಂ ನಡೆತಂದನಂದು ತ।
ಱ್ತಿತ್ತಿದ ಮೇಘಡಂಬರದ ತಣ್ಣೆೞಲೊಳ್ ಮನುಜೇಂದ್ರಚಂದ್ರಮಂ ॥

ಮೃದುಪದಪಲ್ಲವಕ್ಕೆ ದೊರೆ ಪಲ್ಲವಮೆಂಬರ ಮಾತನೇಱಿಪಂ।
ದದೆ ಮಣಿನೂಪುರಕ್ವಣಿತಮುಣ್ಮಿನಂ ಪುಳಿನಸ್ಥಳಂ ನಿತಂ॥
ಬದೊಳೆಣೆಯೆಂಬರಂ ನಗುವವೋಲುಡೆನೂಲುಲಿ ಪೊಣ್ಮೆವನ್ನಮು।
ನ್ಮದಕಳಹಂಸಯಾನಮನದೇಂ [3]ಮೆಱೆದತ್ತೊ ವಿಲಾಸಿನೀಜನಂ ॥೯೪

ಪಿಡಿಯುಲಡಂಗುವ ಬಡನಡು।
ನಡುಗೆ ಘನಸ್ತನದ ಬಿಣ್ಪಿನಿಂ ನಗೆಗಣ್ಗಳ್॥
ನಡೆನೋೞ್ಪರ ಮೆಲ್ಲೆರ್ದೆಯುಂ।
ನಡೆ ನಡೆದುದು ನೃಪನ ಪೆಂಡವಾಸದ ತಂಡಂ ॥೯೫

೧. ಜೀಯಾ. ಕ॥ಗ॥ ೨. ಪೂರ್ಣಾರ್ಕರ್ಣ. ಕ॥ ೩. ನೆಱೆದತ್ತೊ. ಕ॥ಗ॥

ನಡೆಯ ವಿಲಾಸಮದೋರಡಿ ।
ನಡೆಯುದು ಕಳಹಂಸೆಗೀಕೆಗಳ ಕೆಲದೊಳೆನಲ್ ॥
ಪಿಡಿಯಿಂದಿಳಿದತನುವ ಕೈ ।
ಪಿಡಿಯೆನೆ ನಡೆತಂದರಂತಪುರದೆಳವೆಣ್ಡಿರ್ ॥೯೭

ಅಗಳೊರ್ವಳ್ ॥೯೮

ಅಡಿಗಡಿಗೆ ಮೋಲುದಂ ನಡೆ ।
ವೆಡೆಯೊಳ್ ಸಾವಗಿಸೆ ಪಾಣಿಪಲ್ಲವರುಚಿಯಿಂ ॥
ಪಡೆದುವು ಕೆಂದಳರ್ಗಳಸದ ।
ಬೆಡಂಗನೆಡೆಗಿಡುವ ಮೊಲೆಗಳಾಕೋಮಳೆಯಾ ॥೯೯

ಸ್ತನಕೆಮಳಮುಕುಳನಾಳಮ ।
ನನುಕರಿಸುವ ಹಾರಲತೆಯನೋಸರಿಸುವವೊಲ್ ॥
ವನಿತೆ ಕರಕಿಸಲಯಚ್ಛವಿ ।
ಯ ನೆವದಿನೆಳವಿಸಿಲನೊದವಿಸುತ್ತುಂ ಬಂದಳ್ ॥೧೦೦

ಸೋಗೆಯ ಸೊರ್ಕಂಚೆಯ ಮದ ।
ಪೋಗಡಿಸಿದುದಿವಳ ಮುಡಿಯ ನಡೆಯ ಬೆಡಂಗಿಂ ॥
[3]ಗೀಗಳೆನೆ ಬಂದಳತನುವ ।
ಪೊಗಣೆ ತಿರುವಿಂ ಬರ್ದುಂಕಿ ಬರ್ಪವೊಲೊರ್ಬಳ್ ॥೧೦೧

ಪುದಿದಿರೆ ಪುಷ್ಪಪಾಂಸುಪಟಲಂ ಕಡುಮೆಲ್ಪಳವಟ್ಟು ನುಣ್ಮಳ ।
ಲ್ಕೆದಿಡದ ಕೇತಕೀಕುಸುಮರೇಣುವಿನಂತಿರೆ ಪಾದಪಲ್ಲವ ॥
ಕ್ಕೊದವಿಸೆ ಬಟ್ಟೆ ಮೆಟ್ಟದೆಡೆಯೊಳ್ಸುಖಸಂಪದಮಂ ನಿತಂಬಭಾ ॥

೧. ತಂದುವು. ಕ॥ ೨. ಕಳಶ. ಗ॥ ೩. ದೀಗಳೆನೆ. ಗ॥

ಳದ ನೆವದಿಂ ನಿತಂಬಿನಿ ನೆಲಂ ತವದಂತಿರೆ ಗುಜ್ಜುಗಿಮೆಟ್ಟಿದಳ್ ॥೧೨೨

ಅಂತು ನಿಜವಿಳಾಸಿನೀಪದಕಮಳವಿನ್ಯಾಸದಿಂ ಸ್ಥಳಕಮಳವನವ ನುಪವನಮಾರ್ಗದೊಳೊದವಿಸುತ್ತುಂ ॥೧೨೩

ಮನದೊಳ್ತನ್ನ ವಿಲಾಸಮಂ ಬಯಸುವನ್ನಂ ಪನ್ನಗೇಂದ್ರಂ ಸು ರೇಂ। ದ್ರನುಮಿಂದ್ರತ್ವದಿನೀನರೇಂದ್ರವಿಭವಂ ಮೇಲೆಂಬಿನಂ ರೂಪ ಯೌ॥ ವನಲಾವಣ್ಯವಿಲಾಸವಿಭ್ರಮನಿವಾಸಂ ಪೊಡಮಾಸಂ ವಿಲೋ। ಚನನೀಲೋತ್ಪಳಮಾಲೆಯಿಂ ಪ್ರಿಯೆ ಬಂದಂ ರಾಜವಿದ್ಯಾಧರಂ ॥

ಇದಪೂರ್ವಂ ಜೇಜೆವೇಜೀರತಿಯರಿನಿಬರೆಂತಾದರೆಂಬನ್ನೆಗಂ ಮೇ। ಳದ ಪೆಂಡಿರ್ ಸುತ್ತಲುಂ ಕಣ್ಗೊಳಿಸೆ ಪೊಸವನೋದ್ಯಾನದೊಳ್ಕ್ರೀಡೆಗೆ ಮಾಡಲ್ ॥ ಪದವಿಲ್ಲಂ ಪೂವಿನಂಬಂ ತ್ರಿಭುವನವಿಜಯಾರಂಭಸಂರಂಭ ಚಿತ್ತಂ। ಮದನಂ ಬರ್ಪಂತೆ ಬಂದಂ ಚತುರಕವಿಜನಾಸ್ಥಾನರತ್ನ ಪ್ರದೀಪಂ ॥೧೨೪

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ವಸಂತಸಮಯವರ್ಣನಂ
ಪಂಚಮಾಶ್ವಾಸಂ ಸಂಪೂರ್ಣಂ.



೧. ಮೆಟ್ಟುವಳ್. ಕ॥ ೨. ಮಾಲೆಯುಂ. ಕ॥ ಗ॥

## —ಷಷ್ಠಾಶ್ವಾಸಂ—

ಶ್ರೀನಿಲಯಂ ಮನಸಿಜಸಂ।
ಬಾನೆಗೆ ತಾಯ್ಗಾಡೆನಿಪ್ಪ ಚೆಲ್ವಂ ತಳೆದು ॥
ಧ್ಯಾನವನದೊಳಗೆ ಪ್ರೊಕ್ಕಂ।
ಜೈನಾಗಮವನವಸಂತನಭಿನವಪಂಪಂ ॥೧

ಆಗಳ್ ॥೨

ವನಲತೆಯ ಮೇಲೆ ಬಂದಾ।
ಮನೋಜನೆಳಲತೆಗಳೆಂಬಿನಂ ಕೋಮಳೆಯರ್ ॥
ಮನುಜೇಂದ್ರನೊಡನೆ ಪ್ರೊಕ್ಕರ್।
ಬನಮಂ ಜನನಯನಸಂಮುದಾಳಂಬನಮಂ ॥೩

ಬನದೊಳಗಂ ಲತಾಲಲಿತೆಯರ್ಪುಗುವಲ್ಲಿ ವಿಲಾಸದಿಂದಮೀ।
ವನಲತೆಯಂ ಪರಾಭವಿಸದಿರ್ಪುದು ಮನ್ನಿಪುದೆಮ್ಮನೆಂದು ಕಾ ॥
ಮಿನಿಯರ ಕಾಲ್ಗಳಂ ಪಿಡಿದುವಬ್ಜರಜಂ ಪೊರೆದುನ್ಮದಾಳಿಯಿಂ।
ಬಿನಮೆಸೆದಿರ್ದುವಾಕೆಗಳ ನೂಪುರಕಾಂಚನಕಿಂಕಿಣೀಗಣಂ ॥೪

ನೋಡಲೊಪ್ಪಸುಗ್ಗಿಯ ಕಡು।
ಗಾಡಿಯನರಸಂ ಬನಕ್ಕೆ ಬರೆ ತೆಂಬೆಲರಿಂ ॥
ದಾಡಿದುವು ಲತೆಗಳದಿರೊಳ್।
ಪಾಡಿದುವು ಮದಾಳಿ ಮಂಗಳಂಬಾಡುವವೊಲ್ ॥೫

೧. ಬಂದುವು. ಗ॥ ೨. ಬಾಡುವವೊಲ್. ಕ॥ಗ॥

ಕೆಂಗುಡಿ ತಳರ್ತಶೋಕೆಯ ।
ಪಾಂಗುಡಿ ಪಟವಾಸಚೂರ್ಣಮಂಭೋಜರಜಂ ॥
ಮಂಗಳಗೇಯನಿನಾದಂ ।
ಭೃಂಗೀರವಮಾಗೆ ನೃಪತಿ ಬಸಮಂ ಪೊಕ್ಕಂ ॥೭

ಈವನಿತಾಸಹಸ್ರದೊರೆಗಂ[೧] ದೊರೆಗಂ ರತಿ ಕಾಮದೇವನೀ ।
ಭೂವಲಯಾಧಿನಾಯಕನ ಪೋಲ್ವೆಗೆ ಪೋ ದೊರೆಯಲ್ಲೆನುತ್ತೆ ನಾ ॥
ನಾವಿಧದಿಂದೆ ತಮ್ಮೊಳುಲಿವಂದದಿನಂದುಲಿಯುತ್ತುಮಿರ್ದುವಿ । ಮಾಮ್ರ
ವಿನ ಕೊಂಬಿನೊಳ್ ಗಿಳಿಗಳುಂ ಕೊನ*ರ್ಗರ್ಚಿದ ಕೋಕಿಲಂಗಳುಂ ॥

ಪ್ರಿಯವಾದುವು[೨] ಪಡಿಯರವ ।
ಕ್ಕಿಯ ಜಡಿಪುಂ ಜಕ್ಕವಕ್ಕಿಯುಲಿ ಸಾರಸವ ॥
ಕ್ಕಿಯ ಕುಹಕಂ ಪಂಡಿತವ ।
ಕ್ಕಿಯ ಪಠನಂ ನೃಪನ ಕಿವಿಗೆ ಕೇಳೀವನದೊಳ್ ॥೮

ಅಲರ್*ಕ್ಕಿಯ ಗೆಡೆವಕ್ಕಿಯ ।
ಜಲವಕ್ಕಿಯ ಪವಳವಾಯ ಪಕ್ಕಿಯ ಕಿಸುಗ ॥
[೩]ಣ್ಮಲರ್*ಕ್ಕಿಯ ಮೆಲ್ಲುಲಿ ನ ।
ಲ್ಲುಲಿ ಮದನನ ಗೀತವಾದ್ಯದುಲಿಯವೊಲೆಸೆಗುಂ ॥೯

ಕಳಕಂಠಂ ಪುಗಿಲೆಂಬೀ ।
[೪]ಕಳನಿನದಂ ವಕ್ರಮಾಗಿಯುಂ ನೃಪನ ಮನಂ ॥
ಗೊಳಲಾರ್ತುದು ಪುರುಡಿಪ ನ ।
ಲ್ಲಳ ನಲ್ಮೆಯ ವಕ್ರವಚನದಂದದಿನಾಗಳ್ ॥೧೦

೧. ವರೆಗಂ. ಕ॥ಗ॥ ೨. ಪಡಿಯಱ. ಗ॥ ೩. ಣ್ಣಲರ್ಕ್ಕಿ. ಕ॥
೪. ಗಳ. ಗ॥

ಎನಿತೊಳವು ವನಲತಾತರು ।
ವನಿತುಮನೊರ್ವೋದಲೆ ನೋಡುವನಿತಳವು ಕರಂ ॥
ಮನದೊಳ್ನನೆಕೊನೆವ್ರೋಯ್ತ್ತನೆ ।
ವನಪಾಲಪುರಸ್ಸರಂ ನೃಪಾಲಂ ತಳರ್ದಂ ॥ ೧೧

ಅಂತು ವನವಿಹರಣವ್ಯಾಜದಿಂ ನಿಜಚರಣಸರಸಿರುಹಶೋಣಿಮದಿಂ ವನಸ್ಥಳಿಯನಳಂಕರಿಸುತ್ತುಂ ವನವಿಲಾಸಿನೀವದನವಲ್ಲತಿಳಕಮೆನಿಪ ತಿಳಕಮಂ ನೋಡಿ ॥ ೧೨

ಇನಿತು ಮುಕುಳಕ್ಕೆ ಜಲ್ವಲ ।
ಗಿನಿತು ಚೆಲ್ವಾಗಿನಿತು ಪಲ್ಲವಕ್ಕೆ ವಿಳಾಸಂ ॥
ತನಗಿಲ್ಲದಂದು ಪಡೆಗುಮೆ ।
ವನತರುಗಳೊಳಧುವೆ ತಿಳಕಮೊಂಬೀಪೆಸರುಂ ॥ ೧೩

ಎನುತ್ತುಂ ತತ್ಸಮೀಪದೊಳ್ ಮಧುಪ್ರಸಂಗದೊಳಂಗನಾಗಂಡೂಷದಿನುನ್ಮಿಷಿತಮುಕುಳಮಾದ ಪಕುಳಮಂ ನೋಡಿ ॥ ೧೪

ಮದಮಂ ಸಟ್ಟರಣಕ್ಕೆ ಮಾಡಿ ಮದನೋನ್ಮಾದಕ್ಕೆಡರ್ಪಾಗಿ ಸಂ।
ಮದಮಂ ಚಿತ್ತಭವಂಗೆ ತಂದು ಮದಿರಾಗಂಧಕ್ಕೆ ಸುವಾದಿಯಾ ॥
ಮದಿರೊಂದಚ್ಚರಿಯುಲ್ಲು ಮುಗ್ಧಮದಿರಾಗಂಡೂಷದಿಂದುಳ್ಳಲ ।
ರ್ದುದು ಮುನ್ನಂ ನಿಜಮಂ ಬಿಸುಟ್ಟುದೆಲತಾಂತಾಗ್ರೇಸರಂ ಕೇಸರಂ॥

ಎಂದವಱ ಕೆಲದೊಳ್ ತುಂಬಲರ ತೀಟದಿನಲ್ಲಾಡುವಸುಕೆಯ ಪೊಸದಳಿರ್ಗಳಂ ನೋಡಿ ॥ ೧೫

೧. ಯಾಯ್ತ್ತನೆ. ಗ॥ ೨. ಗಂಡೂಷಮಧುಪ್ರಸಂಗದೊಳಮುಂ. ಗ॥
೩. ದಂದು. ಕ॥ ಗ॥ ೪. ದೂಳ್ಗ. ಗ॥

ಸ್ಮರನಾರೂಢಶರಾಸನಂ ಮಧುಕರಜ್ಯಾರಾವಮಂ ಮಾಡಿ[೧] ತೊ।
ಟ್ಟರಲಂಬಂ ನೆಱೆದಿರ್ದನೋ[೨] ವರನಗಲ್ದೇಕಾಂತದೊಳ್ಕಾಂತೆಯರ್ ।
ಬರವೇಡಿಲ್ಲಿಗೆ ಪೋಗಿಮತ್ತಲೆನುತುಂ ಕೈಸನ್ನೆಯಿಂ ಪೇೞ್ವವೋಲ್ ।
ತರುಣಾಶೋಕನವಪ್ರವಾಳಮೆಸೆಗುಂ ಮಂದಾನಿಲಾಂದೋಳಿತಂ ॥೧೩

ಎಂದು ಪಾಡೆ ॥೧೪

ಯೋಗಿಗಳ ಚಿತ್ತಮುಪಗತ ।
ರಾಗಮುದಂ ನಡುಗಿಸಲ್ಕೆ ಸಾಲ್ದುದು[೩] ತಳಿರ್ಗಳ್ ।
ರಾಗಿಗಳವರ್ಕೆ ನಡುಕಮು ।
ನಾಗಿಸದಿರ್ಕುಮೆ ವಸಂತಸಮಯಸಮೀರಂ ॥೧೫

ಎನುತ್ತುಮಲ್ಲಿಂ ತಳರ್ದು ಕಾಮಸಾಮ್ರಾಜ್ಯಮಂದಿರವಾದನವಮಾಲೆಯೆನಿಸಿ ಪರ್ಬಿ[೪] ಪಲ್ಲವಿಸಿ ದಾಂಗುಡಿವಿಡುವ ನವಮಾಲಿಕಾಲತೆಗಳುಮಂ ಮಕರಕೇತನಧಾರಾನಿಕೇತನಮೆನಿಸಿ ಸೋನೆವನಿಯ ತಂದಲನೆಗುಂದಲೆವಾಲ್ವ ಚೂತಲತೆಗಳುಮಂ ಮನೋಭವನ ಸಂಭೋಗಭವನಮೆನಿಸಿ ನಿಱಿವಳಿರ ತುಱುಗಲಿಂ ಕಱಂಗಿ ಕಟ್ಟಲಿಪ ತಮಾಳಲತೆಗಳುಮಂ ಕುಸುಮಾಸ್ತ್ರನ ಶಸ್ತ್ರಶಾಲೆಯೆನಿಸಿ ಕುಸುಮಾಕೀರ್ಣಮಾದ ಕರ್ಣಿಕಾರಲತೆಗಳುಮಂ ಮನೋಜರಾಜದೇವಪೂಜಾನಿವಾಸಮೆನಿಸಿ ಪ ದವನದ ಮಧ್ಯರಂಗದಿಂ ಮನಂಗೊಳಿಸಿ ಬಿರಿಮುಗುಳ ಕಂಪನುಗುಳ್ವ ಮಾಧವೀಲತೆಗಳುಮಂ ಮನಸಿಜನ ಮಜ್ಜನಶಾಲೆಯೆನಿಸಿದ ಪೂಗೊಳನನೊಳಗುಮಾಡಿ[೫] ತಳಿರ ತೊಂಗಲಿಂ ಪುದಿದ ಲವಂಗಲತೆಗಳುಮಂ ರತಿಪತಿಯ ವಿವಾಹಗೇಹಮೆನಿಸಿ ಪೊಸದಳಿರ ಪಸರದಿನೊಪ್ಪು

೧. ನೋಡಿ. ಗ॥ ೨. ನೆಱೆದಿರ್ದ. ಕ॥ಗ॥ ೩. ಸಾರ್ದುದು. ಗ॥
೪. ಪರ್ಬಿ. ಕ॥ ೫. ನೆರೆಗಂ. ಗ॥

ನೇಲಾಲತೆಗಳುಮನರಸನವಳೋಕಿಸುತ್ತಿರ್ಪುದಂ ॥೨೦

ಆನಿರ್ದ ಬನದೊಳುಱಿಮವ ।
ನೇನಂ ನೃಪ ನೋಟ್ಪ ಬರ್ಪುದೆಂಬಂದದಿನಂ ॥
ದೇನುಲಿದುದೊ ಪಿಕಮಧುರ ।
ಧ್ವಾನದಿನಾರಕ್ತಕೋರಕಂ ಸಹಕಾರಂ ॥೨೧

ಆಗಳದಱ ಸಹಜಸೌಂದರ್ಯಮಂ ಸೌಂದರ್ಯಪುರಂದರನೆಮೆಯಿಕ್ಕದ ಱಂಪು ಪೊಂಪುಳಿಪ್ಪೋಗೆ ನೋಡಿ ॥೨೨

ಅಲರ್ಗೊಂಚಲ್ಗಳನೇಱಿ ತುಂಬಿ ಮಧುಪಾನಕ್ರೀಡೆಯೊಳ್ಪೊರ್ಕಿ ಮಂ । ಜುಳಮಂದ್ರಧ್ವನಿಯಿಂದವೇಂ ಮೊರೆಮವೇ? ವಾಚಾಲಯುಮಂ ಸಂಯಮಂ ॥ ತೊಲಗಿತ್ತೇ ಕನರ್ಗೆ ಬರ್ಗ ಕೋಗಿಲೆಗೆ? ಕಾಯಂ ಕ ಬರ್ಗ ಮೇಣ್ಪಾಟಕಂ । ನಲಿವತ್ತೇ ಗಿಳಿ? ಚೂತವಲ್ಲದ ವೃಥಾಸ್ಥೂಳಾವನೀಜಾತದೊಳ್ ॥೨೩

ಎಂದು ಕೆಂದಳಿರ ಗೊಂದಣದೊಳುಲಿದು ಗಱಿವ್ರವರಗಿಳಿಯ ಕಳ ಕಳನುಮಂ ಕುಸುಮರಸಮಂ ಸವಿದು ಮೊರೆವ ಚಂಚರೀಕದಿಂಚರಮು ಮಂ ಕಳಿಕೆಗರ್ಚಿದ ಕಷಾಯಕಂಠನಾದ ಕಳಕಂಠದಕುಂಠಕಂಠಮು ಮಂ ಶ್ರುತಿಪಥಕ್ಕತಿಥಿಮಾಡಿ ॥೨೪

ಅಸವಳಮಾಯ್ತು ರೂಪಮದವಗ್ಗಳಮಾದುದು ಯೌವನೋದ ಯಂ । ಪೊಸಸಿರಿವಂತನಾಸಿರಿಯುಮಂ ಜನಕಂ ಮಘು ಕೊಟ್ಟನಿಂ ನಿಚಾ ॥ ರಿಸುಗುಮೆ ಚೂತನೊಲ್ದು ಪೊರೆಗುಂ ಗಿಳಿಯಂ ಮುಖರಾ ಳಿಯಂ ಮಧು । ವ್ಯಸನಿಮದಾಳಿಯಂ ಸಹಜವಕ್ರವಚಸ್ವಿಯನನ್ಯಪು ಷ್ಟನಂ! ॥೨೫

೧. ಯೋಗೆ. ಗ॥ ೨. ದದೇಂ. ಕ॥ ೩. ರೂವು. ಕ॥ಗ॥

ಎಂದು ಮಾಕಂದಮಂ ವಕ್ರೋಕ್ತಿಯಿಂ ಪೊಗೞ್ದು ತಣಿಯದೆ ರಾಜಮಕರಧ್ವಜಂ ಸುಕರಕವಿತಾಮನೋಹರನ ಮೊಗಮಂ ನೋೞ್ಪುದುಂ ॥೨೬

ಇದು ಚಿತ್ತಜಸಂಪತ್ತಿಗೆ।
ಮೊದಲೀಮರಮೊದಲೊಳತನು ಸಾಧಿಸಿ ಪಡೆದಂ।
ಮದನಾಸ್ತ್ರಮನೆನೆ ಚೂತದ।
ಮೊದಲೇಂ ಚೆಲ್ವಿಂಗೆ ಮೊತ್ತ[1]ಮೊದಲೆನಿಸಿದುದೋ! ॥೨೭
ನುಡಿಗಲಿಸಿ ಮಾಣ್ದುದೇ ಕ।
ನ್ನಡವಕ್ಕಿಯನಿಸಲನಂಗಂ ಕಲಿಸಿದುದೆ ।
ಡೊಡೆ ಬಿರಯಿಗೆ ಮುನ್ನಿನ ಭವ।
ದಿಡುವಗೆ ಚೂತಾಂಕುರಂ ವಿಷಾಂಕುರಮೆ ಪೊಲಂ ॥೨೮
ಕೋರಕಮೊರಡೆಸೆದೀಸಹ।
ಕಾರದ ಸೆಳೆಗೊಂಬು ಮಾನಿನೀಮಾನಸ್ತಂ ।
ಚೇರಮುಮನಳಿಪಂಗಜ।
ವೀರನ ಪಿಡಿದಾರೆಗೊಂಬೆನಲ್ ಸೊಗಯಿಸುಗುಂ ॥೨೯
[2]ಕರಣಗ್ರಾಮಮನೀಮಾ।
ಪುರಕ್ಕೆ ಮುಗ್ಧ ಬಾೞ್ಕೆಗೊಟ್ಟು ಕೆಸುವಲಗೆಗಳಂ ।
ಬರೆದೆತ್ತಿದ ಶಾಸನಕೇಂ।
ದೊರೆಯಾದುವೊ ಸೊಸೆಯ ಪನಿ ಪಗಿಲ್ತೆಳದಳಿರ್ಗಳ್ ।

೨೮. ಭವದಿಡುವಗೆ=ಭವದೆ+ಇಡುವ+ಅಗೆ.

೧. ಮೊಟ್ಟ. ಕ॥ಗ॥ ೨. ಕರಣಾಗ್ರ. ಗ॥

ನನೆ ಪೇೞ್ ಬಂದ ಮಾವಂ ।
ಮನೋಭವಂ ನಿಂದು ನೋೞ್ಪುದುಂ ವಿರಹಾಳಂ ॥
ಬನಿಯುರಭಿಮಾನಧನಮು ।
ಳ್ಳನಿತುಮನಾಲೀಢಮಿಟ್ಟು ಸುಂಕಂಗೊಂಡಂ ॥ ೩೧
ಖಂಡಿಸಿ ಪರಪುಷ್ಟಂ ನಿಜ ।
ತುಂಡದಿನೊಳ್ಗೊ[1]ರನೀಂಟ ಕನರಂ ತೊಂ[2]ಡುಂ ॥
ಬಂಡುಂ [3]ನೆಗೆಯೆ ವಿಜೃಂಭಿತ ।
ಗಂಡಸ್ಥಳಮಾದುದಾಮ್ರಮುಕುಳಸ್ತಬಕಂ ॥ ೩೨
ಪ್ರೊಮಿಡಿಯಿಂ ಕುಸುಮಸ್ತಬ ।
ಕಾಮೋದಕ್ಕೆಱಗಿದಳಿಯ ಬಳಗದಿನಂದೇಂ ॥
ಮಾಮರಪೆಳಗೊಂಬೆಸೆದುದೊ ।



ಕಾಮನಯಃಪಿಂಡಶೃಂಖಳಾದಂಡದವೊಲ್ ॥ ೩೩
ಪಸರಿಸಿ ಶಾಖಾಭುಜದೊಳ್ ।
ಮಿಸುಗುವ ನಖಪದಮನಧರಪಲ್ಲವಮಂ ಖಂ ॥
ಡಿಸಿ ರಕ್ತತುಂಡನೇಂ ಪುಟ್ಟ ।
ಸಿದುದೊ ಸಹಕಾರಲತಿಕೆಗಂಗಜಶರಮಂ ॥ ೩೪

ಎಂದಾಸುಮತಿಯಾಗೆ ಪೇೞೆ ಕೇಳ್ದು ಕಾವ್ಯವಿನೋದಂ ಪಾರಿಜಾತಂ ಕೋರಕಿತಮಾದಂತೆ ಪುಳಕಿತಶರೀರನಾಗಿ ॥ ೩೫

ಸುಕರಕವಿತಾಮನೋಹರ ।
ನ ಕವಿತೆಯಂ ಮೆಚ್ಚಿ ಮೆಚ್ಚುಗೊಟ್ಟಂ ಸಹಕಾ ॥

೧. ನಳ್ಗೊನರ, ಕ॥ ೨. ಕೊಂಡುಂ, ಗ॥ ೩. ಗಡೆಯೆ, ಕ॥

ರಕುಮಾರನೆಂದು ಮಣಿಕನ ।
ಕಕೋಟಿಯುಂ ನೆವದೊಳಿತ್ತನಾಧರಣೀಶಂ ॥ ೩೬
ಮರನಿತ್ತುದೆಂದು ಚಿಂತಿಸ ।
ದೆರೆಯದ ವಿಬುಧಾಳಿಗೀಯೆ ಚಿಂತಾಮಣಿಯುಂ ॥
ಸುರಭೂರುಹಮುಂ ಕಲ್ಲುಂ ।
ಮರನಾದುವೆನಿಪ್ಪ ದಾನಿ ದಾನವಿನೋದಂ ॥ ೩೭

ಅಂತು ಮೆಚ್ಚುಗೊಟ್ಟು ಸಹಕಾರಮಹೀರುಹಕ್ಕೆ ಸಹಜಸೌಂದರ್ಯನೆಂದು ತನ್ನ ಪೆಸಱನಿಟ್ಟುದಱ [1]ಕೆಲದಲ್ಲಿರ್ದ ಬಳ್ಳಮಾವನಡರ್ದ ಬಳ್ಳಮಲ್ಲಿಗೆಯುಂ ನೋಡಿ ॥ ೩೮

ಎಳಮಾವಂ ಪಲ್ಲವಗ್ರಾಹಿಯನನುನಯದಿಂ ಸುತ್ತಿ ತೆಂಗಾಳಿಯಿಂ ಸಂ । ಚಳನಪ್ರಾಗಲ್ಭ್ಯದೊಳ್ ವಾಸನೆವಡೆದು ಪರಿಷ್ವಂಗದೊಳ್ತಾಂಗಿ ಭೃಂಗಾ ॥ ವಳಿಯುಂ ಪೋಱಿಂ ದರಸ್ಮೇರದಿನೆಱಗಿಸಿ ವಲ್ಲೀಲತಾತನ್ವಿ ವೇಶ್ಯಾ । ಕಳೆಯೊಳ್ ಸೌಭಾಗ್ಯಶೋಭಾವತಿ ಪರಿಣತಿಯುಂ ಗರ್ಭದೊಳ್ಕಲ್ತಳಕ್ಕುಂ ॥ ೩೯

ಎಂದದಱ ಬಿರಿಮುಗುಳ ಪಸರಿಸುವ ಪೊಸಗಂಪಂ ಪಸವಟ್ಟುಂ ತೀಂಟುವ ಮದಾಳಿಪಟಲಮುಂ ನೋಡಿ ॥ ೪೦

ಸುರಭಿಸಮೀರಣಂ ಬೆರಸು ಬೇಗದೆ ಬಂದಲರ್*ಗಣ್ಣ ಸನ್ನೆಯಿಂ ।
ಕರೆಯೆ ಸುತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ ॥
ಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ ।
ತರೆ ಮುಸುಕಿಟ್ಟವೊಲ್ಮುಸುಱಿ ಪೀರ್ದುವು ಸೌರಭಮಂ ಮದಾಳಿಗಳ್ ॥

೩೯. ಪೋಱಿಂ- (?)

೧. ಕೆಲದೊಳಿರ್ದ. ಕ॥

ಎಂದವಲೋಕನಂಗೆಯ್ದು ॥೪೨

ಅನುರೂಪವಮಾಗೆ ಪುಟ್ಟಿಸಿ।
ವನಜಭವಂ ಚೂತರಾಜನಂ ಮಲ್ಲಿಗೆಯಂ॥
ವನಮಿಥುನಂಗಳೊಳೀಂ ಮು।
ನ್ನಿನ ತನ್ನ ಜಡಸ್ವಭಾವಮಂ ಮೀಱಿದನೋ ॥೪೩

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋ।ಕಿಳನಾದಂ ವೇದಮಂತ್ರಂ ಕುಡಿ ಗುಡಿ ಮಧು ಮಾಹೂರ್ತಿಕಂ ಪ್ರೊತವಲ್ಲೀ॥ಕುಳಮೆಲ್ಲಂ ನಿಬ್ಬಣಂ ಬಂದಬಲೆಯುರೆನೆ ಚೂತಂಗಮೀಮಲ್ಲಿಕಾಕೋ।ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯಪುಣ್ಯಾಂಬುವಿಂದಂ ॥೪೪

ಎಂದವನಿಪತಿ ಸಮಯೋಚಿತವಾಗ್ವಿಳಾಸಮಂ ಮೆಱೆವುದುಮನಂತರಮವಸರಂಬಡೆದು ಮಂಗಳಪಾಠಕಂ ಮದಾಳ ಕುಂತಳೆಗೆ ಮಲ್ಲಿಕಾವಲ್ಲಭೆಗಭಿಮುಖನಾಗಿ ॥೪೫

ರತಿ ಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ।
ದ್ಯುತಿ ಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ॥
ಪತಿ ತಳಿರುಯ್ಯಲೋವರ ಸುಸಿಲ್ಕನೆವಿಲ್ ನನೆಯಂಬು ಮಂಟಪಮಾ।
ರುತನಳಿನೀನಿನಾದಮಿವಱಿಂ ಪೊಸಮಲ್ಲಿಗೆಗಕ್ಕೆ ಮಂಗಳಂ ॥೪೬

ಮುರಿದ ತೊಡಂಬೆಯೊಳ್ಮನಸಿ ತೋರ್ಪ ಪಸು[illegible] ಮೇಗೆ ಬೀಗಿ ಬೆ[illegible]ಕ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮ[illegible]ಪೋದ ಕು[illegible]ಲಂ॥ ಬಿರಿದಲರೆಂಬಿವಂ ತಿಱಿದು ಮಲ್ಲಿಗ[illegible] ಸಂಚಕಂಗ[illegible] [illegible]ರಚಿಸಿ ಪಂಚಬಾಣವಸಜಂ ತಳೆ[illegible] [illegible]ಸಂತದೊಳ್ ॥೪೭

ಅಸದಳಮಾಗೆ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ । ದೆಸೆಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಲ್ಪುರಂ ॥ ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದು ವಂ । ಪೊಸೆಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂ ಗಜಂ ॥೪೮

ಸಕಳೋರ್ವೀತಳಸಾಮ್ರಾ ।
ಜ್ಯಕಂಠಿಕಾಬಂಧಬಂಧುಬಂಧುರಮಲ್ಲೀ[1] ॥
ಮುಕುಳಮಣಿಕಳಶಗಂಧೋ ।
ದಕದಿಂದಾದುದು ಮನೋಭವಂಗಭಿಷೇಕಂ ॥೪೯

ತುಂಬಿಗೆ ಕೊರಲುದ್ದಂ ಬಂ ।
ಡೆಂಬನಿತಱೊಳದರ್ದಲ್ತು ಬಿರಯಿಗುಗುಳ್ದೇ ॥
ರೆಂಬನಿತಾದುದು ದೆಸೆಯಂ ।
ತುಂಬಿದ ಮಗಮಗಿಪ ಮಲ್ಲಿಕಾಕುಸುಮರಸಂ ॥೫೦

ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು ಪುಷ್ಪಂಗಳು । ಕ್ಷನಿತುಂ ನೋಂತವೆ ತನ್ನ ಕೀೞಸಳ ಸೌಭಾಗ್ಯಕ್ಕೆನಿಪ್ಪಗ್ಗದೀ ॥ ವನದೇವೀಸಖಿಗೀವಸಂತವಿಜಯಶ್ರೀದೇವಿಗೀಚೂತರಾ । ಜನ ಮಾದೇವಿಗೆ ಮಲ್ಲಿಕಾರಮಣಿಗಂ ಭದ್ರಂ ಶುಭಂ ಮಂಗಳಂ ॥೫೧

ಎಂದು ಮಂಗಳವೃತ್ತಂಗಳನೋದಿದ ಮಂಗಳಪಾಠಕಂಗೆ ತದುತ್ಸವನುಹಾದಾನಮಂ ಮಾಡಿ ಪಲ್ಲವಿತಲತಾದ್ರುಮಂಗಳಂ ನೋಡುವಲ್ಲಿ ॥

ಮೃದುಪದಪಾತದಿಂದಸುಕೆಯಂ ತಳರ್ವ*ೇೞಿಸಿ ಕೇಕರಾಂಶುಪಾ । ತದಿನಲಗೊ*ರ್ಂಚಲಂ ತಿಳಕಮಂ ತಳೆವಂತಿರೆ ಮಾಡಿ ಪರ್ಬಿ ಕೊ ॥

೧. ಬಂಧುರಂ ಧುರ. ಗ॥; ಬಂಧುರಮಲ್ಲೀ. ಕ॥

ರ್ಪಿನ ಕುಚದೊತ್ತಿನಿಂ ಕುರವಕಕ್ಕೆ ನವಾಂಕುರಮಂ ನಿಮಿರ್ಚಿ ದಿ । ಉಮದಬಳಾಜನಂ ನೃಪವರಂಗೆ ಮನೋಜಮಹೇಂದ್ರಜಾಳಮಂ ॥೫೩

ಆಗಳದಂ ನೋಡಿ ವಿಸ್ಮಯಸ್ಮೇರಮುಖಾರವಿಂದನಾಗಿ ॥೫೪

ವಾರಸ್ತ್ರೀಯರ ಸೋಂಕುವೆತ್ತನಿತಱುದೇಕಿಂದ್ರಿಯಕ್ಕಂ ಸ್ಮರೋ । ದ್ರ್ಗಾರಂ ಪೆರ್ಚಿದುದೆಂದೊಡೀಕೆಗಳನಂಗಕ್ರೀಡೆಯೊಳ್ ಮೆಚ್ಚದಂ ॥ ದಾರಂ ದಂಡಿಸರಾರನಂಡಲೆಯರಾರಂ ಗಂಡುದೊಱಿಸರಾ । ರಾರಂ ಮಾನವರಂ ತೆಮಳ್ದು ತುಱಿಯರ್ಪಂಚೇಂದ್ರಿಯಾಸಕ್ತರಂ॥೫೫

ಎಂದು ಮನದೊಳೆ ಬಗೆದು ॥೫೬

ಒದೆದೆಳದಳರಂ ನೀಂ ಮಾ ।
ಡಿದೆ ತನಗೆಂದಸುಕೆ ನಿನಗೆ ಸೋಲ್ತಿತ್ತುದು ಕೊಳ್ ॥
ಇದನೆಂದು ನೃಪಂ ಕೋಮಳ ।
ಪದಪಲ್ಲವೆಗಿತ್ತನರುಣಮಣಿನೂಪುರಮಂ ॥೫೭

ನನೆಯಂ ಪೂಗಳನಾಳೋ ।
ಕನಮಾತ್ರದೆ ಪಡೆದಳೆಂದು ಮೆಚ್ಚಿಂ ತಿಳಕಂ ॥
ನಿನಗಿತ್ತುದೆಂದು ಭೂಪಂ ।
ವನಿತಾತಿಳಕಕ್ಕೆ ಹಂಸತಿಳಕಮನಿತ್ತಂ ॥೫೮

ಅಂಕುರಮಂ ಕುಚಕಳಶದ ।
ಸೋಂಕಿಂ ಪುಟ್ಟಿಸಿದ ನಿನಗೆ ದಯೆಗೆಯ್ದುದು ಮೆ ॥
ಚ್ಚಿಂ ಕುರವಕತರುವೆಂದರ ।
ಸಂ ಕೊಟ್ಟಂ ವೃತ್ತಕುಚೆಗೆ ಮುತ್ತಿನ ಸರಮಂ ॥೫೯

ಅಂತು ನೆನಂಬಡೆದು ॥೬೦

ಮರನುಂ ಬಳ್ಳಿಗಳುಂ ತೊವಲ್ದೊಡೆ ವಸಂತೋತ್ಸಾಹಮೆಂದಗ್ಗದೆ । ಗ್ಗರೆನುತ್ತಿರ್ಕೆಮ ಪೊಂಗಳಂ ತುಡುಗೆಯುಂ ವಸ್ತ್ರಂಗಳಂ ಪೂಣ್ದ ಸಿ ॥ ದ್ಧರಸಂ ಸಿದ್ಧಿಸಿದಂತೆ ಕಲ್ಪತರು ಕೈವಂದಂತೆ ಭೂವಲ್ಲಭಂ । ಧರೆಗೆಲ್ಲಂ ಪಿರಿದೀವ ದಾನಗುಣದಿಂ ನಿಚ್ಚಂ ವಸಂತೋತ್ಸವಂ ॥

ಎಂದು ಪೊಗಳ್ವ ವಂದಿಜನದಬ್ಬರಮಂ ಮನದೊಳುಬ್ಬರಮಂ ಮಾಡುತ್ತುಂ ದಾನವಿನೋದನಿರ್ಪುದುಂ ॥೭೨

ಏವುದು ಗುರುಕರ್ಕಶಭೂ ।
ಷಾವಿಳಸನಮೆಂದು ಪುಷ್ಪಕೋಮಳೆಯರ್ ಪು ॥
ಷ್ಪಾವಚಯಕ್ಕೊಡರಿಸಿದರ್ ।
ಪೂವಿನ ವಲಕೆಱದ ತುಡುಗೆಯಿಂ ಕೈಗೆಯ್ದೆಲ್ ॥೭೩

ನೂಪುರಕಳರವಮುಮಂ ಕಬ ।
ರೀವರಿಮಳಮತ್ತಮಧುಪರವಮುಮಂ ಬನಮಂ ॥
ವ್ಯಾಪಿಸೆ ಪುಷ್ಪಾವಚಯ ।
ವ್ಯಾಪಾರಕ್ಕೆಳಸಿ ಸುಱಿದರಂದಂಗನೆಯರ್ ॥೭೪

ಆಗಳೊರ್ವಳ್ ॥೭೫

ಮುಡಿ ಬಿಟ್ಟು ಕಾರ ಸೋಗೆಯ ।
ಜೆಡಂಗನಭಿನಯಿಸೆ ಮುಡಿಯ ಸೊವಡಿಂಗಲರಂ ॥
ಬಿಡೆ ಮಧುಪವಾಳಿ ಮಾವಿನ ।
ಮಿಡಿಯುಂ ಮಿಡಿವಟ್ಟನತನುಗಾಯ್ವ್ವೊಲಾಯ್ದಳ್ ॥೭೬

ಚಪಳವಿಳೋಚನೆ ಸಹಕಾ ।
ರಪಲ್ಲವೋಲ್ಲಸಿತಪಾಣಿಪಲ್ಲವೆ ಪೋಲ್ತಳ್ ।

೭೬. ಮಿಡಿವಟ್ಟು- ಮಿಡಿವ ಬಟ್ಟು, ಬಿಲ್ಲಿನಲ್ಲಿಟ್ಟು ಮಿಡಿಯುವ ಗೋಲಿ.

ತಪನೀಯಪ್ರಭೆ ಬಾಳಾ ।
ತಪಮಂ ನೆಱೆಗೆಯ್ದು ಬಳ್ಳಮಿಂಚಿನ ತೆಱನಂ ॥೬೭
ಸಿರಿಕಂಡದ ತಳಿರಂ ತಿಱ ।
ದ ರಮಣಿ ನಾವಗಿಪ ಮುಡಿಯುಮೆಡಗೆಯ್ಯುಂತೆ ॥
ಬ್ತಿರೆ ನಾಗಬಂಧದಿಂ ನೆರೆ ।
ಪುರಗನುಮುರಗಿಯುಮಿವೆನಿಸಿ ಪಡೆದುವು ಚೆಲ್ವಂ ॥೬೮
ಇಂದೀವರದಳನಯನೆಯ ।
ಕೆಂದಳದೊಳ್ನವತಮಾಳಕೋರಕಜಾಳಂ ॥
ಕೆಂದಾವರೆವೂವಿನ ಮಕ।
ರಂದಮನೀಂಟುವ ಮದಾಳಿಪಟಳಮೆನಿಕ್ಕುಂ ॥೬೯
ಕರಕಿಸಲಯರುಚಿಯಿಂದಂ ।
ಪರಿಭವಮಾಯ್ತೆಂಬ ಲಜ್ಜೆಯಿಂ ತಲೆಯೆಱಕಂ ॥
ಪಿರಿದಾಯ್ತೆನೆ ಜೋಲ್ದು ಸಡಿ ।
ಲ್ದರುಣಾಶೋಕಪ್ರವಾಳಮಂ ವಧು ತಿಱಿದಳ್ ॥೭೦
ಎಱಗಿಸಿ ವಿಳಾಸದಿಂ ಪೂ ।
ತೆಱಗಿದ ಲತೆಯಂ ಲತಾಂಗಿ ಕುಸುಮಸ್ತಬಕ ॥
ಕ್ಕೆಱಗಿದಳಿಮಾಳೆಯಂ ಸೋ ।
ದೆಱಗಿಸಿ ಸೆಳೆಗೊಂಬಿನರಲನೞ್ತಿಯೊಳಾಯ್ದಳ್ ॥೭೧
ಯುವತಿ ಕದಳೀದಳಶ್ಯಾ ।
ಮೆ ವಸಂತಲತಾಗ್ರಶಾಖೆಯಂ ಪಿಡಿದು ಮನೋ ॥
ಭವಪಾಶಲತಿಕೆಯಂ ಪಿಡಿ ।
ದ ವಸಂತಶ್ರೀಯ ಚೆಲ್ವನೆಳಕುಳಿಗೊಂಡಳ್ ॥೭೨

ಮಾವಂ ಮುಲಂಗಿ ಸಂಪಗೆ ।
ಪೂವಿನ ಸೆಳೆಗೊಂಬನುಡಿದು ಪಿಡಿದು ಬೞಲ್ದಿ ॥
ದಾಱವಧುವೆಸೆದಳ್ ರನ್ನದ ।
ದೀವಿಗೆವಿಡಿದಿರ್ದ ಪೊನ್ನ ಪುತ್ತೞಗೆಯವೊಲ್ ॥೨೩

ಲೆಕ್ಕಕ್ಕೆ ತಿಱಗೆ ತಿಱವರ್ ।
ಮಿಕ್ಕರಲನವೇವುವೆಂದು ಮುಗುಳ್ಗಳೊಳಗೆ ಹಾ ।
ರಕ್ಕೆ ಚೆಳಕಿಗೆ ಬಣ್ಣಿಸ ।
ರಕ್ಕಾಯ್ದಳ್ ತರುಣಿ ಮಲ್ಲಿಕಾಕುಟ್ಮಳಮಂ ॥೨೪

ದ್ವಿಗುಣಿಸೆ ಕೇಕರಾಂಶು ಕುಸುಮಂಗಳನಾರ್ಗವನಂಗರಾಗಮಂ ।
ತ್ರಿಗುಣಿಸೆ ತೋಳ ಪೆರ್ಮೊಲೆಯ ನಾಭಿಯ ಮೂಲದ ನುಣ್ಪು ನೀ
ಳ್ಕೆ ಮ ॥ ಲ್ಲಿಗೆಯಲಗೊಂಚಲಂ ಚಪಳಲೋಚನೆ ತೊಟ್ಟಸೆ ಕಂಡು
ಮನ್ಮಥಂ । ತ್ರಿಗುಣಿಸಿ ತನ್ನ ಕಟ್ಟದಲಗಂ ಮೆಱೆದಂ ನೆಱೆ ಗೇಣ
ಕೇಣಮಂ ॥೨೫

ನನೆಗೊಂಬಂ ನೀಳ್ಕೆ ಚಂದ್ರಾತಪಮೆ ಪುದಿದುದೆಂಬನ್ನೆಗಂ ನೋ
ಡಿ ಚಂದ್ರಾ । ನನೆ ಪೂವಂ ಲೀಲೆಯಿಂದಂ ತಿಱಿಯೆ ತಿಳಕದೊಳ್ಮ್ರತ್ತ
ಯುಂ ಕೋರಕಂಗಳ್ ॥ ನನೆಗಳ್ ಪುಷ್ಪಂಗಳಂತಂತೊಗೆಯೆ ರತಿ
ಲತಾಂತಾಯುಧಂಗುದು ಸಂಮೋ । ಹನಬಾಣಶ್ರೇಣಿಯುಂ ತೀವಿದ
ತವದೊಣೆಯುಂ ತಾಳ್ದಿದಂತಿರ್ದಳೊರ್ಬಳ್ ॥೨೬

೨೫. ಗೇಣ್- ಕೆಶಾರಿ; ಪ್ರ. “ಕಣ್ಗಳ್ ಮದನನ ಗೇಣ್ಗಳ್.”
೨೬. ತವದೊಣೆ- ಅಕ್ಷಯ ತೂಣೀರ.

೧. ನನೆಮೊ. ಗ॥ ೨. ತೊಡೆಯೆ. ಕ॥

ತೀವಿದ ತನ್ನ ಯೌವನದ ಸೊರ್ಕಿನೊಳುರ್ಕೆ ನಿತಂಬಸೂತ್ರಘಂ।
ಟಾವಿತತಸ್ವನಂ ಲಲಿತಯಾನವೊಡಂಬಡೆ ಲೀಲೆಯಿಂ ಬಯ॥
ಲ್ಪಾವರೆಗಾವಿನೊಳ್ಮ್ರಲೆಗಳಂ ಪರಿವೇಷ್ಟಿಸಿ ಕೊಂಡು ಬರ್ಪ ಲೀ।
ಲಾವತಿ ಪೋಲ್ತಳಂಗಜನ ಕಟ್ಟಿದ ಕೊಂಬಿನ ಪಟ್ಟದಾನೆಯಂ ॥೭೭

ಅಂತು ಕುಸುಮಾಪಚಯವಿನೋದಮಂ ತೀರ್ಚಿ ॥೭೮

ನೃಪಶುದ್ಧಾಂತಃಪುರಪ್ರೌಢೆಯರಲರ್ದೊಡವಿಂ ರಾಜಕಂದರ್ಪನಂ ದಿ। ಚ್ಚಿಪ ರಾಗೋದ್ರೇಕದೊಳ್ಸಂಪಗೆಯ ಪೊದಱ ಜೊಂಪಂಗಳಂ ಮಾಧವೀಮಂ ॥ ಡವದಿಂ ಶ್ರೀಖಂಡಷಂಡಂಗಳನೆಡೆಗಿಱಿದೇಳಾಲತಾಕುಂಜಡಿಂ ರಂ। ಜಿಪ ನಾನಾಸೈಕತಸ್ಥಾನಮನಸಮಶರಸ್ಥಾನಮಂ ಬಂದು ಪೊಕ್ಕರ್ ॥೭೯

ಅಂತು ಪೊಕ್ಕು ಮಧುಮಹೀಪಾಲನ ಸಾರಸರಸ್ವಮೆನಿಪ ಕೋರಕಕುಸುಮಕಿಸಲಯಂಗಳಂ ನೂಪುರದ ಕಾಲ ಕಡಗದುಡೆನೂಲ ಬಣ್ಣಸರದೆಕ್ಕಸರದ ತಿಸರದೈಸರದ ಸಂಕಲೆಯಂ ಕಿಂಡುಗುಕಣದ ಚಳಕಿಗೆಯ ಚೌಕಳಿಯ ಕರ್ಣೋತ್ತಂಸದ ಹಂಸತಿಳಕದ ಪೆಱೆಯ ಕುತ್ತುಂಗುಱಿಯ ಮತ್ತಂ ಪಲತೆಱದ ಪೆಸಱ ಪಚ್ಚವಂ ಸಮೆದು ॥೮೦

ಪೆಸಱಿಂದಾಕಾರದಿಂ ಬಣ್ಣದಿನಿವಱ ಸಮಂಬಂದೊಡಂ ದೇಸೆಯಿಂನಿ। ಪ್ಪೊಸಗಂಪಿಂ ಮೆಲ್ಪಿನಿಂ ಪೋಲ್ವವೆ ಮಣಿಮಯಭೂಷಾಕದಂಬಂಗಳೆಂದೇ ॥ ಱಿಸುವಂತೇಕಾಂತಕಾಂತಪ್ರಮದೆಯರಲರ್ಚ್ಚಂಗಳಂ ತೊಟ್ಟು ಲಾವ। ಣ್ಯಸುಧಾಂಭೋರಾಶಿವೇಳಾವನದೆಳಲತೆ ಕೈಗೆಯ್ದವೊಲ್ಕಣ್ಗೆವಂದರ್ ॥೮೧

೧. ಚವುಕುಳಿ, ಕ॥ ೨. ನಿವಸರವಂ. ಗ॥ ೩. ಬಂದಃದಂ. ಕ॥

ಕರಮೆಸೆಯೆ ತಮಗೆ ಪುಷ್ಪಾ |
ಭರಣಂ ಕಾಮುಕಮೃಗವ್ಯಕೇಳಿಗೆ ಕಾಮಂ ||
ಸರಲಂ ಪೇಱಿದ ಡೀಹದ |
ಹರಿಣಿಯನನುಕರಿಸಿ ತರುಣಿಯರ್ ಸೊಗಯಿಸುಗುಂ ||೮೨

ಅಂತು ಕೈಗೆಯ್ದು ||೮೩

ಸುಮನೋಭೂಷಣದಿಂ ಜಂ |
ಗಮಲತೆಗಳೆನಿಪ್ಪ ಲಲನೆಯರ್ ನೃಪನೇತ್ರ ||
ಭ್ರಮರಮನಾವನಲತೆಯಿಂ |
ತಮಗಭಿಮುಖಮಾಗೆ ಮಾಡಿದರ್ ತತ್ಕ್ಷಣದೊಳ್ ||೮೪

ಮನದೊಳ್ತೆಕ್ಕನೆ ತೀವಿದ |
ವನಕೇಳೀರಸಮೆ ಪೊಣ್ಮುವಂತಿರೆ ಮಧ್ಯಂ ||
ದಿನತಪನತಾಪದಿಂ ಬೆಮ |
ರ್ವನಿ ತಲೆದೋಱಿದುವು ತರುಣಿಯರ ತನುಲತೆಯೊಳ್ ||೮೫

ಅಂತು ಕುಸುಮಭೂಷಾವೇಷಮಂ ಘರ್ಮೋದಬಿಂದುಗಳಮರ್ಡಿಸೆ ||೮೬

ಜಳಜಾನನೆಯರ್ ನೀಳೋ |
ತ್ಪಳಾಕ್ಷಿಯರ್ ಚಕ್ರವಾಕಮಿಥುನಸ್ತನೆಯರ್ ||
ಕಳಹಂಸಾಲಸಗತಿಯರ್ |
ಜಳಕೇಳಿಯನಾಸೆವಟ್ಟರದು ತಕ್ಕುದೆ ದಲ್ ||೮೭

ಆಗಳವನಿಪತಿ ವಿಳಾಸಿನಿಯರ ಬಟಲ್ಕೆಯಂ ಜಳಕೇಳಿಯೊಳ್ಕಳೆಯಲೊಡರಿಸಿ ||೮೮

೧. ಕಾಮನ. ಕ|| ೨. ಕೇಳೀಕಾಮಂ. ಗ|| ೩. ನಲ್. ಕ||

ಕ್ಷಾರಮಿದೆಂದರ್ಣವಮಂ ।
ವಾರುಣದಿಕ್ಪಾಲನುಜಿದು ದೇವೀಸಹಿತಂ ॥
ಸ್ವೈರದೆ ಬರ್ಪಂತಿರಸಂ ।
ವಾರಸ್ತ್ರೀವೆರಸು ಪೊಗೆೊಳಕ್ಕೈಬ್ಬಂದಂ ॥೮೯

ಅಂತು ಬಂದು ॥೯೦

ಕಮಳಾಳಂಕರಣಂ ಕವಿಪ್ರಕರಕೇಳೀಮಂದಿರಂ ರಾಜಹಂ । ಸಮನೋಜಂ ಕುಮುದಾಶ್ರಯಂ ಪ್ರಕಟಿತಾಂತಸ್ಸಾರನೆನ್ನಂತೆ ವಿ ॥ ಶ್ವಮಹೀವಲ್ಲಭನೆಂದು ನಿನ್ನ ಬರವಂ ಪೇಳ್ದಪ್ಪುದಂಭೋಜಷಂ । ಡಮಿದೆಂಬಂತೆಸೆದತ್ತು ಸಾರಸವಿಹಂಗೋತ್ಪನ್ನಕೋಳಾಹಳಂ ॥೯೧

ಅವಯವಶೋಭೆಯಿಂ ದಿವಿಜಕಾಂತೆಯರಂ ಮಿಗುವೀವಿಲಾಸಿನೀ । ನಿವಹದ ವಕ್ತ್ರದೊಳ್ಸರಸಿಜಂ ಕುಚದೊಳ್ಪ್ರಣರ್ವಕ್ಕಿ ನೇತ್ರದೊ ಳ್ । ಕುವಳಯಮಲ್ತೆ ಮಚ್ಚರಿಸುತಿರ್ಪವವಂ ಪಡಿಯಿಟ್ಟು ನೋ ಳ್ಪನೆಂ । ಬವೊಲರಸಂ ವಿಲಾಸವತಿಯರ್ವೆರಸೆಯ್ದಿದನಬ್ಜಷಂಡಮಂ ॥

ಅಂತೆಯ್ದಿ ವರ್ಪುದುಂ ॥೯೨

ಓಲಾಡಿ ಸರೋವರದೊಳ್ ।
ಮೇಲಾದ ಸರೋಜರಜಮನೆಳಕುಳಗೊಂತ ॥
ಬಾಳಲಯಪವನಂ ಕಳೆದುದು ।
ಬಾಲೆಯರ ವಿಲಾಸವನವಿಹಾರಶ್ರಮಮಂ ॥೯೪

ತದನಂತರಂ ಸೊಗಯಿಸುವ ಕಮಲಷಂಡಮಂ ಮಂಡಲಿಕಮಕುಟ ಮಕರಿಕಾಪತ್ರಚಿತ್ರಿತಪಾದಪೀಠಂ ನಿಜಾಂತಃಪುರಪುರಂಧ್ರಿಯರ ಅ ಗಣ್ಯಲಾವಣ್ಯರಸವಿಸರದೊಳಂ ಕುಸುಮಾಭರಣಸಾರಭದೊಳಂ ಸು ತ್ತುಂಗುರುಳ ಸುತ್ತಲುಂ ತಳೆದ ಕತ್ತುರಿಯ ಪರಿಮಳದೊಳಂ

ತೆಕ್ಕನೆ ತೀವಿದಾಗಳ್ ॥೯೫

ದರದಳಿತಾಂಭೋಜದೆಸೆ।
ಳ್ವೊರೆಯೊಳ್ ಮೆಯ್ಗುಱಿದು ಮೊರೆವ ಪೆಣ್ದುಂಬಿಯ ನು॥
ಣ್ಬುರದಮವನೀವಲ್ಲಭನಂ।
ಪರಸುವ ಕಮಳನಿಯದನಿಯೊಲೇಂ ಸೊಗಯಿಸಿತೋ॥೯೬

ಆಗಳಾತಿಳಗೊಳದ ತಡಿಯೊಳ್ ಮಡಲ್ತ ಮಾಧವಿಯ ನನೆಗುಡಿಯ ಸೊವಡಿಂದೋಗಡಿಸಿ ಬಂದು ॥೯೭

ಬಿರಿಮುಗುಳೊಳ್ಮುಸುಂಬನಲಿದೊಯ್ಯನೆ ಕರ್ಣಿಕೆಯಿಂ ಕದರ್ಬಿಂಕಿ ಕೇ। ಸರಮನೆಱಂಕೆಯಿಂ ಕೆದಱ ಬಂಡನುರಂಬರಮುಂಡು ತೆಳ್ತಸೆ॥ ಳ್ವೊರೆಯೊಳಡಂಗಿ ನುಣ್ಬುರಜಿನಾಣ್ತಿಮಾಡಿದುದುನ್ಮದಾಳಿ ತಾ। ವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ॥೯೮

ತದನಂತರಂ॥೯೯

ಸೊಗಯಿಪ ಲತಾಂಗದಬಲೆಯ।
ರೊಗೆದ ಕುಚಂಗಳನೆ ಲತೆಯೊಳೆಱಗಿದ ಪ್ರೋಣರ್ವ॥
ಕ್ಕಿಗಳೆಂದೆ ಜಕ್ಕವಕ್ಕಿಗ।
ಳಗಲದೆ ಮೊಗಸಿದುವು ಜಾತಿಸಂಮೋಹನದಿಂ ॥೧೦೦
ಜಳದೇವತೆಯುರ್ ಧರಣೀ।
ತಳಪತಿಯಂ ನೋಡಲೆಂದು ನೆರೆದಂತೆ ಮನಂ॥

೯೮. ಎಕ್ಕಲಗಾಣಂ- ಪ್ರ. "ಮತ್ತಮಾನಾದಮೂರ್ತ್ತಿಯಾದ ವಿರೂಪಾಕ್ಷ ವೀಕ್ಷಣದಿಂ ವರಂಬಡೆದ ಎಕ್ಕಲನಮಳವ್ವಂದರೆಂಬ ಮೂಱು ತೆಱದ ಗಾಣನಾಯಕರೊಳಗೆ." ವಿರೂಪಾಕ್ಷಲಿಂಗಾಸ್ಥಾನವರ್ಣ್ಣನೆ.

೧. ದನಿಯೊಳೇಂ. ಗ॥

ಗೊಳಸಿದುವು ಸುತ್ತಲುಂ ಸುೞಿ।
ವೆಳವೆಂಡಿರ ನೆೞಲ ಬಳಗವುಬ್ಜಾಕರದೊಳ್ ॥೧೦೧
ಜಳರುಹಮುಕುಳದ ನೀಳೋ।
ತ್ಪಳಮುಕುಳವ ಗಿಳಯ ನವಿಲ ಕಳಹಂಸೆಯ ಕೋ॥
ಕಿಳದ ಪ್ರೋಣರ್ವ*ಕ್ಕಿಯುಂದದ।
ಜಳಯಂತ್ರಮನಾಯ್ದು ಪಿಡಿದುದಬಳಾನೀಕಂ ॥೧೦೨

ಆಗಳವನೀಶ್ವರಂ ಸಾರಘನಸಾರಕಾಶ್ಮೀರಕಸ್ತೂರಿಕಾಮಿಳಯುರುಹಸುರಭಿಸಲಿಲಂಗಳಂ ತೀವಿದ [೧]ಮಹಾರಜತದ್ರೋಣಿಗಳೆ ತನಗೆ ಕಂಠಾಭರಣಮಾದ ಕಮಲಷಂಡಮುಂ ಪೆಂಡವಾಸದೆಳವೆಂಡಿರ ಕೇಸಡಿಯ [೨]ಕೆಂಪಿಂ ಪಲ್ಲವಿತಮಾಪ್ಪುದುಂ ॥೧೦೩

ಭೂಪಾಳಂಗವಟಯಿಸಿದು।
ದಾಪ್ತಗೊಳದೊಳ್ವಿಚಿತ್ರಕಾಂಡ[೩]ಪಟೀಪ್ರ॥
ಕ್ಷೇಪಣವಿಳಾಸಮುಂ ತ।
ತ್ಸೋಪಾನೋತ್ತಾನಮಣಿಮಯೂಖವಿತಾನಂ ॥೧೦೪

ಅಂತು ಬಂದು ॥೧೦೪

ಜಳಕೇಳಿಯುಮಂ ಮೇಳದ।
ವಿಳಾಸಿನೀಜನವಿಳಾಸರಸವಿಸರಸುಧಾ॥
ಜಳಕೇಳಿಯುಮಂ ವಸುಧಾ।
ತಳಪತಿ ಮನಮೊಳಸೆ ಕಮಳವನಮಂ ಪೊಕ್ಕಂ ॥೧೦೫
ಜಲದೇವತೆಯರ್ಚೆಲ್ವಿಂ।
ತಲೆ ಕೆಳಗಾಗಿರ್ದರೆಂದು ಮಚ್ಚರದಿಂದಂ॥

೧. ರಜತಮಹಾರಜತ. ಕ॥ ೨. ಕೆಂಪಿನಿಂ. ಕ॥ ೩. ಪಟ. ಗ॥

ಕೆಲರಿಕ್ಕಿ ಮೆಟ್ಟಿದರ್ ನೃಪ।
ಲಲನೆಯುರೆನೆ ತಡಿಯೊಳೆಸೆದುವವರ ನೆಟಿಲ್ಗಳ್ ॥೧೦೬
ಚೆನ್ನೆಯಿದ್ದಲಿವರ ಕಣ್ಗಳ।
ಚೆನ್ನೆಯಿದ್ದಲಳುಂಬಮೆಂದು ಮುಗಿದುವು ನಾವಿ॥
[1]ರ್ದಿನ್ನೀವಮೆಂಬ ತೆಱದಿಂ।
ಚೆನ್ನೆಯುರುಲಿಪಿಂದಡಂಗಿದುವು ಶಫರಂಗಳ್ ॥೧೦೭

ಸರಸಿಜಪುಡವುಂ ನೃಪನ ಚಿತ್ತಮುನೊರ್ವೆಯೆ ಪೊಕ್ಕು ಪಲ್ಲವಾ। ಧರೆಯುರ ಪರ್ವಿ ಕೊರ್ವಿದ ಪಯೋಧರಭಾರಮುವ್ರಂಕೆ ತತ್ಸರೋ॥ ವರದೊಳಮಾಮಹೀಭುಜನ ರಾಗರಸಾಮೃತಪೂರ್ಣಹೃತ್ಸರೋ। ವರದೊಳಮೊಣ್ಮೆ ಪೊಣ್ಮಿದುವು ಭಂಗುರಲೋಲತರಂಗಮಾಲೆಗಳ್ ॥೧೦೮

ಆಸಮಯದೊಳೋರ್ವಳ್ ॥೧೦೯

ಕಡುನೀಱ ಜಂತ್ರದಂಚೆಯು।
ನಡಿಗಡಿಗಾನೀರೊಳರ್ದಿದಳ್ನಡೆವೆಡೆಯೊಳ್ ॥
ಗಡ ನಾ[2]ಣ್ಬದೆ ಪುರುಡಿಪುದೆ।
ನ್ನೊಡನೆಂದುಯ್ದಲ್ಲಿ ಪುಡುಕುನೀರದರ್ಪವವ್ರೊಲ್ ॥೧೧೦

ಮತ್ತಮಲ್ಲಿ ॥೧೧೧

ಮರಕತಜಳಯಂತ್ರದ ಗಿಳಿ।
ಶಿರೀಷಕೋಮಳೆಯ ಪಾಣಿಪಲ್ಲವದೊಳ್ಸ್ಸಂ॥
ದರವಾದುದವಳ ರಕ್ತಾ।
ಧರಮಂ ಪಟಫಳಮಿದೆಂದು ಪದೆದೆಳ[3]ಸುವವ್ರೊಲ್ ॥೧೧೨

---

೧. ರ್ದಿನ್ನೀವರಪೆಂಬ. ಕ॥ ಗ॥ ೨. ಗುಣ್ಮಿ. ಕ॥ ೩. ಸಿದವೊಲ್. ಗ॥

ಆಗಳ್ ॥೧೧೩

ನೆರೆದು ತಟಲ್ಲತಾವಳಿ ಕದಂಬವಿಕಾಸನವಾಗೆ ಸೂಸುವಂ।
ತಿರೆ ಜಲಮಂ ಘನೋಪಲಮನೇನೆಸೆದತ್ತೊ ಪೊದಳ್ಕೆವೆತ್ತ ಕ॥
ಪ್ಪುರವಳುಕಂ ಜಳಂಬೆರಸು ರಾಜಮನೋಜನ ಮೇಲೆ ಸೂಸೆ ಪೊ।
ನ್ನೊರೆಗೆ ಸವರ್ಣವಾದ ನಿಜವರ್ಣದ ವಾರವಧೂಕದಂಬಕಂ ॥೧೧೪

ವನಿತೆಯ ಕಣ್ಪೊಳಗುಂ ಚಂ।
ದನ ಜಲಮುಂ ಪೋಪುವೇಪು ನಿಟ್ಟಿಸಲರಿದೆಂ॥
ಬಿನಮುಡಿಟು ಪರ್ವಿ ಭೂಪಂ।
ಗೆನಸುಂ ಸ್ಪರ್ಶಾನುಮೇಯಮಾದುವು ಕೊಳದೊಳ್॥೧೧೫

ಕ್ಷಿತಿನಾಥು ಯಂತ್ರದಿಂಪೊತ್ತಿದ ಮಳಯಜಕಾಶ್ಮೀರಕಸ್ತೂರಿಕಾಮ। ಶ್ರಿತಘಾರಾಕಾಂಡವಾಕಾಂತೆಯರ ತರಳನೇತ್ರತ್ರಿಭಾಗಂಗಳೊಳ್ಸಂ॥ ಗತಿವೆತ್ತಾವೋದಮತ್ತಭ್ರಮರಕುಳಪತತ್ಕಾಂಚಿತಂ ಮನ್ಮಥಂ ಚ। ತ್ರಿತಶಾಖಾಲೇಖೆಯೊಳ್ಕೇಲಿಸದ ಸೆಲಗಿನಂಬಂ ಗೆಲಲ್ಪಾಲ್ದಾಗಳ್ ॥೧೧೬

ಸವತಿಯ ಮೇಲೆ ಪೇಕೋರ್ಟಬಿಯಂ ಧರಣೀಶ್ವರನೊತ್ತೆ ಚಂದನಾಂ। ಬುವನುರಕ್ತೆ ಕಂಡು ಪೆಱಳೊರ್ವಳಣಂ ಜಳಕೇಳಿಯೊಳ್ಪೊದ॥ ಬ್ದುವ್ರೊಲಿರೆ ಕಣ್ಣ ಕೆಂಪು ಬೆಮರ್ಗಳ್ ಜಳಯಂತ್ರಪಯೋಲವಂಗಳಂ। ತೆವ್ರೊಲಿರೆ ಕೋಪದೊಳ್ಮಡಗಿ ನೀರೊಳಗಿರ್ದುವಮದೇಂ ಬೆಮರ್ಗಳೋ!॥೧೧೭

ಮೃಗಮದವಾರಿಯಂ ಮುರಿದು ಸಿಂಪಿಸೆ ಭೂಪತಿ ಪಕ್ಕದಾಕೆ

೧. ವಶಿಕಂ. ಗ॥ ೨. ಸುವರ್ಣ. ಗ॥ ೩. ಕಣ್ಪೊಗಂ. ಗ॥
೪. ದಾಕೊಳದೊಳ್. ಕ॥ ೫. ಪಥಕಾಂಚಿತಂ. ಕ॥ ೬. ನಿಂಬಂ. ಗ॥

ಮೇ। ಗೊಗೆದ ಕುಚದ್ವಯಕ್ಕೆ ಮಱಿಮಾಡಿದ ಕೋಮಳಬಾಹುದಂಡದೊಳ್ ॥ ಸೊಗಯಿಸೆ ಧಾರೆ ನೀಳ್ದು ಮಣಿಕಂಕಣಝಂಕೃತವಿಂಪುವೆತ್ತು ಕೈ। ಮಿಗೆ ಜಳಕೇಳಿ ಕೇಳಿಸಿದುದಾಕೆಯ ೧ಮೆಯ್ವಳಿಯುಂ ವಿಪಂಚಿಯುಂ ॥೧೧೮

ಕತ್ತುರಿಯ ಜಳಮನವನಿಪ।
ನೊತ್ತುವುದುಂ ಹರ್ಷಗರ್ಭವಾಕಾಂತೆಗೆ ಮೆ॥
ಯ್ವೆತ್ತಾದ ಚಿಹ್ನದಂತಿರೆ।
ವೃತ್ತಸ್ತನಚೂಚುಕಂ ಕಱಂಗಿದುವಾಗಳ್ ॥೧೧೯

ಮೃಗಮದಜಳಮಂ ಸಿಂಪಿಸೆ।
ಜಗದಧಿಪತಿ ಧಾರೆ ಮುತ್ತಿದುವು ತರುಣಿಯ ಮೇ॥
ಗೊಗೆದ ಕಿಱುವೊಲೆಯನಬ್ಜದ।
ಮುಗುಳ್ಗೆ ಮದಭೃಂಗಮಾಲೆಗಳ್ ಮುತ್ತುವವೊಲ್ ॥೧೨೦

ಧರಣೀಶಂ ಸಿಂಪಿಸೆ ಘುಸೃ।
ಣರಸದಿನಂಗನೆಯ ಘನಕುಚಂಗಳ್ ರಜದಿಂ॥
ಪೊರೆದುವು ಸೆಂದುರದಿಂ ತಲೆ।
೨ವೊರೆದ ಮನೋಭವನ ಕುಂಭಿಕುಂಭಂಗಳವೊಲ್ ॥೧೨೧

ಸಮನಿಸಿದೀರ್ಷೆಯಿಂ ನಿಜಸಪತ್ನಿ ಕಡಂಗಿ ತುಳುಂಕೆ ಮೇಲೆ ಕುಂ। ಕುಮಜಳಮಂ ನೆರಂಬಡೆಮ ಬೆರ್ಚಿದವೊಲ್ಪೆಱತೊರ್ವಳಾಮಹೀ॥ ರಮಣನನಪ್ಪಿಕೊಂಡತನುರಾಗಸಮುತ್ಪುಳಕೋದ್ಗಮಂಗಳೊಳ್। ಹಿಮಜಳಸೇಕಶೀತಪುಳಕೋದ್ಗಮಮಂ ತಡವಾಗೆ ಮಾಡಿದಳ್ ॥

೧೨೧. ಪೊರೆದುವು=ಲೇಪಿತವಾದವು

೧. ಮೆಯ್ವಳಿಯುಂ. ಗ॥ ೨. ವರಿದ. ಕ॥ ಗ॥

ಸವತಿ ಜಳಯಂತ್ರದಿಂದೊ ।
ತ್ತುವ ಮಳಯಜಧಾರೆ ಚಂದ್ರಕಿರಣಂಗಳವೊಲ್ ॥
ಕವಿಯೆ ಮೊಗಂದಿರಿದುದು ನೃಪ ।
ಯುವತಿಯ ವದನಾರವಿಂದಮರವಿಂದದವೊಲ್ ॥೧೦೩

ಮನದೊಳೆ ಮಚ್ಚರಿಸುವ ಕಾ ।
ಮಿನಿ ಕುಂಕುಮಜಳಮನೊತ್ತೆ ಮತ್ತೊರ್ವಳ ಲೋ ॥
ಚನಕುಮುದಂ ಮುಗಿದುವು ಕುಮು ।
ದಿನಿಗಳ್ ಬಾಳಾತಪಕ್ಕೆ ಮೊಗವೀಯದವೊಲ್ ॥೧೦೪

ಇರೆ ಮುಡಿ ಬಿರ್ಚಿ ನಾನ್ದ[1]ಮರೆ ಪತ್ತಿದ ಪಟ್ಟೆ[2]ಯಿನುಟ್ಟುದಿಲ್ಲದಂ । ತಿರೆ ಕವುಳೋನ್ಮುಖಂ ಶಿಖಿಮುಖಾಸಿಯವೋಲಳವಾಲೆ ಮುಂದೆ ನೀ ॥ ಳ್ದರೆ ಧರಣೀಶ್ವರಂ ಕೆಲದೊಳುತ್ತರಸಾಧಕನಾದ ಕಾಮನಂ। ತಿರೆ ರತಿ ಖಡ್ಗಯೋಗಿನಿಯವೊಲ್ಜಳಕೇಳಯೊಳೊರ್ಬಳೊಪ್ಪಿದಳ್ ॥

ಲಲನಾಜನಮುಗ್ಗಲಿಸಿದ ।
ನಲವಿಂದಂ ಬಟಲೆ ತುಳ್ಕು[3]ನೀರಾಡುವುದುಂ ॥
ಸುಲಿಪಲ್ಲ ಪೊಳೆವು ತವೆ್ಮೊಳ್ ।
ನೆಲಸಿದ ಕೆಱಪಿಂ ಬೆಳರ್ತುವವರಧರಂಗಳ್ ॥೧೦೫

ಕಂತುದ್ವಿಪಮದಪಟ್ಟಕೆ ।
ಯಂತೆಸೆದು ಕಪೋಳಮೂಳದೊಳ್ನಮಿದ*ರ್ವಿಳಾ ॥
ಕಾಂತೆನ ಶುದ್ಧಾಂತಃಪುರ ।
ಕಾಂತಾಸಂತಾನಕುಟಿಳಕುಂತಳಜಾಳಂ ॥೧೦೬

೧. ನಾಂದ್ರ. ಕ॥ ೨. ಪಟ್ಟೆಯು. ಕ॥ ೩. ತುಳುಕು. ಗ॥

ಪ್ಪೊಸಮುಸೆಯು ಪೂವಿನಂಬಂ।
ಕುಸುಮಾಸ್ತ್ರಂ ಕುಂಕುಮಾಂಬುವಿಂ ಚರ್ಚಿಸಿದಂ ॥
ತೆಸೆದುವು ಚಳಲೋಚನೆಯರ।
ನಸುಗೆಂಪಂ ತಳೆದು ಪೊಳೆವ ಬಿಳಯುಲರ್ಗಣ್ಗಳ್ ॥೧೨೮

ಜಲಕೇಳಯೊಳ್ಕಟಲ್ದುಡಿ।
ಜಲರ್ಗಳ ಕಾಲ್ದುಡಿಗೆ ತೇಂಕೆ ಜಲದೇವಿಯರ್ಗಂ ॥
ಕೆಲೆದುಡುಗೆಯಾದುವೆನೆ ನೃಪ।
ಲಲನೆಯರ ಮಹಾನುಭಾವವೇನಚ್ಚರಿಯೋ! ॥೧೨೯

ಅಂತು ಜಳಕೇಳಯಂ ನಿರ್ವರ್ತಿಸಿ ಪಾಲ್ಗಡಲ ಮಡುವಿಂ ಪೊಱಮಡುವ ಪೂರ್ಣಚಂದ್ರನಂತೆ ಮನುಜೇಂದ್ರಚಂದ್ರಂ ಪೂಗೊಳದಿಂ ಪೊಱಮಡುವುದುಮೊಡನೊಡನೆ ಕೋಮಳಬಾಹುಲತೆಯಿಂ ನೆಲೆವೊಲೆಯುನಪ್ಪುಂಕಿ ದಕ್ಷಿಣಪಾಣಿಪಲ್ಲವದಿಂ ನಿಡುಮುಡಿಯುಂ ಪಿಡಿದು ನಾನ್ದ ನಿಱಿಯುಂ ಬಟಲ್ದುಡೆಯುಂ ತಡಂಗಾಲ್ವೊಯ್ಯೆ ಮೆಯ್ಯ ಬಣ್ಣಂ ಬಳ್ಳಿಮಿಂಚಂ ಮುಸೆದಂತೆ ತಳತ್ತಳಸೆ ॥೧೩೦

ಮೃಗಲೋಚನೆಯರ್ಸಲಿಲಾ।
ವಗಾಹಮಂ ಮಾಣ್ದು ಪೊಱಗೆ ನಿಲೆ ಕಟ್ಟಲೆ ತಾ ॥
ರಗೆಯನುಗುಳ್ದಪ್ಪವೆಂಬಿನ।
ಮುಗುತಂದುವು ಸಲಿಲಬಿಂದುಗಳ್ನೇರ್ಮುಡಿಯಿಂ ॥೧೩೧

ಅದಲ್ಲದೆಯುಮಾಕೆಗಳ ನಿತಂಬಸೂತ್ರದೊಳ್ಮುಕ್ತಾಫಲದಂತೆಯುಮಾಕೆಗಳ ಕುಚಕಳಶದೊಳ್ ಲಾವಣ್ಯರಸದಂತೆಯುಮಾಕೆಗಳ ಸೆಳ್ಳುಗುರ ಮೊನೆಯೊಳಂಶುಜಾಳದಂತೆಯುಮಾಕೆಗಳ ಪಾಳಯೊಳ್ ದರಹಾ

---

೧. ನಿಡಿ. ಗ॥

ಸಕಳಿಕೆಯಂತೆಯುಮಾಕೆಗಳ ನಯನೋತ್ಪಲಂಗಳೊಳ್ ಮಧುಬಿಂದು ವಿನಂತೆಯುಮಾಕೆಗಳ ಪೆಱನೊಸಲೊಳಮೃತಕಳಿಕೆಯಂತೆಯುಮಾಕೆ ಗಳಳಕವಲ್ಲರಿಗಳ ಕೊನೆಯೊಳ್ ನನೆಯಂತೆಯುಮೋರೊಂದು ಜಲ ಬಿಂದು ಬಿಂದುವಿಡುತಿರ್ಪ್ಪುದುಮಾಸಮಯದೊಳವನಿಪಾಲನಾಪೆಸಱ ಪೆಂಡವಾಸದ ವಿಲಾಸಿನೀಸಮುದಯಕ್ಕೆ ತಕ್ಕ ವಿಚಿತ್ರವಸ್ತ್ರಾಭರಣ ಗಂಧಾನುಲೇಪನಂಗಳಂ ದಯೆಗೆಯ್ದು ತಾನುಂ ಕೈಗೆಯ್ದು ॥೧೩೦

ಮಲಯಜಯಕ್ಷಕರ್ದಮಮೃಗೋದ್ಭವದಿವ್ಯವಿಲೇಪನಂ ಸಮು।
ಜ್ಜ್ವಲಮಣಿಭೂಷಣಂ ವಸನಮೆಂಬಿವಱಿಂ ಪೊಸದೇಸೆ ತೆನ್ನೊಳ ॥
ಗ್ಗಲಿಸೆ ಭುಜಂಗರಾಜಸುರರಾಜಮನೋಜವಿಲಾಸಮಿಂತು ಕ।
ಣ್ಗೊಳಿಸದೆನಲ್ ಜಗಜ್ಜನವಿಲೋಚನಮಂ ಸೆಱೆಗೆಯ್ದನಾನೃಪಂ ॥

ಅಲ್ಲಿಂ ಬೞಿಯಂ ॥೧೩೪

ಧವಳಚ್ಛತ್ರಂ ಚಲತ್ಕೇತನದೊಡನೊಡನಾಕಾಶಮಂ ಮುಚ್ಚೆ ವಂ ದಿ। ಸ್ತವನಂ ಗಂಭೀರಭೇರೀರವದೊಡನೊಡನಾಶಾಂತಮಂ ತೀವೆ ದೇ ವೇಂ ॥ ದ್ರವಿಲಾಸಂಬೆತ್ತು ಬಂಬಲ್ವರಿಯಿಸುತುಮುದಗ್ರೇಭಮಂ ಬಂ ದು ಪೊಕ್ಕಂ। ವಿವಿಧಪ್ರಾಸಾದಶೋಭಾವಹನಿಜಗೃಹಮಂ ರಾಜವಿದ್ಯಾ ವಿನೋದಂ ॥೧೩೫

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ವನಕೇಳೀಜಲಕೇಳೀವರ್ಣನಂ
ಷಷ್ಠಾಶ್ವಾಸಂ ಸಂಪೂರ್ಣಂ.

---

೧. ವಿರುತಿರ್ಪ್ಪ. ಗ॥ ೨. ತವೆ್ಮೊಳ. ಕ॥ ೩. ವನಜಲಕೇಳೀ. ಗ॥

## —ಸಪ್ತಮಾಶ್ವಾಸಂ—

ಶ್ರೀಗೆ ಕುಲಭವನಮೆನಿಪ ನೃ ।
ಪಾಗಾರಮನಂದು ಪೊಕ್ಕು ಮಜ್ಜನಜಿನಪೂ ।
ಜಾಗುರುವಂದನಭೋಜನ ।
ರಾಗೋತ್ಸವಚಿತ್ತನಿರ್ದನಭಿನವಪಂಪಂ ॥ ೧

ಅಂತಾದಿವಸವ್ಯಾಪಾರಮಂ ತೀರ್ಚಿ ಪರಿಮಿತಪರಿಜನಪರಿವೃತಂ ವಿದೂಷಕಸುಭಾಷಿತಮನಾಲಿಸುತ್ತಿರ್ಪುದುಂ ॥ ೨

ಗಿರಿಶಿಖರಂಗಳೊಳ್ ತರುಶಿಖಾಮುಖದೊಳ್ ಸುರಸದ್ಮಕೂಟದೊಳ್ ।
ಪರಿಕಲಿಸಿರ್ದವಸ್ತಮಯಕಾಲದೊಳೊಂದೆರಡಂಶು ಬದ್ಧಮ ॥
ತ್ಸರದೊಳೆ ಮೇಲೆ ಬರ್ಪ ತಮದೊಡ್ಡನಿತೆಂಬುದನುಚ್ಚದೇಶಮಂ ।
ಪರಿದಡರ್ದೇ*ಱಿ ನೋೞ್ಪ ದಿವಸೇಂದ್ರನ ಗುಪ್ತಚರಪ್ರಕಾರದಿಂ ॥ ೩

ಆಪ್ರಸ್ತಾವದೊಳ್ ಪೆರ್ಚಿಟ್ಟದಿಟ್ಟೆಡೆಯ ಕರ್ದಾರಿಯ ದೂಳಸೆಜ್ಜರಕ್ಕೆ ಪಾದದಂಡದಿಂ ಮುಗುೞ್ವ ಕಾಡಾನೆಯ ಕಡುಪಿನ ಮದವಟ್ಟೆಯುಂ ಮೆಲೆಕ್ಕೊಂಡು ಕಾೞ್ವಟ್ಟೆಯ ಬೆಂಚೆರವಟ್ಟೆಗೆ ತಲೆಯಿಟ್ಟು ಬರ್ಪ ಕಾಡೆಮ್ಮೆಯ ಪೆರ್ಮೊಲೆಯೊಳೆಚ್ಚಪಾಯ್ವ ಪಾಲ ಪಿರಿಯ ಬಲ್ಸರಿಯೊಳೋಲಾಡಿಯುಂ ತಲೆವ್ರೊಲದ ನಾನಲ್ವೞ್ವದ ದರಿಯ ಕುತ್ತುಱಿಂಗೆ ಕೊಣಕಿಡುವ ಪುಲ್ಲೆಯೆರಲೆಯ ಜವಕ್ಕೆ ಪಕ್ಕುಗೊಟ್ಟುಮಾರವೆಯ ಪೆರ್ಮರದ ನಟ್ಟೆಗೊಂಬಿನಿರ್ದೆಡೆಗಂ ಮೊಗಸುವ ಪಲತೆಱದ ಪಕ್ಕಿಗಳ ಕೋಡುಗಱಿಯ ಕಿಱುಗಾಳಿಯುಂ ನಿಱಿಪ್ರಗೆಯುದ್ದ ದೇವಕುಲದಾಜಲೆಯ ನೆಲೆಯ ಕೋಣ ತಾಣಕ್ಕೆ ಪಾಱುವ ಪಾರಿವಂಗಳಂ ಪಾಱ

ಪೞಿಮುಕ್ಕೆಯುಂ ಪೊಂದಾವರೆಯ ರಜದಿಂ ಪುದಿದ ಪೂಗೊಳದ ತಡಿ ಪಿಡಿದು ಸುೞಿಯುತ್ತಿರ್ಪಂಚೆಯ ತುಪ್ಪುೞಂಚೆಯುಂ ಪಳಂಚಲಿದುಂ ಜಕ್ಕವಕ್ಕಿಯ ಕರೆಗಣ್ಮುವ ಕಣ್ಣನೀರ ಕಡಲಂ ಕಲಂಕಿಯುಂ ಸೂೞ್ಗೇಱಿಯ ಮುಗಿಲ ಜಗಲಿಯ ಮತ್ತವಾರಣದ ಮುಂದೆ ನಿಂದು ಬೀಯದ ಚಾಗದ ಪೆರ್ಮೆಯುಂ ಮೆಱೆವ ಬೊಜಂಗರಿಕ್ಕಿದೆಕ್ಕಸರದ [1]ಕಸೆಯುಮಂ ಸೆಳೆದುಂ ಬಳ್ಳಿವಾಡದ ಪೆಱಗಣ ಬಳ್ಳವಂದರಡಿಯಣ ಕುಸುಮದೆಸಱ ಪಸೆಯೊಳಿರ್ದ ರಸಗೇಯಮನಾಲಿಸುವ ಸೊಬಗೆಯರ ಕತ್ತುರಿಯ ಸೊವಡಂ ಸೂಱೆಗೊಂಡುಂ ಮಾಲೆಗಾರ್ತಿಯರ ಕೈಯ ಪೂಮಾಲೆಯ ಕಂಪಂ ಕವರ್ತೆಗೊಂಡುಂ ಘಟ್ಟವಳ್ತಿಯರ ಮುಖಕಮಳಪರಿಮಳಮುಂ ಪಱಿಮುತ್ತುಗೊಂಡಪರಸಾಂಧ್ಯಗಂಧವಹನೆಳಸೆ ॥ ೪

ನೋಡಿ ಕನಲ್ದೊನಲ್ದು [2]ಪಡುನೇಸಱನುಣ್ಮುವ ಕಣ್ಣ[3] ನೀರೊ
ಳೋ। ಲಾಡುವ ಜಕ್ಕವಕ್ಕಿ ಬಗೆಗೆಟ್ಟು ವಿಯೋಗವಿಷಾದವೇಗದಿಂ ॥
ಪಾಡಱಪೆಂತೊ ಪೋ[4]ಱದಪ್ರಮಾನಱಿದೆಂ ನಿಡುಸುಯ್ಯ ಗಾಳಿ ಕೊಂ।
ಡೋಡಿದುದೊಂದನೊರ್ದೆಸೆಗದಲ್ಲದೊಡೇಂ ಗಳ! ಪಾಱಲಾರ್ಪವೇ! ॥

ಇನಕಿರಣಂಗಳ್ ಕೀಲಿವ।
ಅನು[5]ಬಂಧಕ್ಕೆನೆ ಮನೋರಥಂ[6] ಕಱಕಱಮ ॥
ಪ್ಪಿನೆಗಂ ರಥಾಂಗಸಂಗತಿ।
[7]ದಿನನಾಥನ ಕಿರಣದೊಡನೆ ತೊಲಗಿದುವಾಗಳ್ ॥ ೫

೪. ಬಳ್ಳವಂದರ್=ಬಳ್ಳ+ವಂದರ್ (ಚಪ್ಪರ)

೧. ಕಸುಮಮಂ. ಕ॥ಗ॥ ೨. ಪಡಿ. ಕ॥ಗ॥ ೩. ಯೋಗಟಂ. ಕ॥
೪. ನೊಂಪಸೆ. ಕ॥ಗ॥ ೫. ಬಧ್ದ. ಕ॥ಗ॥ ೬. ಗಳ. ಕ॥ಗ॥ ೭. ಗಿನ. ಕ॥ಗ॥

ಕ್ಷಣಿಕಂ ಪೋಗೆರಡಿಲ್ಲದೆನ್ನೊಲವಿನೊಳ್ ತತ್ಕೂರ್ಮೆಗೆಟ್ಟೆನ್ನ ಮೇ।ಗಣ ಕೈಯುಂ ಕಳೆದಂ ದಿನೇಶನವರಾಶಾಸಕ್ತನೆಂದಂದು ಬಂ॥ ಬಳಬಾಡಿರ್ದ ಜಿನುಂಗುವಂತೆ ನಿಜಗಂಧಾಸಕ್ತಭೃಂಗೀಕಳ। ಕ್ವಣಿತಂ ಕೈಮಿಗೆ ಸಂಜೆಯೊಳ್ಸರಸಿಜಂ ತಾಳ್ದತ್ತು ಸಂಕೋಚಮಂ ॥೭

ಮಿತ್ರವಿಯೋಗದೊಳೀಶತ।
ಪತ್ರಂ ಕಡುಗಂದಿ ಕುಂದುಗೊಂಡಿರ್ದುದದೇಂ ॥
ಚಿತ್ರಮೆ ದೇಹಿಗೆ ಮಾಱ್ಕಂ।
ಮಿತ್ರವಿಯೋಗಂ ವಿಶೇಷಮಪ್ಪುದವಟಲಂ ॥೮

ಒಳಗಿರ್ದ ಮೊರೆಯೆ ಮಧುಕರ।
ಕಳಭಂ ನಿಜಗಂಧಲೋಭದಿಂ ಸಂಧ್ಯಾಕು ॥
ಟ್ಮಳಿತಸರೋಜಂ ತಳೆದುದು।
ಜಳದೇವತೆಯುರ ಶಕುಂತಿಕಾವಿಳಸನಮಂ ॥೯

೭. ತತ್ಕೂರ್ಮೆ— ಪ್ರ. "ಕಲಿಯುಂ ಚಾಗಿಯುಮಿನ್ನದಾರ್ಪುನುಕುಲರ್ಮ್ಮನ್ನಾದರೆಂಬನ್ನೆಗಂ । ನೆಲನುಂ ನೇಸಱುಮುಳ್ಳಿನಂ ನಿಲಿಸಿದಂ ತತ್ಕೂರ್ಮೆಯುಂ ಪೆರ್ಮೆಯುಂ ॥ ಕುಲವಿಸ್ಫಾರಕನೇಕಕುಂಡಲಂ ..." ಪಂ. ರಾ. ಆ. ೬. ೧೭೧

"ನಿನಗೆಜನದಿಂದ್ರನಂ ಗೆ। ಲ್ದು ನಿನ್ನ ಭುಜಬಲದ ಮಹಿಮೆಯುಂ ಬೀಱಿದೆ ಜೀ ॥ ಯೆನಿಸಾತನ ಸೆಱೆಯುಂ ಬಿ। ಟ್ಟು ನಿನ್ನ ತತ್ಕೂರ್ಮೆಬಣ್ಣಿಸಲ್ಬಾರದೆನಲ್ ॥"
ಪಂ. ರಾ. ಆ. ೧೦. ೭೧೦

"ಕ್ರಮಮಂ ವಿಕ್ರಮದಿಂದೆ ತಾಳ್ದು ನಮಗಂ ಗಾಂಗೇಯನಿರ್ದನ್ನ ನೋ। ಡೆ ಮರುಳ್ ಶಾಂತನು ತನ್ನದೊಂದು ಸವಿಗಂ ಸೋಲಕ್ಕಮಿತ್ತನ್ನೆಗ ॥ ಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂದೊಂದಪಖ್ಯಾತಿ ಲೋ। ಕಮನಾವರ್ಜಿಸೆ ಬರ್ದೊಡೆನ್ನ ಕುಲಮುಂ ತತ್ಕೂರ್ಮೆಯುಂ ಮಾಸದೇ ॥"
ಪಂಪಭಾರತ. ಆ. ೧. ೬೯

೧. ಕುಂದಿಕೊಂ. ಕ॥ಗ॥

ಜಳರುಹದ ಲಕ್ಷ್ಮಿ ತೊಟ್ಟನೆ ।
ತಳರಲೊಡಂ ವಿಟಪಿನದ್ಧರುಚಿ ಬೇಱೊಂದ ॥
ರ್ಕೆಳಸುವೊಲೀಕೌಟಿಲ್ಯಮ ।
ನಳಿವೆಣ್ಣಳಿವೆಣ್ಣ ಕೈಯೊಳೋದಿದಳಕ್ಕುಂ ॥೧೦

ವರುಣಂ ಮಿತ್ರಂಗಿಡಿರೆ ।
ದುರ್ ರಾಗದಿಂ ಬೇಗಮರ್ಘ್ಯಮೆತ್ತಿದನರ್ಘಾ ॥
ಭರಣಮಣಿಕಿರಣಮೆಂಬಂ ।
ತಿರೆ ಪಸರಿಸಿ ಪರ್ಬಿದತ್ತು ಸಂಧ್ಯಾರಾಗಂ ॥೧೧

ಸ್ಫುರಯಿಸಿ ತೀವ್ರವೃತ್ತಿಯನಡಂಗಿಸಿ ಸತ್ಪಥವೃತ್ತಿಯೊಳ್ವಯಃ ।
ಪರಿಣತಿವೆತ್ತುಮೇನುದಯಕಾಲದ ರಾಗಮನಸ್ತಕಾಲದೊಳ್ ॥
ಪರಿಹರಿಸಲ್ಕಣಂ ನೆಱೆದನಿಲ್ಲ ದಿನಾಧಿಪನಂತೆ ದಲ್ ವಯಃ ।
ಪರಿಣತನಾದೊಡಂ ಬಿಸುಡಲಾರ್ಪನೆ ರಾಗಿ ನಿಸರ್ಗಭಾವಮಂ ॥೧೨

ಇನನತಿದೂರಮೆನಲ್ಕೆ ।
ಲ್ಲನೆ ಭೃಂಗಂ ಬಂದು ಸೋಂಕೆ ಮೊಗಮೀಯದೆ ಪ ॥
ದ್ಮಿನಿ ಮುಗಿದಳ್ ಲಕ್ಷ್ಮೀಭಾ ।
ಜನೆ ಗುಣವತಿ ಮಳಿನವೃತ್ತಿಯಂ ಸೈರಿಪಳೇ ? ॥ ೧೩

ತವೆ ಕುಡಿಯಲ್ಕೆಱೆಯದು ಬಾ ।
ಡವಾಗ್ನಿ ಪೋಗೆಂದು ಕುಂಭಸಂಭವಕೋಪಾ ॥

---

೧೦. ವಿಟ ಪಿನದ್ಧರುಚಿಯಾದ, ಅಳಿವೆಣ್ ( ಕ್ಷುದ್ರಸ್ತ್ರೀ ), ಬೇಱೊಂದರ್ಕೆಳಸುವ, ಈಕೌಟಿಲ್ಯಮಂ, ವಿಟಪಿ ನದ್ಧರುಚಿಯಾದ, ಅಳಿವೆಣ್ಣ (ಪೆಣ್ದುಂಬಿಯ), ಕೈಯೊಳೋದಿದಳಕ್ಕುಂ. ಎಂದು ಅನ್ವಯ.

ಗ್ನಿ ವಿಯತ್ತಳದಿಂ ಕಿಡಿನಿಡು ।
ತುವಿೞಿವವೊಲ್ತವನನಪರಜಳನಿಧಿಗಿೞಿದಂ ॥೧೪

ಇನನಂ ಕಾಣದೆ ಸಂಚಳ ।
ತನುವವರಾಶಾಪ್ರಪಂಚೆ[1]ವಿರಹಿತೆ ಸಂಧ್ಯಾಂ ॥
ಗನೆ ನೋಡೆ ನೋಡೆ ಕರಗಿದ ।
ಳನುರಕ್ತೆ ಪ್ರಿಯನ ವಿರಹವಂ ಸೈರಿಪಳೇ ? ॥ ೧೫

ಅಪ್ರಸ್ತಾವದೊಳ್ ॥೧೬

ದಿನನಾಥನ ಸುಯ್ಯುಂಪಟು।
ಹನಿನಾದಂ ಸಾಂಧ್ಯಮೇಘವಿರುತಿ ತಮೋರಾ ॥
[2]ಜನ ಜಯದುಂದುಭಿನಿಸ್ವನ ।
ಮೆನಿಸಿದುದು ಚತುಃಪ್ರಹಾರಭೇರೀನಿನದಂ ॥೧೭

ದಿನಕರನೀಬಹಿಸ್ತಮಕೆ ಬೆರ್ಚಿ ಸಮುದ್ರಮನೋಡಿ ಪೊಕ್ಕನಾ ।
ತನ ಬೆಳಗೇವುದೆಂದು ಜಿನಪಾದಪಯೋಜನಖಾಂಶುಮಂಡಳಂ ॥
ಜನದ ಮನಸ್ತಮೋಬಲಮನಂಜಿಸೆ ಪೊಣ್ಮುವ ತಜ್ಜಯಾನಕ।
ಧ್ವನಿಯೆನೆ [3]ಪೊಣ್ಮಿದತ್ತು ಜಿನಮಂದಿರಸಾಂಧ್ಯಘನಾನಕಸ್ವನಂ ॥೧೮

ಪ್ರಿಯೆ ತನಗೆಂಬಿದಂ ಬಗೆಯದೆನ್ನನವಂ ಪೆಱಗಿಕ್ಕಿ ಪೋಗಿ ಸಂ ।
ಜೆಯೊಳನುರಕ್ತನಾಗಿ ನೆರೆದಿರ್ದಪನಾತನನೆಂತು ಕಾಣ್ಬುದಾಂ ॥
ನಯನ[4]ಪಥಕ್ಕೆ ತರ್ಪೆನೆನುತುಂ ಹರಿದಿಗ್ವಧುವಿಂತುಗೆಯ್ದಳಾ ।
ಕೆಯ ಕಚಭಾರದಂತಿಳೆಗೆ ತಟ್ಟದಪೂರ್ವದಿಗಂತಮಂ ತಮಂ ॥೧೯

೧ ರಹಿತೆಯುಂ. ಕ॥ ೨. ವಿನ. ಕ॥ ೩.... ರ್ಣಿಸಿತ್ತು. ಕ॥
೪. ಕಚಭಾರಮಿಂತಿ. ಕ॥ಗ॥

ಮಸುಳೆ ದಿನಕರನ ತೇಜಃ ।
ಪ್ರಸರಂ ನಭಮೆಣ್ಣೊದೊಡೆದ ಕನ್ನಡಿಯೊಲ್ ತಾಂ ॥
ಮಸಮಸನಾಗಿರ್ದುದು ದೂ ।
ಳಿಸಂಜೆಯೊಳ್ ದೈನ್ಯಮೇನೊ ನಿಸ್ತೇಜದವೊಲ್ ॥೨೦

ಜಗುನೆಯು ಕರ್ದುಡು ನೆಲನಂ ।
ದಿಗಿಭದ ಮದವಟ್ಟೆ ದೆಸೆಗಳಂ ರಾಹುಶಿರಂ ॥
ಗಗನಮನೆಡೆಗೊಂಡತ್ತೆನೆ ।
ಜಗಮಂ ಪರ್ವಿದುದು ಬಹಳತಮಸಂತಮಸಂ ॥೨೧

ಬಿದಿ ಹರಿನೀಳದೊಳ್ಕಡೆದಜಾಂಡಮನಂಜನದೊಳ್ಪೊರಳ್ಚಿದಂ ।
ತೊದವಿರೆ ಮರ್ಬು ಸಂದೆಗದೆ ತಮ್ಮೊಡಲಂ ಬಿಡದಂದು ನೋೞ್ಪರೆಂ ॥
ಬುದನೆನೆ ನೋಡಿ ನಿಟ್ಟಿಸುವರಾರಿದು ಪರ್ವತಮೆಂಬಿದುರ್ವಿಯೆಂ ।
ಬಿದು ದೆಸೆಯೆಂಬಿದಭ್ರಪಥಮೆಂಬ ಚರಾಚರವಸ್ತುಭೇದಮಂ ॥೨೨

ಘೋರಾಂಧಕಾರಮತಿದು ।
ರ್ವಾರಂ ನೆಲೆವೆರ್ಚೆ ಬಯಲೊಳಂ ಜಾರಾಸಂ ॥
ಚಾರಕ್ಕೆಡೆಗೊಟ್ಟತ್ತವ ।
ಕಾರಿಯು ಸಿರಿ ಖಳರನಲ್ಲದೇ೧ ತಣಿಪುಗುಮೇ ॥೨೩

ಅಂಬಿರಿವಿಡುವ ತಮೋದಾ ।
ನಾಂಬುವಿನೊಳ್ಮುೞುಗಿ ನಿಂದ ನಭಮೆಂಬ ಮದ ॥
ಸ್ತಂಬೇರಮನಾಗಳ್ ಚಿ ।
ಬ್ಬಂಬೊಯ್ದವೊಲಡಱಿ ತುೞುಗಿದುವು ತಾರಗೆಗಳ್ ॥೨೪

೧. ಕನ್ನಡಿಯೊಲ್ ಮಸ॥ಮಸನಾಗಿರ್ದುದದೇಂ ದೂ। ಕ॥ ಗ॥

ಆಸಮಯದೊಳ್ ಪರಿಚಿತಸಂಧ್ಯಾಸಮಯಮಂಡಳಿಕಮಣಿಪ್ರದೀಪಂ ನೀರಾಜನದೀಪಕಳಿಕಾಪ್ರದೀಪಮಣಿಕಿರೀಟಂ ಮಂಡಪದ ಮುಂದಣೇಂದ್ರನೀಲಮಣಿಕುಟ್ಟಿಮದ ನಡುವಣ ಮಣಿಮಯಾಸನಮನಳಂಕರಿಸಿ ॥೨೫

ಉರಗಫಣಾಮಣಿಯ ಬೆಳಗಿಂ ।
ದುರಗೇಂದ್ರಂ ಜ್ಯೋತಿರಂಗವೃಕ್ಷದ ಬೆಳಗಿಂ ॥
ಸುರರಾಜಂ ರಂಜಿಸುವಂ ।
ತಿರೆ ಕೈದೀವಿಗೆಯ ಬೆಳಗಿನೊಳ್ಕಣ್ಗೆಸೆದಂ ॥೨೬

ಪೆಱದೆಗೆವ ತಮಂ ತೆಱ್ತ್ತಮೆ ।
ದುಱುಗಲೆನಲ್ಪೂರ್ವದಿಗ್ವಧೂವದನಂ ಕ ॥
ಣ್ದೆಱೆವವೊಲದೇಂ ಬೆಳರ್ತುದೊ ।
ಕಿಱಿದೆಡೆ ತುಹಿನಾಂಶುಬಿಂಬಮುದಯಿಪ ಪದದೊಳ್ ॥೨೭

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪ್ರೊ । ರ್ವದಿಶಾವಲ್ಲೀಫಳಂ ತಾನೆನೆ ತರತರದಿಂದೇೞ್ಗೆ ಕಣ್ಗೆಡ್ಡಮಪ್ಪಂ ॥ ತುದಯಂಗೆಯ್ದತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ । ಮದಲೀಲಾಲಂಬಮುಜ್ಜೃಂಭಿತಕುಮುದಕದಂಬಂ ಸುಧಾಸೂತಿಬಿಂಬಂ ॥೨೮

ದಾಂಗುಡಿವಿಟ್ಟು ದಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿ ಕಾ ।
ಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ ॥
ಡಿಂಗಡಲೆಂಬ ಸೆಜ್ಜೆವನೆಯೊಳ್ತರೆದೊಟ್ಟಿಲ ಮೇಲೆ ಕೆಂಬರ ।
ಲ್ದಿಂಗಣಿಗಟ್ಟಿದಂತುದಯಶೈಲಶಿಖಂಡದೊಳಿಂದುಮಂಡಲಂ ॥೨೯

೨೯. ತಿಂಗಣಿ, ತಿಂಗಣಿಗೆ— ತೊಟ್ಟಿಲ ಮೇಲೆ ಕಟ್ಟುವ ಕೆಂಪಿನ ಚಂಡು.

೧. ಪೆರೆತೆಗೆವ. ಕ॥ ೨. ಮಾಹೇಂದ್ರಂ. ಕ॥

ನಿಮಿರ್ದು*ವು ಸಂಧ್ಯಾರುಣಕಿರ।
ಣಮಾಲೆಗಳ್ ಗಗನವಾರ್ಧಿವೇಲಾವನದಿ॥
ದ್ರುಮದೆ ಕದಳೀಪ್ರರೋಹಂ।
ನಿಮಿರ್ದ*ವುವೆಂಬಂತೆ ಚಂದ್ರಬಿಂಬದಿನಾಗಳ್॥೩೦

ಅದನಂತರಂ॥೩೧

ನವಸಂಧ್ಯಾರಾಗಂ ಪಿಂ।
ಗುವುದುಂ ಮದನಂಗೆ ವಜ್ರಖೇಟಕವುಂ ಕೆಂ॥
ಗವಸಣಿಗೆಗಳೆದು ರತಿ ನೀ।
ಡುವಂತೆ ತಳತಳಸಿದತ್ತು ಹಿಮಕರಬಿಂಬಂ॥೩೨

ಮತ್ತಂ॥೩೩

ಶೃಂಗಾರಾರ್ಣವಫೇನಪಿಂಡಮತನುಶ್ರೀಸಿಂಹಪೀಠಂ ನಭೋ।
ಮಾಂಗಲ್ಯಾಯತನಪ್ರಕಾಶಕಳಶಂ ಸಂಭೋಗಲೀಲಾನಟೀ॥
ರಂಗಂ ಲೋಚನಪುತ್ರಿಕಾಕೃತಕಶೈಲಂ ಕಂತುದೇವೇಂದ್ರಮಾ।
ತಂಗಂ ಸುಂದರಮಾದುದಭ್ಯುದಯದೊಳ್ಬಿಂಬಂ ಸುಧಾಸೂತಿಯಾ॥

ಆಸಮಯದೊಳ್॥೩೪

ಕಾಮನ ದೀವದ ಹರಿಣಂ।
ಕಾಮೋರಗನಿರ್ಪ ಪುತ್ತು ಮೊಲಗಟ್ಟಿಲೆಯುಂ॥
ಕಾಮಿಗೆ ಪುಟ್ಟಿಸುವ ಮೊಲಂ।
ಕಾಮಗ್ರಹದಾಲಮೆನಿಸಿತಿಂದುಕಳಂಕಂ॥೩೫

ಮೊದಲೊಳ್ಸಕ್ರತೆ ನಿಜಮ।
ಭ್ಯುದಯದೊಳತಿರಾಗಿ ಮತ್ತೆ ಮದನೋನ್ಮಾದಾ॥

೩೦. ಕದಳೀಪ್ರರೋಹಂ- ಮೊಗರಿನ ಮೊಳಕೆ. ೩೨. ಖೇಟಕ- ಗುರಾಣಿ.

ಸ್ಪದವೆಂದೊಡಂತರಂಗದಿ ।
ನದೆಂತೊ ದೋಷಾಕರಂಗೆ ಕಱೆ ಪಿಂಗುಗುಮೇ ? ॥ ೩೭

ಅಂತು ಸುಧಾಸೂತಿಮಂಡಳಮತಿಪ್ರೌಢಮಾಗೆ ॥ ೩೮

ಪುಗಿಸಿದುವಟ್ಟೆ ಪರ್ವತಗುಹೋದರಮಂ ಕೆಲವಂ ಗವಾಕ್ಷದಿಂ । ಡುಗಿದುವು ದೇವಸದ್ಮದೊಳಡಂಗಿದುವಂ ಬಯಲಿಂಗೆ ಬಿರ್ದುವಂ ॥ ತಗುಳ್ದಿಱಿಯುಟ್ಟೆ* ನುಂಗಿದುವು ಪೆರ್ಮರನಂ ಸೆಱೆಗೆಯ್ದು ಪರ್ಣಸಂ। ಧಿಗಳೆಡೆಯಿಂದಮಿಟ್ಟೊಱಸಿ ಕೊಂದುವು ಕೞ್ತಲೆಯಂ ಹಿಮಾಂಶುಗಳ್ ॥ ೩೯

ನಳಿನೀಸಂಮೋಹನಾಸ್ತ್ರಂ ಕುಮುದನಯನಕರ್ಪೂರಕಾಂಡಂ ಚಕೋರೀ । ತಿಳಕಂ ಶೃಂಗಾರಸಿಂಧುಪ್ಲವಬಿಸಲತೆ ತಾರಾಪುರಂಧ್ರೀಕಪೋಳ ॥ ಸ್ಥಳಪತ್ರಂ ಚಂದ್ರಕಾಂತೋಪಳಸಲಿಲಸಿರಾಮೋಕ್ಷಶಸ್ತ್ರಂ ಮನೋಜಾ । ನಳಜಿಹ್ವಾಕ್ಷೀರಧಾರಾಹೃತಿ ಪಸರಿಸಿ ಪರ್ಬಿತ್ತು ಚಂದ್ರಾಂಶುಜಾಳಂ ॥ ೪೦

ನಲಿದು ವಸಂತದೊಳೈಂದ್ರೀ ।
ಲಲನೆಯು ಸಿಂಪಿಸುವ ಕಾಂತಶಶಿಕಾಂತಶಿಳಾ ॥
ಜಲಯಂತ್ರಮುಕ್ತಚಂದನ ।
ಜಲಧಾರೆಗಳೆನಿಸಿ *ನಿಮಿರ್ದುವಮೃತಕರಂಗಳ್ ॥ ೪೧

ಇಂಗಡಲೆ ಕಡಲ್ಗಳ್ ಸಾ ।
ಧಂಗಳೆ ಸದನಂಗಳಿಂದುಕಾಂತವೆ ಕಲ್ಗಳ್ ॥
ಗಂಗೆಯೆ ತೊಱೆಗಳೆನಲ್ ಬೆ ।
ಳೈಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ ॥ ೪೨

ಒಗುಮಿಗೆ ಬೆಳಗಿದುದು ಮಿಯೋ ।
ಗಿಗಳ ಮೊಗಂ ಬೆಳ್ಪನಾಗೆ ವಿರಹಾಗ್ನಿಯ ಬೆ ।
ಳ್ಪೊಗೆ ಕಮಳದ ಪಗೆ ಕುಮುದದ ।
ನಗೆ ತಾಂ ಯೌವನದ ಬೇಳದಗೆ ಬೆಳ್ದಿಂಗಳ್ ॥೪೩

ಕರ್ಬಿಲ್ಲದ ಕಾಡಿಗೆ ಕಂ ।
ದರ್ಪನ ಜಸಮಿರುಳ ತಣ್ಬಿಸಿಲ್ಬೆಳತಿಗೆ ಮಿಂ ॥
ಚೆರ್ಬಿಲ್ಲದಿಂಗಡಲ್ವಿಧು ।
ಸರ್ಪನ ಪೆರೆ ಜಲಕನಾಯ್ತು ಪೊಸವೆಳ್ದಿಂಗಳ್ ॥೪೪

ಮದನಕ್ಷೇತ್ರಮಕೃಷ್ಟಪಚ್ಯಮಿದು ಕಣ್ಬೇಟಕ್ಕನಾಯಾಸಲ ।
ಬ್ಧ ದಲಂಗೋದ್ಭವಖಡ್ಗಸಿದ್ಧಿಗಿದು ಕಾಮೋನ್ಮಾದಪಾನಪ್ರಪಾ ॥
ಸದನಂ ಕಾಮಿಜನಕ್ಕಿದಂಗಭವಸೌಖ್ಯೋತ್ಪಾದವಿನ್ಯಾದಮಿಂ ।
ತಿದು ಕಾಂತಾಕುಚತಳ್ಪಶಾಯಿಗೆನೆ ಚೆಲ್ವಾದತ್ತು ಚಂದ್ರಾತಪಂ ॥

(ಮಾಲಿನೀವೃತ್ತಂ)

ಅತನು ಸತನುವಾದಂ ಕಾಮಸಾಮ್ರಾಜ್ಯಲಕ್ಷ್ಮೀ ।
ಲತೆಯ ಲಲಿತಲಾಸ್ಯಪ್ರೌಢಿ ಚೆಲ್ವಾದುದೀಗಳ್ ॥

---

೪೪. ಬೆಳತಿಗೆ ಧಾವಳ್ಯ ; ಪ್ರ. " ಇದು ಮತ್ತೇನೆಂಬೆ ಬೆಳ್ದಿಂಗಳ ಬೆಳತಿಯೋ ಪಂಸೆ ಪೊಲ್ಲೆತ್ತು ಸಾರ್ದಿಪ್ಪುದೊ " ಕವಿಕುಂಜರ ಲೀಲಾವತಿ. ೬.೨.೨೧.

ಇರ್ಪು- ದ್ರವ ; ಪ್ರ. " ಎಂದಾಗಳಿರ್ಪೊರೆದ ದುಗಲದ ಬಾಸಣಿಗೆಯುಂ ಕಳೆದು ತಾವರೆಯ ನೂಲಿಂ ಸುತ್ತಿದ ಸಿರಿಕೆಂಡದುರುಳಿಯುಂ ಪತ್ತಿಸಿದ ಮೃಣಾಳ ನಾಳವಲಯದಿಂ ಮುದ್ರಿಸಿದ ನಳಿನೀಪತ್ರಪುಟಮಂ ತೆಗೆದು. "
ಕಾದಂಬರಿ ಉತ್ತರಭಾಗ.೧೪೮

---

ರತಿಯ ಸೊಬಗು ಬಿಂಕಂಬೆತ್ತುದೆಂಬಂತು ನೇತ್ರಾ।
ಮೃತಮಯಮೆಸೆದತ್ತು ಚಂದ್ರಿಕಾಶ್ರೀವಿಳಾಸಂ ॥೪೬

ಅಂತು ಕಮನೀಯಮಪ್ಪ ಕೌಮುದೀಮಹೋತ್ಸವದೊಳವನೀಶ್ವರಂ ನಿಜವಿಳಾಸಿನಿಯರ ವಿಳಾಸಮುಮಂ ಲೀಲಾಂದೋಳಕೇಳಿಯುಮಂ ನೋಡಲೆಂದು ವಿಟವಿದೂಷಕಾದಿಗಳ್ವೆರಸಾತ್ಮೀಯಪದನಖಮಯೂಖಮಾಲೆಯಿಂ ಮದನರಾಗರಸಮಂ ಸೂಸುವಂತೆ ಮುಕ್ತಾಭರಣಕಿರಣಜಾಳದಿಂ ಚಂದ್ರಿಕೆಯಂ ಚೆಲ್ಲವಾಡುವಂತೆ ವಿಳಾಸಿನೀಸದನಮನೆಯ್ದೆವರ್ಪುದುಂ ॥೪೭

ಜನಪತಿಗಂದು ಪಾದ್ಯಮನದೇಂ ಮೆಱೆವಂತೆ ವಿಳಾಸಿನೀಘನ।
ಸ್ತನಶತಪತ್ರಪತ್ರಶತದಿಂದೆ ತೊವಲ್ತು ಪಯೋಜಪತ್ರವೀ ॥
ಜನದೆಲರಿಂ ಕವಲ್ತಗರುಧೂಮಲತಾವಳಿಯಿಂ ಮಡಲ್ತು ಮೆ।
ಲ್ಲನೆ ಸುಱಿದತ್ತು [1]ಸದ್ಮಸರಸೀಶರಶೀಕರಮಂದಮಾರುತಂ॥೪೮

ಅಂತು ಮನುಜೇಂದ್ರಚಂದ್ರಂ ತಾರಾಂತಃಪುರವೀಥಿಯಂ ಪುಗುವ ಚಂದ್ರನಂತೆ ಸೂಳೆಗೇಱಿಯಂ ಪುಗುತರ್ಪುದುಮೊಂದು ಪಳುಕಿನ ಸೆಜ್ಜೆವನೆಯ ಕನಕವೇದಿಕೆಯ ಮುಂದೆ ಪೊಂಬಾಳೆಯ ತನಿಗಂಪಿಂಗೆ ಎಗಿದ ಮಱಿದುಂಬಿಯ ಬಂಬಲಂ ಮನೋಜರಾಜನ ಪಿಡಿದ ಪೀಲಿದಟ್ಟಿಯಂತೆ ತಳೆದು ಮನಂಗೊಳಸುವೆಳಗೌಂಗಿನು[2]ಯ್ಯಲನೇಱಿ ॥೪೯

ಉದಯದೊಳೆನ್ನ ಕೇಸಡಿಯ ಕೆಂಪಿನ ದೇಸೆಗೆ ವಾರಲೆಂದುಮೆ।
ಯ್ದೆದು ಪೊಳೆವೆನ್ನ ಮುದ್ದುಮೊಗಮಂ ನಿಜಮಂಡಳಮೆಂದು ಸೂಟಿಸೂ ॥ ಟದೆ [3]ಪಡಿಯಿಟ್ಟುದಂ ಮೆಱೆದಪಳ್ ಸಸಿಗೆಂಬಿನಮೊರ್ವಳುಯ್ಯಲಾ। ಡಿದಳೆಲೆದುಯ್ಯಲಾಡಿದಳನಂಗಭುಜಾಸಿಗೆ ವೀರಲಕ್ಷ್ಮಿಯಂ॥೫೦

೧. ಪದ್ಮ. ಗ॥ ೨. ನುಯ್ಯಲೇಱಿ. ಗ॥ ೩. ಪಿಡಿ. ಕ॥

ಆಕೆಯಂ ನೋಡಿ ಮೆಚ್ಚುತ್ತುಂ ಬರೆ ಮತ್ತೊಂದೆಡೆಯೊಳುನ್ಮ ತ್ತಯೌವನೆ ಬಳ್ಳಿಮಲ್ಲಿಗೆಯ ಮುಗುಳ ಮಾಲೆಯ ದುಗುಲದ ಕಂಬ ಗಟ್ಟಿಂ ಮಿಸುಗುವಸುಕೆಯಲಗೊರ್ಂಚಲ ಮಾಣಿಕದ ಕನ್ನಡಿಯಿಂ ಸುರಪೊನ್ನೆಯ ಮುತ್ತಿನ ಸೂಸಕದಿಂ ಪೊಂದಾವರೆಯ ಮುಗುಳ ಪೊಂಗಳಸದಿಂ ಸಂಪಗೆಯಲರ ಪೊಂಗೆಜ್ಜೆಯಿಂ ಕೊಸಗಿನೆಸಲ ಪೊ ನ್ನ ತಿಂಗಣಿಗೆಯಿಂ ಮಗಮಗಸಿ ಬಂಡನುಂಡು ಮೇಗೆ ನಿಮಿರ್ವ ಮ ದಾಳಿಮಾಳಿಕೆಯ ನೀಲಪತಾಕೆಯಿಂ ರಯ್ಯಮಾದ ಪೂವಿನುಯ್ಯಲ ಕೆಲಕ್ಕೆ ವಂದು ಕಸ್ತುರಿಯ ಕ್ವಳದುಂಗಳುಮಂ ಕಪ್ಪುರವಳುಕುಗಳು ಮಂ ಕುಂಕುಮದುರುಳಿಗಳುಮಂ ಬಿಡುಮುತ್ತುಗಳುಮಂ ಕೆಳದಿಯ ರ್ಗೆ ಬಾಯಿನಂಗಳಂ ಕೊಟ್ಟು ಕುಸುಮದೆಸಲ ಮಸುಳಗೆಯೊಳ್ ಕುಳ್ಳಿರ್ದು ॥೫೧

ಆಡೆ ಕುರುಳ್ಸೊಸಲ್ವಿಡಿದು ಸೋರ್ಮುಡಿ ಬೆಂಬಿಡಿದಾಡೆ ಕಣ್ಗ ಳೋ । ಲಾಡೆ ವಿಲಾಸಹಾಸರಸದೊಳ್ಮೊಲೆ ಮೇಲುದನೊರ್ಮೆಗೊ ರ್ಮೆಗೀ ॥ ಡಾಡೆ ಮನೋಜರಾಜ್ಯದಧಿದೇವತೆ ಕೈನಿಱಿದಾಡೆ ಚೇಟದ । ಜ್ಝಾಡೆ ಮದಾಳಿ ಸುಯ್ಗೆ ಸುಱಿದಾಡೆ ವಿಳಾಸದಿನುಯ್ಯಲಾಡಿದಳ್॥

ಆಗಳ್ ವಿದೂಷಕಂ ನೀಡುಂ ನೋಡಿದರ ಮನಮನಲ್ಲಾಡುವ ದಮಲ್ಲದುಯ್ಯಲಾಡುವಂದಮಲ್ತೆಂದರಸನೊಳ್ನುಡಿಯುತ್ತುಂ ಬರೆ ಮ ತ್ತೊರ್ವಳುತ್ತುಂಗಸಪ್ತತಳಸಮುದ್ರಾಕ್ಷಾಮಂಡಪದ ಮುಂವಣ ರ ಕ್ತಾಶೋಕಶಾಖಾಂದೋಳಮಂ ಸಖೀಜನಂ ತೂಗೆ ॥೫೨

ವಾರಸ್ತ್ರೀ ತಳರುಯ್ಯಲಾಡುವೆಡೆಯೊಳ್ ಸೂಸಿತ್ತು ಗೀತಾಮೃ ತಾ । ಸಾರಂ ನುಣ್ಗೊರಲಿಂ ಸಡಿಲ್ದ ಮುಡಿಯಿಂ ಕಸ್ತೂರಿಕಾಸಾರ

. ಮೆಚ್ಚೆನೋಡು. ಕ॥ ೨. ತಿಂಗಳಿಗೆ. ಗ॥ ೩. ಕ್ವಳತಂ. ಗ॥ ೪. ಬಿಡ. ಗ॥

ಭಾ । ಸಾರಂ ಕರ್ಣೋತ್ಪಳದಿಂ ನವೋತ್ಪಳದಳಾಸಾರಂ ತಟನ್ಮಾಳಿಕಾ ॥ ಸಾರಂ ಭೂಷಣದಿಂ ಮನೋಭವಶರಾಸಾರಂ ಧನುರ್ದಂಡದಿಂ ॥ ೫೪

ಆವಿಳಾಸಿನಿಯರ ವಿಳಾಸಮಂ ರಾಜಮನೋಜಂ ನಿಂದು ನೋಡಿ ನೋಡುತ್ತುಂ ಬರೆ ಮುಂದೊಂದೆಡೆಯೊಳಲರ ಸರಲ ಮಸೆಯ ಬಿಸಿಲಿಂ ಮನದ ಲಜ್ಜಾರಸಮಲ್ಲಾಡೆ ಕಡುಮುಳಿದ ಕಾದಲನಂ ತಿಳಪಲೆಂ ದಲಘುಜಘನಭಾರದಿಂ ॥ ೫೫

ತೊಡೆ ತಡವಾಗೆ ಕೆಂದಳಿರ್ಗಳಂದದ ಮೆಲ್ಲಡಿ ಮೇಖಳಾರವಂ ।
ಗೆಡೆಗೊಳೆ ನೂಪುರಕ್ವಣಿತಮಂ ನಡೆತಂದೊಲವಿಂಗೆ ದಿವ್ಯಮಂ ॥
ಪಿಡಿದವೊಲಂದು ಕಾಲ್ವಿಡಿದ ಕಾಂತೆಯ ಕಣ್ಬನಿ ಕಾಂತನೇವಮಂ ।
ತೊಡೆದು[1] ನಿರಾಕುಳಂ ತೊಡೆದುದಾಕೆಯ ಲಜ್ಜೆಯ ಪೋದ ಪಜ್ಜೆಯುಂ ॥ ೫೬

ಆದಂ ಕಂಡು ನಾಗರಿಕನೆರಡಱಿಯದೊಲವಿನಂದಮು[2]ಪ್ಪುದೆಂದರಸನೊಳ್ ನುಡಿಯುತ್ತುಂ ಬರೆ ಮತ್ತೊರ್ಬಳಗರುನಿನ ಪೊಗೆಯಿಂ ಮಗಮಗಿಪ ಸೆಜ್ಜೆವನೆಯ ಮುಂದೆ ॥ ೫೭

ಅಲತಗೆಯಣ್ಕೆಯಿಂದಡಿದಳರ್ ಸಿರಿಕಂಡದ ಪತ್ರಲೇಖೆಯಿಂ ।
ನೆಲೆಮೊಲೆ ಸಣ್ಣಗಾಡಿಗೆಯಿನುತ್ಪಲಲೋಚನಮಿಟ್ಟ ರೋಚನಾ ॥
ತಿಲಕವಿಳಾಸದಿಂ ಪೆಱನೊಸಲ್ ಮನಮಂ ಸೆಱಗೆಯ್ಯೆ ನೋಡಿದಳ್ ।
ತೊಲಗದೆ ಜಿಟ್ಟ ನಟ್ಟು ನಿಲೆ ಕಾಮಿನಿ ಕಾಂತನ ಬರ್ಪ ಬಟ್ಟೆಯಂ ।

ಅದಂ ನೋಡಿ ರಾಜವಿದ್ಯಾಧರನೀಕೆಗನುಲೇಪನಮತನುಸಮುದ್ದೀಪನಮಾದುದೆನುತ್ತುಂ ಪೋಗೆ ಬೇಱೊಂದೆಡೆಯೊಳೊರ್ಬಂ[3] ಪಱಿಕ

---

೧. ತೊಡೆಯೆ. ಗ॥ ೨. ಮಿನಿಂದ. ಗ॥ ೩. ಬೇಱೊರ್ಬಂ.ಕ॥

ಯುದ್ಧ ಮಾಱುವ ಚಂಚರೀಕದಂತೆ ಚರಣಕಮಳಕ್ಕೆಱಗಿ ರೂಪವತಿಯು ನೂಪುರಾಳಾಪಮೊದವೆ ಪದಹತಿಯಿಂದಿನಿಯನನುರಾಗಮನಂಕುರಿತಂ ಮಾಳ್ಪುದುಮವಳ ಕೆಳದಿ ॥೫೯

ಒದೆದೊಡೆ ನೋವದಿರ್ಕೆ ಪುಳಕಾಂಕುರಮೀತನ ಮೆಯ್ಯೊಳುಣ್ಮೆ ಪ್ಪೊ । ಣ್ಮಿದವುದು ನೋವನೀವ ಬಗೆಯುೞಿೞ್ಕೊಡದೇವುದೊ ನಿನ್ನ ಬಾ ಹುವಾ ॥ ಶದೊಳೆ ತೊಡರ್ಚೊಡರ್ಚು ದಶನಕ್ಷತಪೀಡೆಯನಿಟ್ಟವು ರ್ಚು ಕೊ । ಬ್ಬಿದ ಕುಚಕುಂಭದಿಂ ಪಡೆ ಕಚಗ್ರಹನಿಗ್ರಹಮಂ ತಳೋದರೀ ॥೬೦

ಎಂದು ತಿಳಿಪುವುದುಮದಂ ಕೇಳುತ್ತುಂ ಪೋಗೆಪೋಗೆ ಮತ್ತೊರ್ವಳ್ ಕೆಲದಿರ್ದ ತನ್ನ ಕೆಳದಿಗೆ ಮುಂದಿಟ್ಟು ಪುಗಲೆಂದು ನಿಂದ ಜರಾಜರ್ಝರಿತನನಿಂತೆಂದಳ್ ॥೬೧

ಸ್ತನಭಾರೋದ್ಧತವೃತ್ತಿಯಂ ಕಬರಿಕಾಕೌಟಿಲ್ಯಮಂ ಲೋಲಲೋ । ಚನಚಾಪಲ್ಯಮನೀಕೆ ತನ್ನ ಬಗೆಗಂ ತಂದಾಕೆ ಪೋ ನಿಮ್ಮ ನ ॥ ಣ್ಪನದೇವಳ್ ಪಿಣಿಯಿಲ್ಲ ನಿಮ್ಮೊಡಮೆಗೆಮ್ಮಂ ಮೀಱುವಳ್ ಮೆ ಚ್ಚುಳಾ । ವನುಮಂ ಗರ್ಬದ ಗಾಳುಗೀತರುಣಿಗೀತಾರುಣ್ಯಮೇಂ ನಿಟ್ಟಯೋ ॥೬೨

ಎಂದು ಪೞಿಪಡಿಸಿ ಕಳೆಯೆ ರಾಜಸರ್ವಜ್ಞಂ ಮುಗುಳ್ನಗೆನಗುತ್ತುಂ ಬರ್ಪುದುಮೊಂದೆಡೆಯೊಳೊರ್ವಳನಿಯನನಗಲ್ಪುದೆಂದನುವದಿಸುವ ತಾಯ್ಗೆ ಕನಲ್ದು ॥೬೩

ಕೊಂಬಿಣಿದೊಟ್ಟಿ ಕೂರಿಸಿದ ಕಾದಲನಂ ಬಿಸುಡೆಂದು ಕೀೞು ಬಾ । ಯುಂಟೆನಗೆಂದು ಬಗ್ಗಿಸುವೆ ಕೂರದರಾಕಿಱಿಯುಂದು ನಿನ್ನನೇಂ ॥

೧. ಳ್ಕೊಡಿದೇ. ಕ॥ ೨. ಮತ್ತೊರ್ವಳುಱಿದಟ್ಟಿದ. ಗ॥

ನಾಂಟವೆ ಪೂವಿನಂಬು ಕಡುಸೋವದಿಯಾದಪೆ ನಿನ್ನ ಮೆಯ್ಯನು।
ಣ್ಗಂಟೊಡವುಟ್ಟಿ[1] ಮಟ್ಟುಮಿರೆ ಮೀಱುವರಾರೆಲೆ ಮನೋಜನಾ
ಜ್ಞೆಯಂ ॥೬೪

ಎಂಬುದುಂ ವಿದೂಷಕನೀಗಾಳುಗೊಂಟಣಿಯ ನಾಲಗೆಯ ಕೊನೆ
ಯಂ ಕೊಯ್ದಲ್ಲದೆ ಮಾಣೆನೆಂದರಸನಂ ನಗಿಸುತ್ತುಂ ಪೋಪುದು
ಮೊಂದೆಡೆಯೊಳೊಲಿಸಿದಾಕೆಗೆ ದೂರಮುಂ ನನೆಗಣೆಗೆ ಸಾರೆಯುಮಾದ
ಕಾದಲರೊಳೊರ್ಬನಿಂತೆಂದಂ ॥೬೫

ಅಡಿದಳಿರಾಗಿ ಪೆರ್ದೊಡೆಗಳಂ ತೊಡೆಯಾಗಿ ನಿತಂಬಬಿಂಬಮಂ।
ಬಡನಡುವಾಗಿ ಪೆರ್ಮೊಲೆಗಳಂ ಕೊರಲಾಗಿ ಪೊದೞ್ಕೆವೆತ್ತ ಸೋ॥
ಮ್ಮುಡಿಯುನದೊರ್ಮೆಯುಂ ತಳೆವ ಸೈಪೆನಗಿಲ್ಲದಗಲ್ದ ಬೇವಸಂ।
ಬಡುವುದಿದಾವ ವಿಸ್ಮಯಮೊ ನೀಳಸರೋರುಹಲೋಲನೇತ್ರೆಯಾ॥

ಎನೆ ಮತ್ತೊರ್ವಂ ನಿಜಮನೋವಲ್ಲಭೆಯ ಭಂಗುರಾಪಾಂಗಪಾತ
ಮಂ ನೆನೆದು ॥೬೬

ಮೊಲೆಯೊತ್ತೊತ್ತಿಂದೆ[3] ಹಾರಂ[2] ಕೆಲಕೆ ತೊಲಗೆ ಪೂಮಾಲೆಯಿಂ
ಕೇಶಹಸ್ತಂ। ಬಲಗೈಯುಂ ಮೋದೆ ತೞ್ಪೊಯ್ದಡದ ದೆಸೆಗೆ ಸುರ್ಕುಂ
ಗುರುಳ್ಪೊಸೆ ಲೀಲಾ॥ ವಲಿತಗ್ರೀವಂ ಮುಖಂ ರಂಜಿಸೆ ಮುಗುಱ್ದ*ನಿಯು
ಳ್ ನೋೞ್ಪುದುಂ ಕರ್ಚಿ ಪಾಱಿ। ತ್ತಲರಂಬುಂಬಂ ತಡಂ[4]ಗೊಂಡೆನೆ ನಿಮಿ
*ರ್ದುದು ತತ್ಕೇಕರಾಳೋಕಪಾತಂ ॥೬೭

ಎನೆ ಮತ್ತೊರ್ವಂ ನಿಜಮನೋವಲ್ಲಭೆಯ ನಗೆಗಣ್ಗಳ ವಿಳಾಸ
ಮಂ ಮನದೆಗೊಂಡು ॥೬೮

೧. ಮಟ್ಟುಮಿಗೆ.ಗ॥ ೨. ಪಾರ.ಕ॥ ೩. ತೊತ್ತಿಂನೆ.ಕ॥ ೪. ದಡಂ.ಗ॥

ಮೀಂಗಳನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ ಚಂಚರೀ | ಕಂಗಳನೊರ್ಮೆ ಮೋಹನಶರಂಗಳನೊರ್ಮೆ ಬಸಂತದಚ್ಛ ಬೆ॥ ಳ್ದಂಗಳನೊರ್ಮೆ ಬಾಲೆಯ ಮದಾಲಸಮುಗ್ಧವಿಶಾಲಸಸ್ಮಿತಾ | ಪಾಂಗಮುಗುಳ್ವಾರ್ಬಯಿಸಿ ಬಣ್ಣಿಸರಾಕೆಯ ಕಣ್ಣ[೧]ಮಾಯೆಯುಂ ॥೨೦

ಎಂದು ಪಲುಂಬಿ ಪಂಬಲಿಸುವುದುಮದಂ ಕೇಳ್ದರಸಂ ಮನಸಿಜನ ಮೇಗಿಲ್ಲದ ಬಲ್ಲಾಳ್ತನಕ್ಕೆ ತಲೆಯುಂ ತೂಗಿ ॥೨೧

ಹರಿಯುರವಲ್ಲಿ ಗೋಪವಧುವಿಂ ಮದನಂ ವಿಜಯಪ್ರಶಸ್ತಿಯಂ |
ಬರೆಯಿಸಿದಂ ಹರಂಗರುಣಲೋಚನಮಂ ಪಡೆದಂ ಲಲಾಟದೊಳ್ ॥
ಗಿರಿಜೆಯ ಪಾದಯಾವಕದೆ ಮಾಡಿಸಿದಂ ಮೊಗಮಿಟ್ಟ ದೇವಸುಂ॥
ದರಿಗೆ ಸರೋಜಗರ್ಭನನೆನಲ್ ಪೆಜರಂ ಕೊಱಚಾಡಿ ಕಾಡನೇ ॥೨೨

ಎನುತ್ತುಮಲ್ಲಿಂ ತಳದೊರ್ಬಳೊತ್ತೆಗೆ ನಿಂದ ನೀಱೆಯಂ ಮನುಜೇಂದ್ರಚಂದ್ರಂ ನೋಡದಂತೆ ನೋಡೆ ಕಣ್ಣಱಿದು ನಾಗರಿಕನಿಂತೆಂದಂ ॥೨೩

ಅಡಿದಳಿರೂಡಿದಂತೆ ಬಗೆಗೊಂಡುವು ಜಂಘೆ ಬೆಡಂಗನಾಳ್ದಿವೊ[೨] | ಳ್ಪೊಡೆ ಕಡುನುಣ್ಪುವೆತ್ತುವು ನಿತಂಬಮಳುಂಬಮೆನಲ್ಪೊದಱ್ದಿರ್ಪೊ ॥ ರ್ಪಡಿನಡು ಸಣ್ಣಮಾಯ್ತು ಮೊಲೆ ಬಟ್ಟದುವಾದುವು ಚೆಲ್ಲಗಂಗಳೊ | ರ್ಕುಡಿತೆಗೆ ತಿಣ್ಣಮಾದುವಿವಳೀಪರಿಜೇಂ ಕಡುನೇರಿತಾದುದೋ ॥೨೪

ಎನುತ್ತುಂ ಬರ್ಪುದುಂ ಮತ್ತೊರ್ವಳ್ ನಿಜಮನೋಜಕೇಳೀಮಂದಿರದ ಮುಂದಣ ಲವಂಗಲತೆಯಂ ಮಲಂಗಿ ॥೨೫

೧. ಮಾಲೆಯುಂ. ಕ.      ೨. ಪೊಲ್ಪೊಡೆಕಡುಗುಣ್ಪುವೆತ್ತ. ಗ॥

ಬಲ್ವಿಡಿದಾಳಿಯಂ ಸಖಿಯರೆಂದುದುಗೇಳದೆ ಗೆಂಟುವಾಱ್ಪುದುಂ ।
ಕಾಲ್ವಿಡಿದೋಪನಂ ಬಿಡದೆ ಮೆಲ್ಲೆ*ರ್ದೆಯುಂ ನನೆಯಂಬು ನಟ್ಟನೇ ॥
ಗೋರ್ಲ್ವರಿ[೧]ವಂತು ಕಾಮನಿಸೆ ಸೂಸಿದುವಾಕೆಯ ಕಣ್ಣ ನೀರ ತಂ ।
ದಲ್ವನಿ ಸಿಪ್ಪುಗಳ್ವಿಡಿದು ಸೂಸುವ ಮುತ್ತಿನ ಮೊತ್ತಮೆಂಬಿನಂ ॥

ಆಕೆಯನವಳೋಕಿಸುತ್ತುಂ ಪೋಗೆ ಮತ್ತೊರ್ವಳ್ ಪುರುಡಂ ನೀಡುಂ ಮಾಡಿ ನಲ್ಲನಲ್ಲಿಗೆ ವಂದು ॥೭೭

ಎನಗೆ ಮದಾಳಿ ಪಲ್ಮೊರೆದು ಕಲ್ತುವು ಗಾವರಿಸಲ್ಕೆ ಕಂಗಳೆ ।
ನ್ನನೆ ಜಡಿದೆಯ್ದೆ[೨]ನೋಡ ನುಡಿಗಲ್ತುವು ಮನ್ಮಥನೆನ್ನನೆಚ್ಚ ನ ॥
ಚ್ಚಿನ ಶರವಿದ್ಯೆಯೊಳ್ಕುಶಲನಾದನಿದೇಂ ಪ್ರಿಯ ಮತ್ತಮೆಯ್ದದೇ ।
ಮುನಿಸೆನುತುಂ ಲತಾಂಗಿ ಸುರಿದಳ್ಬಸಮಲ್ಲದೆ ಬಾಷ್ಪವಾರಿಯಂ ॥

ಆಗಳರಸನಿವಳೊಲವು ದೇಸೆವೆತ್ತುದೆನುತ್ತುಂ ಬರೆ ಮತ್ತೊರ್ವಳ್ ನಿಜಾನುಜೆಯ ಲಜ್ಜೆಯನುಜ್ಜಯಿಸಿದ ಕಾದಲನೊಲ್ಮೆಗೆ ಕಡುಮುಳಿದು ॥೭೯

ಉತ್ತರರೇಖೆ ಭಾಗ್ಯವತಿಗಪ್ಪ[೩]ದು ಚೋದ್ಯಮೆ ಕೇಶಭಾರಮಂ ।
ಪೊತ್ತಿರಲಾರ್ಪಳೇ ಕುಸುಮಕೋಮಳೆ ಬೇಡಿದ ಭೂಷಣಂಗಳಂ ॥
[೪]ಬತ್ತಳೆ ಬಾಂಗಿ ತಾಂಗುವಳೆ ನಂಬುಗೆಯಿಂ ಪರದಾಡುವಾಕೆ ಬಂ ।
ದೊತ್ತೆಯನೇವಳೆಂದು ಕಿಱುದಂಗೆಯನಂಗನೆ ಚುನ್ನವಾಡಿದಳ್ ॥೮೦

ಆಗಳಾಕೆಯ ವಕ್ರೋಕ್ತಿಯಂ ಸೂಕ್ತಿನಿಧಾನನಾಲಿಸುತ್ತುಂ ಪೋಗೆ ಪೆಱನೊರ್ವ[೫]ನೊಲ್ದವೊಲಿಸಿಯುಮೊಂದೆಡೆಯೊಳ್ನಿಲ್ಲದ ಪಲ್ಲವಗ್ರಾಹಿ ॥೮೧

೧. ದಂತೆ. ಗ॥ ೨. ನೋಡು. ಕ॥ ೩. ದೆ. ಕ॥ ೪. ಬತ್ತಲೆ. ಕ॥
೫. ನೊಲ್ಲೆಂನೊಲಿಸಿ. ಗ॥

ನೋಡಂಬಾಡನೆ ಬಂದು ಕಾಲ್ವಿಡಿವುದುಂ ಪೂಮಾಲೆಯಿಂ ನಲ್ಲನಂ ।
ನೀಡುಂ ಮೋದಿ ಕನಲ್ದು ಸೆಜ್ಜೆಗಿರದುಯ್ದಾಲಿಂಗನಂ ಚುಂಬನಂ ॥
ಕ್ರೀಡಾದಂತಿಕಕುಂತಿಕಾಕಳರವಂ ಕಂಠಸ್ವನಂ ರಾಗಮುಂ ।
ನೀಡುತ್ತಿರ್ಪಿನಮಾ ಪರಿಷ್ಕರತಪ್ರಾಗಲ್ಭ್ಯಮಂ ಬೀಱಿದಳ್ ॥೪೨

ಆಗಳ್ವಿದೂಷಕನೆನ್ನ ಕಿವಿಗಳ್ಗೀಕೆ ಸುಸಿಲ ಮಸಕಮನಾಲಿಸುವಿನಿ ಏರಿದು ಸೈಪನಪ್ಪುಕೆಯ್ದುಳೆಂದು ನಗಿಸುತ್ತುಂ ಪೋಗೆ ನಾಗರಿಕಂ ಅದೊಂದು ಸಂಭೋಗಸದನಮಂ ತೋಱಿ ॥೪೩

ಪಗಲುಲಿವಂದದಿಂದಮುಲಿದಪ್ಪುವು ತಮ್ಮೊಳೆ ಕೀಱಿ ದೀವದಂ ।
ಬೆಗಳೊಡಗೂಡಿ ಪಾರಿವದ ಮೆಲ್ಲುಲಿ ತಪ್ಪದಲಂಪಿನಿಂಪು ಕೈ ॥
ಮಿಗೆ ಮನದಾಣ್ಮನೊಳ್ಮೆಱೆದಪಳ್ ರತನಾಟ್ಯಮನೊರ್ವಳಂತಿದಾ ।
ಮೃಗಶಿಶುಲೋಲಲೋಚನೆಯ ಕೂಜನವೊಂದನುರಾಗಮಾಗದೇ ॥೪೪

ಎನುತ್ತುಂ ಬರ್ಪುದುಮೊಂದೆಡೆಯೊಳೊರ್ವಂ ಪ್ರಣಯಕಲಹಕಲುಷಿತೆಯಾದ ವಲ್ಲಭೆಯ ನಿರ್ಭರಪ್ರೇಮಭರದಿನೆಱಗಿದ ನಿಜಸುಖದ ಸೌಭಾಗ್ಯಮನೆ ಕೊಂಡುಕೊನೆದು ॥೪೫

ಪದಪದ್ಮಾನತನಾದ ಕಾದಲನ ನೋಂಕಿಂದಾದ ರೋಮೋದ್ಗಮಂ ।
ವಿದಿತಂಮಾಡೆ ಮನಃಪ್ರಸಾದಮಿದನೇನೆಂದೀರ್ಷೆಯಿಂ ಮಿಥ್ಯೆಯಂ ॥
ಪದುಳಂಮಾಡುವೆ ಮುಗ್ಧೆ ನೀಱನ ಮನಂ ಬೇಱಾಗೆ ನಿಸ್ತ್ರಿಂಶನೇಂ ।
ಮದನಂ ತೋಱದೆ ಮಾಣ್ಬನೇ ನಿನಗೆ ಬಾಣಾಸಾರಸಂಚಾರಮಂ ॥೪೬

ಎಂಬುದುಮರಸನಾತನ ಮಾತಂ ಮನದೊಳ್ಮೆಚ್ಚುತ್ತುಂ ಪೋಗೆ ಮುಂದೊಂದು ತಳರ್ವಂದರ ಜಗಲಿಯ ಮೇಲೆ ಪೆಂಡವಾಸದೆಳವೆಂಡಿರ್ಗಲರುಮಿರೆ ಮತ್ತೊರ್ವಳ್ತನ್ನ ಮೇಳದ ಕೆಳದಿಯನಿಂತೆಂದಳ್ ॥

೧. ನೋಡಿ. ಕ॥ಗ॥ ೨. ದಪ್ಪುವ. ಕ॥ ೩. ಯಂ. ಕ॥

ಬೀಱುದ ಮೆಯ್ದೊಡವಂ ನಿನ ।
ಗೀಯಲ್ಕಚಕ್ರೃಷ್ಣಸರ್ವಖಂಡನವುಂತೊ್ರ ॥
ಪಾಯುಮನಱಿಯಲ್ಕೆಱಿದಾ ।
ಮಾಯಾವಿಯನಱಿವೆನವನೆ ರಾಜಮನೋಜಂ ॥೮೮

ಎನೆ ಮತ್ತೊರ್ವಳ್ ॥೮೯

ನೆಲೆವೊಲೆಯ ಮೇಲೆ ವಲ್ಲಭ ।
ವಿಲಿಖಿತನಖರೇಖೆ ಚೆಂದ್ರಲೇಖೆಯೊಲಿರೆ ಕಂ ॥
ಡಲಗ*ಳ್ ವಿಲೋಚನೋತ್ಪಲ ।
ಮಲರ್*ದಪ್ಪುದೆಂತಬಲೆ ನಿನ್ನ ವದನಾಂಭೋಜಂ ॥೯೦

ಕೂಱಿಸುವನ್ಯೈವರಂ ಕಡು ।
ನೇಱಿದನಬಲೆಯರ*ೆ ಕವರ್*ದ ಬಗೆಯಂ ಬಗೆಯಂ ॥
ಬಾರಂ ಸಾರಂ ಮದನನ ।
ಬಾಱಿಗೆ ಗುಱಿಮಾಳ್ಪನೊಲಿಸಿ ಬಲಿವರ ದೇವಂ ॥೯೧

ಮನಮಂ ಸೆಱಿಗೆಯ್ದಬಳಾ ।
ಜನಮಂ ಲತೆವನೆಯ ಸೆಱಿಯೊಳಡುವುದೆ ತನಗಂ ॥
ಬಿನದಮೆನೆ ರಾಜಕಂದ ।
ರ್ಪನ ಸೊಬಗಿನ ದೇಸೆಯಂದಮಿದು ಬಿಸವಂದಂ ॥೯೨

ಕೊಯ್ಯದೆ ಮಾಣನೊಂದಿರುಳ ಕುಂತಳಮಂ ಪುಸಿನಲ್ಮೆದೋಱ ಮುಂ । ಗಯ್ಯ ತೊವಲ್ಗೆ ಮೋಣ್ಬರಲ ಕಂಡಿಕೆಗಾಡುವನಾಸೆಗೆಯ್ದ ಕ । ಣ್ಗೆಯ್ಯದಿರಾತನೊಳ್ಪಸಱ ಪೆಂಡಿರುಮಂ ಬಸಮಾಗೆ ಮಾಡಿ ಪೆ । ಣ್ಬಯ್ಯಲನಾಲಿಸಂ ಕರುಣವಿಲ್ಲದವಂ ಮನುಜೇಂದ್ರಚಂದ್ರಮಂ ॥

ಎಂದು ನುಡಿವ ತರುಣಿಯರ ನುಡಿಯಂ ವಿದೂಷಕಂ ಕೇಳ್ದು ದೇವ ! ನಿಜಕ್ಷತ್ರಿಯಪವಿತ್ರನೆಂಬ ಪೆರ್ಮೆಗೆ ಪೆಣ್ಬಯ್ಯಲನುಪೇಕ್ಷಿಸುವುದುಚಿತಮಲ್ತೆಂದು ನುಡಿಯುತ್ತಿರ್ದನಂ ‖೯೪

ತಡೆದಿರ್ಪುದೆ ಮಹಾದೇವಿಯ ।
ಕಡೆಗಣ್ಗಳ ನೆಯ್ದಿಲೆಸಲ ಬಾಸಿಗದಿಂ ಪೊ ‖
ಯ್ವಡೆಯದೆ ಶಯ್ಯಾಸದನ ।
ಕ್ಕಡಿಯೆತ್ತಂಬಂತೆ ಘಳಿಗೆ ವೊಱಗಿತ್ತಾಗಳ್ ‖೯೫

ಅಂತು ಬೆಳಗಪ್ಪ ಜಾವಮಪ್ಪುದುಂ ರತಿಯ ಸೂೞ್ಗವರ್ಪ ಕಂದರ್ಪನಂತೆ ರಾಜಮನೋಜಂ ಧನಶ್ರೀಯ ಸೂೞ್ಗವಂದನಲ್ಪತಲ್ಪತಳದೊಳ್ ಸುಖಪ್ರಸುಪ್ತನಿರೆ ‖೯೬

ತನುಸೋಂಕಿಂ ನಿದ್ರೆಯಿಂದೆೞ್ಚಱಿಸಿ ಕುಮುದಮಂ ನೆಮ್ಮಿ ಕೈಗೆಯ್ದ ಭೃಂಗಾಂ । ಗನೆಯಂ ನಿರೀಕ್ಷಿನೀಕುಟ್ಮಳದೆಸೆ[1]ಯ್ವರೆಯಂ ಬಿರ್ಚೆ ಚಂಡಾಳಗೀತ ‖ ಸ್ವನದೊಳ್ತಳ್ಪಯ್ದು ನೀರ್ವಕ್ಕಿಗಳುಲಿಪುಮನುಂಭೋಜಷಂಡಂಗಳೊಳ್ಸೀ । ರ್ವನಿಯಂ ತರ್ಕೈಸಿ ತಂದೊಯ್ಯನೆ ಸುೞಿದು[2]ದೆಲರ್ಪ್ರಭಾತಪ್ರಭೂತಂ ‖೯೭

ನೋಡಿದ ನೋಟಕ್ಕಳಿಪಂ ।
ನೀಡವೆ ತನಿಗಂಪನುಗುಳ್ವ[3] ಪೂಮಾಲೆಗಳುಂ ।
ಬಾಡಿದುವು ಕುಂದಿ ನಾತರ್ಪು ।
ಱೋಡಿಸುಗುಂ ತಪ್ಪ ದಿವಸಮೆಂತಪ್ಪರುಮಂ ‖೯೮
ಮನೆಯೊಳಗೆ ತೇಜಮಂ ಮೆಱೆ ।
ದೆನಿನ್ನೆವರಮಿರುಳ ಬಲದೊಳನನುದಯದೊಳಂ ‖

೧. ಮುಪ್ಪುದಲ್ತೆಂ. ಗ‖ ೨. ದೆರಲ್ಪು. ಕ‖ ೩. ದ್ವೀಕಳಿಪಂ. ಕ‖

ನೆನಗೆಸೆಯದೆಂದು ಕಂದಿದು ।
ದೆನೆ ಮಸಮುಸನಾಯ್ತು ದೀಪಕಳಿಕಾಜಾಳಂ ॥೯೯

ಕಂದಿದುದಿಂದು ಮುಖಂ ನಯ ।
ನೇಂದೀವರಮತಿಜಡಂಗಳೆನಿಸಿದುವು ನಿಶಾ ॥
ಸುಂದರಿಗೆ ಜರೆಯೊಳೊಗೆದೋ ।
ರೊಂದೆ ಜರಾಬಿಂದುವೆನಿಸಿದುವು ತಾರಗೆಗಳ್ ॥೧೦೦

ನೆಯ್ದಿಲ ಸಿರಿ ತನ್ನಂ ಬಂ ।
ದೆಯ್ದೆ ಸರೋಜಂ ರಜೋಧಿಕಂ ದರಹಾಸಂ ॥
ಮೆಯ್ದೋಱ ಸಿಮೋಲ್ಗೆಱ (?) ।
ಕೆಯ್ದುವು ಸಿರಿ ನಿಂದ ಕಾಲೊಳೇಂ ನಿಂದಪಳೇ ॥೧೦೧

ಪೋಗಲಡಹಡಿಸಿ ಮಿತ್ರಸ ।
ಮಾಗಮಮಂ ಬಯಸಿ ನಳಿನಿ ತಿಳಗೊಳದಿಂದಂ ॥
ಮೇಗಣ್ಗೊಗೆವಂತುನ್ಮುಖ ।
ಮಾಗಿರ್ದುವು ನೀಳ್ದ ಸರಸಬಿಸವಲ್ಲರಿಗಳ್ ॥೧೦೨

ನಲಿವಾಱುವಾಱ ತಮ್ಮೊಳ್ ।
ನಲಿದೊಂದರೆಗರ್ಚಿದಬ್ಜಕಾಂಡಮನೊಂದಿಂ ॥
ಜಲಿಸಿ ಮನೋಜಸುಖಕ್ಕಳ ।
ವಳಸಿದುವಾಗಳ್ ರಥಾಂಗಮಿಥುನಶತಂಗಳ್ ॥೧೦೩

ಜಿನಗೃಹದೊಳೊಗೆವ ಜಗಳೆಯ ।
ದನಿಯುಂ ಕಾರ್ಗಾಲ ಮುಗಿಲ ಮೊೞಗಿನ ದನಿಗೆ ॥

೧. ನೆಂದು, ಕ॥

ತ್ತನುರಾಗದಿನೊಡರಿಸಿದುವು ।
ಮನೆಮನೆದಪ್ಪದೆ ಶಿಖಂಡಿಗಳ್ತಾಂಡವಮಂ ॥೧೦೪
ದುಸ್ಸ್ಥಳಮುದಯಾಚಳಧಾ ।
ತುಸ್ಥಳಿಯಂ ಬೇಗಮಡರ್ವ* ದಿನನಾಥರಥ ॥
ಪ್ರಸ್ಥಾನಪಾಂಸುವೆನಿಸಿ ದಿ।
ಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ ॥೧೦೫
ಉದರದೊಳೀಜಗಮಂ ತಾ ।
ಳ್ದದ ಶಾಶ್ವತಲಕ್ಷ್ಮಿರಮೆತ್ತ ದಿನಪಂ ಸಂಧ್ಯಾಂ ॥
ಬುದಪೀತಾಂಬರವಿಭು ತಾ ।
ಳ್ದದ ಕೌಸ್ತುಭರತ್ನಮೆನಿಸಿದುದು ರವಿಬಿಂಬಂ ॥೧೦೬

ಅಂತು ನೇಸರ್ಮೂಡುವುದುಂ ರಾಜಸರ್ವಜ್ಞಂ ಶುಚಿರ್ಭೂತನು ಮತಿಸಮಾಹಿತಚಿತ್ತನುಮಾಗಿ ॥೧೦೭

ಅಳಿಮಾಳಾಮಿಳಿತಪ್ರಸೂನಸುರಭಿದ್ರವ್ಯಂಗಳಿಂದರ್ಚನಾ ।
ಫಳಶಾಲ್ಯಕ್ಷತದೀಪಧೂಪಚರುಸಂದೋಹಂಗಳಿಂ ಸರ್ವಲ ॥
ಕ್ಷಣಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ ಜಿನಸ್ತೋತ್ರ
ಚಾ । ಪಳಜಿಹ್ವಾಗ್ರಸಮಗ್ರನಾಟಕನಟಂ ಸಾಹಿತ್ಯವಿದ್ಯಾಧರಂ ॥೧೦೮

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಕೌಮುದೀಮಹೋತ್ಸವವರ್ಣನಂ
ಸಪ್ತಮಾಶ್ವಾಸಂ ಸಮಾಪ್ತಂ.

## —ಅಷ್ಟಮಾಶ್ವಾಸಂ—

ಶ್ರೀಪರಮಜಿನೇಶ್ವರಚರ ।
ಣೋಪಸ್ಥಲಮಂ ಪ್ರಧಾನಮಂಗಳಮಂ ಪು ।
ಣ್ಯೋಪಾರ್ಜನಮಂ ನಿತ್ಯ ।
ವ್ಯಾಪಾರಮನಪ್ಪುಕೆಯ್ದನಭಿನವಪಂಪಂ ॥೧

ಸಿರಿಕಂಡದ ಕೋಱ್ಕೆಸಱೊ ।
ಳ್ಬೆರಸಿದ ಕತ್ತುರಿಯ ಸಾರವಣೆಬೆಳಗಿದ ಕ ॥
ಪ್ಪುರವಳುಕಿನ ಸೊಡರ್ಗಳ್* ಸುಂ ।
ದರಮೆನೆ ಜಿನಪತಿಯನವನಿಪತಿ ಪೂಜಿಸಿದಂ ॥೨

ಸುರಪೊನ್ನೆಯ ವಾಸಂತಿಯ ।
ಸುರಯಿಯ ಚಂಪಕದ ಕರ್ಣಿಕಾರದ ಪೊಂದಾ ॥
ವರೆಯ ವಿಚಕಿಳದ ನಸುಬಿಱಿ ।
ದಲರಿಂದರ್ಚಿಸಿದನವನಿಪತಿ ಜಿನಪತಿಯಂ ॥೩

ಚಾರುಚರುನಿಚಯದಿಂ ಘನ ।
ಸಾರಾಗುರುಧೂಮಲೇಖೆಯಿಂ ಮಳಯಜಕಾ ॥
ಶ್ಮೀರರಸದಿಂ ಜಿನೇಂದ್ರನ ।
ನಾರಾಧಿಸಿದಂ ನರೇಂದ್ರಚೂಡಾರತ್ನಂ ॥೪

ಬಾಳೆಯ ಮಾವಿನ ಕಂಮರ ।
ಡೀಳೆಯ ತನಿವಣ್ಗಳಿಂದಮರ್ಚಿಸಿದಂ ಭೂ ॥
ಪಾಳಂ ನಿರ್ಭರಭಕ್ತಿಯ ।
ಜಾಳಕಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್ ॥೫

ಅಂತು ಸಾಮಾಯಿಕನಿಯಮಮಂ ನಿರ್ವರ್ತಿಸಿ ದಿವ್ಯಾಂಬರಮನುಟ್ಟು ತುಱುಂಬಿದ ತೋಱಮಲ್ಲಿಗೆಯ ಮುಗುಳ ಕಂಪುಮಂ ತಳೆದ ಪ್ರಡಿಗತ್ತುರಿಯ ಸೊವಡುಮಂ ಚಾಮರದ ಗಾಳಿ ದೆಸೆದೆಸೆಗೆ ನೀಡೆಯುಂ ತೊಟ್ಟ ವಜ್ರಾಭರಣಕಿರಣಪಟಲಂ ಪಗಲ ಸಿರಿಗೆ ಕಣ್ದೆಱವಿಮಾಡೆಯುಂ ಕರ್ಪೂರಪರಿಮಿಶ್ರಿತತಾಂಬೂಲರಾಗರಂಜಿತಾಧರಮಣಿ ರಮಣೀಜನಕ್ಕೆ ರಾಗಮಂ ಕುಡುವ ಚಿಂತಾಮಣಿಯ ಚೆಲ್ವನುಂಟುಮಾಡೆಯುಂ ನವೀನಯೌವನಾವಷ್ಟಂಭಮನಪ್ಪುಕೆಯ್ದು ನಿಜನಿರತಿಶಯರೂಪದಿಂ ಮನೋಭವರೂಪಾಭಿಮಾನಗರ್ವಗ್ರಂಥಿಯಂ ಸಡಿಲಿಸುತುಂ ಅಮೋಘವಾಕ್ಯಮಾಣಿಕ್ಯಜಳಧಿ ॥ ೬

ವಿವಿಧಾತೋದ್ಯವಿದಗ್ಧವಾದಕನಿಕಾಯಂ ಗಾಯಕಶ್ರೇಣಿ ಮಂ ।
ದಿವಿತಾನಂ ಬಗೆಗೊಂಡು ಕೊಂಡು ಕೊನೆಯುತ್ತುಂ ಬರ್ಪಿನಂ ಖೇಚ
ರೇಂ॥ ದ್ರವಿಲಾಸಂ ತನಗೆಕ್ಕಲಾವಣಮೆನಲ್ ಸಂಗೀತಕಾಲೋಕನೋ ।
ತ್ಸವದಿಂ ನಾಟಕಶಾಲೆಗಂದು ಬಿಜಯಂಗೆಯ್ದಂ ಮಹೀವಲ್ಲಭಂ ॥ ೭

ಅಂತು ಬರ್ಪುದುಂ ॥ ೮

ಗುಣದೊದವಿಂ ಪರಾಕ್ರಮದಳುರ್ಕೆಯಿನುನ್ನತಿಯಿಂ ವಿಲಾಸದಿಂ ।
ದೆಣೆ ತನಗೆಂದು ಸೌಖ್ಯಮನಪೇಕ್ಷಿಸಿ ತನ್ನ ವಿಮಾನಮಂ ನೃಪಾ ॥
ಗ್ರಣಿಗೆ ಸುರೇಂದ್ರನೋಲಗಿಸಿದಂತೆಸೆದತ್ತು ವಿಚಿತ್ರಪುತ್ರಿಕಾ ।
ಮಣಿಮಯಮತ್ತವಾರಣವಿತಾನವಿರಾಜಿತನಾಟ್ಯಮಂಡಪಂ ॥ ೯

ಆಮಂಡಪಮಂ ಮಂಡಲಿಕಮಕರಧ್ವಜಂ ಮಣಿಮಂಡನಮರೀಚಿಯಿಂ ಚಿತ್ರಿಸುತ್ತುಮೊಳಪುಗುವುದುಂ ॥ ೧೦

ಸಮವಾಯಂ ಸಮನಾದೊಡಂ ಸಕಲಭೂಭೃನ್ಮಸ್ತಕನ್ಯಸ್ತಪಾ ।

ದಮೆನಿಪ್ಪುನ್ನತಿಯಿಂದಮೆನ್ನೊಡನೆ ಮತ್ತಂ ವಿಕ್ರಮಕ್ರೀಡೆಯೊಳ್ ॥
ಸಮನಾಗಲ್ಬಗೆದಪ್ಪುದೆಂದು ಸೆಱಗೆಯ್ದಂ ಸಿಂಗಮುಂ ತನ್ನೃಪೋ ।
ತ್ತಮನೆಂಬಂತಿರೆ ಸಿಂಹಪೀಠಮೆಸೆದತ್ತಾವೇದಿಕಾಭಾಗದೊಳ್ ॥೧೧

ಆಗಳ್ ॥೧೨

ಇವು ಚತುರಂಗಪ್ರಥಮಾ ।
ಗಮೆನಿಪ್ಪ ಗಜಕ್ಕೆ ಮುಳಿವುವೆಂಪಾಗ್ರಹದಿಂ ॥
ದವನಾಸಭೆಯೊಳ್ ನೃಪ ಪರಿ ।
ಭವಿಪಂದದಿನೇಱಿದಂ ಮೃಗೇಂದ್ರಾಸನಮಂ ॥೧೩

ಆಸಮಯದೊಳ್ ॥೧೪

ಉರಗೇಂದ್ರಂ ಪೆಡೆಗಳ್ಪಿಡಂಮುಗುಳ್ವಿನಂ ಪೊತ್ತಿರ್ದ ವಿಶ್ವಂಭರಾ ।
ಭರಮಂ ತನ್ನ ಭುಜಾಗ್ರದೊಳ್ತಳೆದು ಬಿಣ್ಪಿಂ ತಾಳ್ದಿದೀಧೈರ್ಯ
ಮಂ ॥ ದರನಂ ತಾಳ್ದಿದೆನೆಂದು ರಾಗಮಯಮಾಯ್ತೆಂಬಂತೆ ಚೆಲ್ವಾ
ಯ್ತು ಕೇ । ಸರಿಪೀಠಂ ಪುದಿದಿರ್ದ ಶೋಣಮಣಿಮಾಳಾರಶ್ಮಿಜಾಳಂ
ಗಳಿಂ ॥೧೫

ಆಸಮಯದೊಳಸಮಶರನ ವಶೀಕರಣಮಂತ್ರಾಧಿದೇವತೆಯರೆ ಸ
ನ್ನಿದಮಾದಂತೆ ॥೧೬

ಗಂಡಗುಣಕ್ಕೆ ಚೆಲ್ವಣಮಿದೆಂಬೊಡೆ ಪೊತ್ತಿರು ಪುಷ್ಪಕಾಂಡ
ಕೋ । ದಂಡಮನಲ್ಲದಂದು ಬಿಸುಡೀತ್ರಿಜಗದ್ವಿಜಯೋದ್ಯಮಕ್ಕದೇ ।
ಭಂಡವೊ ಸಾಲ್ವುದೀಕೆಗಳ ಪುರ್ಬಿನ ಜರ್ಬಿನೆ ಪೆಂಡವಾಸದೊ ।
ಳ್ವಂಡಿರ ತಂಡಮಾಗಳೆಸೆದಿರ್ದುದಿಳೇಶನ ಪಾರ್ಶ್ವದೇಶದೊಳ್ ॥೧೭

೧೭. ಏಭಂಡವೊ- ಏನು ಮೂಲಧನವೊ (?)

೧. ಳ್ಪಿಱಂ. ಕ॥ ೨. ಬಿಣ್ಪಿಂ. ಕ॥

(ಪೃಥ್ವೀವೃತ್ತಂ)

ನರೇಂದ್ರವರಹಾಸವಕ್ತ್ರಕಮಳಾಕರೋಲ್ಲಾಸಿಯುಂ ।
ಹರಿನ್ಮಣಿಶಿರೋವಿಭೂಷಣಮಯೂಖಶೈವಾಳಮುಂ ॥
ಮುಗ್ಧಾಳನಿಕರಂ ಕರ್ದಂಕುವವ್ರೊಲಾದುವಾಗಳ್ ವಧೂ ।
ಕರಾಂಬುರುಹಸಂಚಳದ್ಧವಳಚಾಮರಶ್ರೇಣಿಗಳ್ ॥೧೮

ರಾಜಕುಮಾರಕಮುಂ ಗಣಿ ।
ಕಾಜನಮುಂ ಚತುರಬುಧಕದಂಬಕಮುಂ ರಾ ॥
ರಾಜಿಸೆ ಸಭೆಯೊಳ್ ರಾಜಮು ।
ನೋಜಂ ಬಿಜ್ಜೋದರೋಲಗಂಗೊಟ್ಟಿರ್ದಂ ॥೧೯

ಆಪ್ರಸ್ತಾವದೊಳ್ ॥೨೦

ಮೃಗಮದದಾರ್ದ್ರಚಂದನದ ಕುಂಕುಮಪಂಕದ ಸೂಡಿದಚ್ಚ ಬಾ । ಸಿಗದ ಕದಂಬದಂಬುಲದ ಕಂಪನಲಂಪಿನೊಳೀಂಟಿ ಭೃಂಗವಾ ॥
ಳಿಗಳನುರಾಗದಿಂ ಮೊರೆವ ನಾದಮೆ ಗೇಯದೊಳಾದಲಂಪನಾ ।
ವಗಮುವಟ್ಟೈಸೆ ಗಾಯಕನಿಕಾಯಮನೀಕ್ಷಿಸಿದಂ ನರಾಧಿಪಂ ॥೨೧

ಆಗಳವನೀಶ್ವರಪ್ರಸಾದಾವಲೋಕನಮೆ ತನಗೆ ಸಂಗೀತಕಪ್ರವೇಶ ಪ್ರೇರಕಮಾಗೆ ॥೨೨

ಕೊರಲಿನಿತು ಬೆರಲ ಪವಣಿಂ ।
ಕರಮೆ ರಸಂಬಡೆಗುಮೆಂಬ ತೆಱನಱದು ಬೆರ ॥
ಲ್ಕೊರಲಾಗೆ ರಾಗಶುದ್ಧಿಯ ।
ಪರಿಣತಿಯುಂ ಮೆಱದು ವಾಂಶಿಕಂ ಬಾಜಿಸಿದಂ ॥೨೩

೧. ವಿದ್ಯಾಧರೋ. ಕ॥ ಗ॥

ಆಗಳತಿಸುಕಂಠನುಂ ವಿಂಶತಿಯತಿಪ್ರಗಲ್ಭನುಮಪ್ಪ ಮುಖ್ಯಗಾಯಕಂ ತಾಳನಿವರ್ತನಂಮಾಡಿ ‖ ೨೪

ಕೊರಲಂ ನಿಟ್ಟೆಗೆ ತಂದು ವಂಶಶ್ರುತಿಯಿಂ ತ್ರಿಸ್ಥಾನಸಂಶುದ್ಧಿವೆ |
ತ್ತಿರೆ ನಾನಾವಿಧಸಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿ ‖
ತ್ತರಿಪಂತಾಣತಿಮಾಡಿದಂ ಮುಖರಿಗಾಣಂ ಭೃಂಗಮಾಳಾಮೃದು |
ಸ್ವರಮುಲ್ಲಿಂತಿದು ಕಾಮಕಾರ್ಮುಕಲತಾಜ್ಯಾರಾವಮೆಂಬನ್ನೆಗಂ ‖ ೨೫

ಅಂತಾದತಿಶಯಪರಿಣತಿಯಂ ಮೆಱೆದು ಮೂಱುಂ ಗ್ರಾಮರಾಗಂಗಳೊಳಂ ಷಡ್ಜಾತಿಋಷಭಾದಿಸಪ್ತಸ್ವರಸಮಾಯೋಗಸಂಭವಮಪ್ಪ ಮೂವತ್ತುಂ ವಿಶುದ್ಧರಾಗದೊಳಂ ಸ್ವರಭಾಷಾವಿಭಾಷೆಯಿಂ ವ್ಯಕ್ತಮಾದ ಮುವತ್ತಾಱುಂ ರಾಗಭೇದದೊಳಂ ದೇಶೀಯವಿಶೇಷಭೇದದಿನಾಚಾರ್ಯವಿರಚಿತಾಭಿನಯಭೇದದಿಂ ಜನಿಯಿಸಿದ ನೂಱನಾಲ್ವತ್ತುಂ[1] ರಾಗಭೇದದೊಳಮವನೋರೊಂದಱೊಳ್ಬೆರಸುವ ಸಾಮ್ರಾಣಿಭೇದದೊಳಂ ಚಚ್ಚ್ಪುಟಚಾಚಪುಟಾದಿಸಕಲತಾಳಸಂಚಾರಸಮುದಿತಮಪ್ಪ ವರ್ತೆಂಟು ವಸ್ತುಗೀತದೊಳಮತಿಪ್ರವೀಣನಪ್ಪ ಗಾಣಂ ಪಾಡಲೊಡರಿಸುವುದುಮಾಗಳ್ ‖ ೨೬

ವಿತತಘನಾವನದ್ಧಸುಷಿರಂಗಳನೊರ್ಮೆಯೆ ಕೂಡೆ ಕೂಡಿ ಕೊಂ |
ಡತಿದ್ರುತವಾದಕರ್ತಗುಳೆ ಬಾಜಿಸೆ ನಿರ್ಭರನೀಲಮೇಘಗ ‖
ರ್ಜಿತಮೊ ಸಮುದ್ರಘೂರ್ಣಿತಮೊ ಪೇೞೆನೆ ನರ್ತನಪೂರ್ವರಂಗಸಂ |
ಗತಸಮುಹಸ್ತವಿಸ್ತೃತರವಂ ಪುದಿದತ್ತು ನಭೋವಿಭಾಗಮಂ ‖ ೨೭

ಅಂತು ಪೂರ್ವರಂಗಸಂಗತಸಮುಹಸ್ತಮಂ[3] ಮೆಱೆದು ‖ ೨೮

೧. ಸುಕರನುಂ. ಕ‖ ೨. ನೂಱನಾಲ್ವತ್ತುಂ. ಕ‖ ೩. ಹಸ್ತಪಂ. ಗ‖

ತಳದಿಂದವ್ಪುಂಕಿ ತೊಡೆದು ।
ದ್ಬಳಕೆಯ ನೂಲ್ವಾಸಮೆಸೆಯೆ ಝೇಂಕಾರಮನಿ ॥
ತ್ತ್ವಳವಡೆ ಬಾಜಿಸೆ ಶಶಿಮುಂ ।
ಡಳಮುಗುಳ್ವಮರ್ದೆನಿಸಿದತ್ತು ಥಕ್ಕಾನಿನದಂ ॥೨೯
ಕಡೆಮುಟ್ಟೆ ನೇತ್ರವಟ್ಟೆಯ ।
ಕಡೆಯುಂ ಸೀಳ್ದಂತೆ ವಿಷಮತಾಳದೊಳನಿಸಂ ॥
ತೊಡದದಿದವೆಜಿನೆ (?) ಮಡದೊಳ ।
ಗೊಡನುಡುಗದೆ ಕುಡುಪನಡರ್ವಿನು ಬಾಜಿಸಿದಂ ॥೩೦
ಅಂತು ಬಾಜಿಪಾಗಳ್ ॥೩೧
ಮಾರ್ಗಚತುಷ್ಟಯಮಭಿನವ ।
ಮಾರ್ಗದೊಳಳವಟ್ಟು ಮಕರಕೇತನಸುಮನೋ ॥
ಮಾರ್ಗಣಮೆನೆ ಸೋಲಿಸೆ ಸಭೆ ।
ಮಾರ್ಗಣಮೆನೆ ಪೊಗಟ್ಟಿದೊಂದೆ ಕೊರಲಿಂದಾಗಳ್ ॥೩೨
ಸಮಮೆನಿಪ ವಿಷಮಮೆನಿಸಿದ ।
ಸಮವಿಷಮಮಿದೆನಿಸಿದೀಪ್ರಚಾರತ್ರಿತಯಂ ॥
ಸಮನಿಸೆ ಸಮನಿಸಿದತ್ತೊ
ನೆ ಮನೋಜಜ್ಯಾರವಪ್ರಚಾರಂ ಸಭೆಯೊಳ್ ॥೩೩
ಗುರುಸಂಚಯಲಘುಸಂಚಯ ।
ಗುರುಲಘುಸಂಚಯಮೆನಿಪ್ಪ ಸಂಯೋಗಂಗಳ್ ॥
ಪರಿಣತಿಕೆವಡೆದು ಪಡೆದುವು ।
ಪರಿಣತರ ಮನಕ್ಕೆ ಹರ್ಷರಸಸಂಚಯಮಂ ॥೩೪

೧. ದ್ದಳಿಗೆಯ. ಗ॥ ೨. ತೊಡವಿದದಿಜ್ಜನೆಮನದೊಳ ।. ಕ॥

(ಅನವದ್ಯ ವೃತ್ತ)

ದ್ರುತವಿಲಂಬಿತಮಧ್ಯಲಯಂ ತತ್ಪಾನುಗತಾಘಗತಿತ್ರಯಂ ।
ಜತಿಯೊಳೊಂದುವಿನಂ ಪದಿನೆಂಟುಂ ಚಾರಿ ಮನೋಹರವಾಗೆ ವಿಂ ॥
ಶತಿವಿಭೇದದಳಂಕೃತಿ ವಿದ್ಯಾಲಕ್ಷ್ಮಿಗಳಂಕೃತಿಯಾಗೆ ಭಾ ।
ರತಿಕನೋಜೆಗೆ ಬಾಜಿಸಿದಂ ಚಿತ್ತಕ್ಕೆ ಚಮತ್ಕೃತಿಯಪ್ಪಿನಂ ॥೩೫

ಅಂತು ವಾದ್ಯವಿದ್ಯಾಪರಿಶ್ರಮಮಂ ಮೆಱೆದು ಪಱೆಸನ್ನೆಗೆಯ್ವುದುಂ ಮತ್ತಂ ನರ್ತನಾಲಂಕರಣದಿನಲಂಕರಿಸಿ ನರ್ತಕಿ ನೇಪಥ್ಯಗೃಹದಿಂ ವಿವಿಧರತ್ನರಚಿತಮೆನಿಸಿದ ಜವನಿಕೆಗವತರಿಸಿ ॥೩೬

ಜವನಿಕೆ ಭೂಷಣಂಗಳ ಲತಾಂಗದಪಾಂಗದ ಕಾಂತಿ ಸುತ್ತಿದಂ । ತೆವೊಲಿರೆ ಲೋಚನೋತ್ಸವಮನೀವ ನಿಜಾಕೃತಿಯಿಂದೆ ಪೋಲ್ತ ಳಾ ॥ ಯುವತಿ ವಿಚಿತ್ರರತ್ನರುಚಿಯಿಂ ಪೊರೆದಿಂಗಡಲಿಂದಮುಣ್ಮಿ ಪೊ । ಣ್ಮುವ ನಿಱುಗೊಂಡ ನೀಳ್ದ ತೆರೆಯಿಂ ಬಳಸಿರ್ದಮೃತಾಂಶು ಲೇಖೆಯಂ ॥೩೭

ನವರತ್ನರಚಿತಮೆನಿಸಿದ ।
ಜವನಿಕೆಯಂ ಕಳೆಯೆ ರಂಗದೊಳ್ಕಣ್ಗೆಸೆದಳ್ ॥
ಧವಳವಿಲೋಚನೆ ಚಿತ್ತೋ ।
ದ್ಭವನೊಱೆಯಿಂದುರ್ಚಿ ಮಿಸುಗುವಸಿಲತಿಕೆಯವೊಲ್॥೩೮

ಆಗಳಸದಳಮೆಸೆದು ಪಸರಿಸುವಪಾಂಗಪ್ರಭಾಪಟಲದಿನಕಾಂಡ ಕಾಂಡಪಟಮಂ ಪಡೆದು ॥೩೯

ಸ್ಮರಪಾಶದಿನಾನರ್ತಕಿ ।
ಬರೆಸೆಗೆದಪಳೆನೆ ಸಭಾಜನಂಗಳ ಮನಮಂ ॥

ಕರೆಗಣ್ಮಿ ನಿಮಿರ್ವ ಲೋಚನ।
ಮರೀಚಿವಹಾಳಕೆಯಿನೇಂ ಮನಂಗೊಳಿಸಿದಳೋ॥೪೦
ಪೊಳೆದಪುವೆಳವಾಳೆಗಳ।
ಗ್ಗಳಿಸುವ ಲಾವಣ್ಯರಸತರಂಗಿಣಿಯೊಳನಲಿ॥
ಲಲನೆಯ ತನುರುಚಿಯೊಳ್ತಳ।
ತಳತಳಸಿದುವೆಳಸಿ ಬಳಸಿ ನೋೞ್ಪರ ಕಣ್ಗಳ್॥೪೧

ನಯಮುಳವಟ್ಟು ತೊಟ್ಟ ವಸುರ್ವಟ್ಟೆಯ ಕಂಚುಕಮುಟ್ಟ ನೇತ್ರವ। ಟ್ಟೆಯ ಪೊಸಚಲ್ಲಣಂ ಮುಡಿದ ಮುತ್ತಿನ ದಂಡೆ ತೊಡರ್ಚಿದೊಂದು ದೇ॥ ಸೆಯ ತೊಡವೊಪ್ಪಮಂ ವಡೆಯೆ ಮಾಣಿಕೆ ಬಳ್ಕದ ಚಕ್ರಚಾವಲೀ। ಬೆಯ ತೆಱದಿಂ ತ್ರಿಭಂಗದೊಳದೇನೆಸೆದಿರ್ದಳೊ ಕಾಂತೆ ರಂಗದೊಳ್॥೪೨

ಅಂತು ನಿಂದು ನೃತ್ಯೋಪನಯನಮುಮಂ ಪೂರ್ವರಂಗಪ್ರವಾಣಮನೊಡರ್ಚಿ॥೪೩

ಪಸಲೆಯ ಮೇಲೆ ತಟಲ್ಲತೆ।
ಪಸರಿಸಿದಪುದಾಲಿವರಲನೆಂಬಿನಮಾಗಳ್॥
ಪಸುರ್ವರಲ ಜಗಲಿಯೊಳ್ಪಸ।
ರಿಸಿದಳ್ ಪೊಂಬಣ್ಣದಬಲೆ ಕುಸುಮಾಂಜಲಿಯಂ॥೪೪
ಮದನಾನುರಾಗಮಂ ಬೀ।
ಱಿದವಳೊ ಸಭೆಗೆನೆ ಸುವರ್ಣಪುಷ್ಪಾಂಜಲಿಯಂ॥
ಕೆದಱಿದಳಾವಧು ಮದನನೆ।
ಕೆದಱಿದಪೊಲ್ತನ್ನ ಪೊನ್ನ ಪೊದೆಯಂಬುಗಳಂ॥೪೫

ಆಗಳವನದ್ಧವಾದ್ಯವಿದ್ಯಾವಿದಗ್ಧನಪ್ಪ ವಾದಕಂ ಕೈಯೆ ಮನವಾ

ಗೆ ಕುಡುಪೆ ನಾಲಗೆಯಾಗೆ ತಾಳಾನುಗಮಂ ಕಱಗೆಲೆಯು ಮೇಲೆ ನುಣ್ಮ ಬಲಂ ಬಿಡದೆ ಸುರಿವಂತೆ ಗೀತಾನುಗವಾಗೆ ಬಿಡದೆ ಬಾಜಿಪಾಗಳ್‖೮೬

ಮನದಿಂ ಭಾವಮುದೀರ್ಣಮಾಗೆ ಮುಖದಿಂ ಕೈಗಣ್ಮೆ ಹಾವಂ ವಿಲೋ। ಚನದಿಂ ಪೊಣ್ಮೆ ವಿಲಾಸಮೊತ್ತರಿಸೆ ಪುರ್ಬಿಂ ವಿಭ್ರಮಂ ಕಿಂಕಿಣೀ‖ ನಿನದಂ ಗೀತದ ಮೆಯ್ಗೆ ಬಾಜಿಪ ಲಯುವ್ಯಕ್ತಾಕ್ಷರವ್ಯಕ್ತಿಯಿಂ। ಜನಸಂಮೋಹನಮಾಗೆ ದೇಸೆವಡೆದತ್ತಾ ನರ್ತಕೀನರ್ತನಂ‖

ಕಳಶಸ್ತನಿಯು ನಿಪರ್ತನ।
ವಳನಾದಿಗಳೆನಿಪ ನವವಿಧಾಳೋಕದೊಳ‖
ಗ್ಗಳಿಸುವ ವಿಲಾಸರಸದೊಳ್।
ಮುಱುಗಿದುದು ಸಭಾಮನೋಮರಾಳಕದಂಬಂ‖೮೮

ರಸವೃತ್ತಿ ಸಭೆಗೆ ಮೋಹನ।
ರಸವೃತ್ತಿಯನೀಯೆ ವಿಭ್ರಮಂ ವಿಭ್ರಮಮಂ‖
ಪಸರಿಸೆ ವಿಲಾಸವತಿ ನ।
ರ್ತಿಸಿದಳ್ ಕಂದರ್ಪಸಾಯಕಂ ನರ್ತಿಪವೋಲ್‖೮೯

ಚಿತ್ತಮನವಯವದಿಂ ಮೂ।
ವತ್ತೆರಡುಂ ತೆಱದ ಚಾರಿ ಚಾರಿಸೆ ತಮ್ಮೊಳ್‖
ಪತ್ತಿಸಿದುವು ದೃಷ್ಟಿಗಳಂ।
ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್‖೯೦

ನಿಱಿದಳರೆಲರಲಪಿಂ ಪಲ।
ತೆಱದಿಂ ಪೊಳಪಂತೆ ಸಂಯುತಾಸಂಯುತಮಂ‖

೧. ಪೊಳೆವಂತೆ. ಕ‖ಗ‖

ಬಱುವತ್ತುನಾಲ್ಕುಹಸ್ತದ ।
ಕೆಱನೊಳ್ ತೆಱನಱಿದು ಮೆಱೆದಳವಳಭಿನಯಮಂ ॥ ೫೧

ಚರಣನಿತಂಬಗ್ರೀವಾ ।
ಕರಶಾಖಾಜನಿತರೇಚಕಂ ನಯನಮನೋ ॥
ಹರಮಾಗೆ ನೃತ್ಯವಿದ್ಯೆಯೆ ।
ಪರಿಜಂ ಕೈಕೊಂಡುದೆಂಬಿನಂ ಸೊಗಯಿಸಿದಳ್ ॥ ೫೨

ಅಯ್ದುಂ ಪದಪ್ರಚಾರಮು ।
ಮಯ್ದುಂ ತೆಱದೂರುವಳನಮುಂ ಜಂಘೆಯೊಳಾ ॥
ದಯ್ದುಂ ಚಳನಮುಮಿಪ್ಪ ಪದಿ ।
ನಯ್ದುಂಬುಗಳಾಮುವತನುಗೆನೆ ನರ್ತಿಸಿದಳ್ ॥ ೫೩

ಅತಿವಿಷಮುವೆನಿಪ ತಾಳದ ।
ಗತಿಯೊಳ್ನೂಱೆಂಟು ತೆಱದ ಕರಣಂಗಳ ಸಂ ।
ಗತಿ ದೇಸೆವಡೆಯೆ ಪಡೆದಳ್ ।
ಲತಾಂಗಿ ನೃಪಸಭೆಗೆ ವಿಪುಲಪುಲಕೋದ್ಗಮುಮಂ ॥ ೫೪

ಇಪ್ಪ ಮೂವತ್ತೆರಡಂಗಹಾರಮಿಪ್ಪ ನಾನಾಭೇದಭಾವಾನುಭಾ ।
ವವಿಭಾವಕ್ರಮಮೆಂದು ಕೇಳಿ ನುಡಿಯಲ್ಬಕ್ಕುರ್ಗಂ ಯಥಾಸ್ಥಾನಸಂ ॥
ಭವಮಪ್ಪಂತಿರಲಿಂತು ನರ್ತಿಸುವರಾರೆಂಬನ್ನೆಗಂ ಲೋಚನೋ ।
ತ್ಸವಮಂ ಚಿತ್ತವಿಕಾಸಮಂ ಪಡೆದುದಾಲೀಲಾವತೀನರ್ತನಂ ॥ ೫೫

ಮನದ ತೊಡರ್ಪು ಲೋಚನದಡರ್ಪಲರಂಬಿನ ಕೂರ್ಪು ಸರ್ಪ
ರೋ । ಹನರಸದಿರ್ಪು ಚೇಟದ ಪೊಡರ್ಪಭಿಮಾನದ ನಟ್ಟ ತುರ್ಪು
ಳಾ ॥ ಮನ ಕರವಾಳಕೂರ್ಪು ವಿರಹಾಹಿಯ ಕೊಳ್ವ ಪಸುರ್ಪು ಜೀ
ಯು ಭಾಪೆನಿಸಿದುದಂಗಹಾರಕರಣಾಭಿನಯಂಗಳ ನೇರ್ಪು ನೀಱೆಯಾ॥

ಸ್ಮರವಿಜಯುಕ್ಕಿದೆ ನಿರ್ವಾ।
ಣರೇಖೆಯೆನೆ ಮಸಗಿ ಮದನಮದಕರಿ ವಿಸಟಂ ॥
ಬರಿದುದೆನೆ ಕಾಮನೇಸಿನ।
ಪರಿಣತಿಯೆನೆ ತರುಣಿ ಬಹುವಿಧಂ ನರ್ತಿಸಿದಳ್ ॥೫೭

( ತರಳವೃತ್ತ )

ಮದನಮೋಹನಮಂತ್ರನಾದಮೊ ಸೇತುಗಟ್ಟದ ಕಾಮಸಂ।
ಮದಸುಧಾಬ್ಧಿತರಂಗನಾದಮೊ ಲೋಕಮೆಲ್ಲಮನಿಕ್ಕಿ ಮೆ॥
ಟ್ಟದ ಮನೋಭವಸಿಂಹನಾದಮೊ ಪೇೞೆನಲ್ ರಸಗೀತದೊಳ್।
ಪುದಿದು ವಾದ್ಯದೊಳೊಂದಿ ತಟ್ಟುದು ಕಿಂಕಿಣೀಕಳಝುಂಕೃತಂ ॥೫೮

ನುಂಗಿದುದು ಸಕಲರಸಮಂ।
ಶೃಂಗಾರರಸಪ್ರವಾಹಮೆನೆ ಜನದ ಮನೋ॥
ರಂಗಪ್ರತಿಷ್ಠೆ ರತಿಗಾ।
ಯ್ತಂಗಜನಿಂದೆನಿಸಿದತ್ತು ಸಂಗೀತರಸಂ ॥೫೯

ಅಂತಪಾರಸುಖಸುಧಾರಸಮೆನಿಪ ಸಂಗೀತಪ್ರಸಂಗದೊಳ್ ॥೬೦

ಅಳಿನೀಝುಂಕಾರಸಾರಂ ಪಸರಿಸೆ ರಸಗೀತಂ ಸುಧಾಂಭೋಧಿನಾ
ದಾ। ಕಳಿತಂ ಕೈಗಣ್ಮೆ ಗೀತಾನುಗಲಯಲಲಿತಾತೋದ್ಯನಾದಂ ತಟ
ಚ್ಛಂ॥ ಚಳಲಾಸ್ಯಂ ಗೀತವಾದ್ಯಾನುಗವಭಿನಯಮಂ ಬೀಱೆ ಚೆಲ್ವಾ
ದುದುದ್ಯ । ತ್ಪುಳಕವ್ಯಾಸಂಗಸಂಗೀತಕರಸಲಹರೀರಂಗವಾಸ್ಥಾನ
ರಂಗಂ ॥೬೧

ಮದನೋನ್ಮಾದವಿಧಾನಮಂಗಜಬಲಪ್ರಕ್ಷೋಭಮುದ್ರಾಕೃತಂ।
ಮದಿರಾದರ್ಪಮಯಂತ್ರಮುಕ್ತಮದನಾಸ್ತ್ರಂ ಕಾಮಸಾಮ್ರಾಜ್ಯ
ಸಂ॥ ಮದಪರ್ವಂ ಮದನಗೃಹಾವತರಣಂ ಪೋಗಿಂತಿದೆಂಬಂತು ಪೆ
ರ್ಚಿದ ಸಂಗೀತಸುಧಾತರಂಗಿಣಿಯೊಳೋಲಾಡಿತ್ತುರಾಜನ್ಯಕಂ ॥೬೨

ಅಂತತಿಶಯಮೆನಿಪ ಸಂಗೀತಕಪ್ರಸಂಗದೊಳ್ ॥೬೩

ಹರ್ಷದೊಡನೊಡನೆ ಪುಳಕೋ।
ತ್ಕರ್ಷಮನೊಡರಿಸಿದ ಕುತುಕಿಗಳ್ಗೆ ವಿಭೂಷಾ॥
ವರ್ಷದೊಡನೊಡನೆ ಕಾಂಚನ।
ವರ್ಷಂ ಕಱೆವತ್ತು ದಾನಮೇಘದಿನಾಗಳ್ ॥೬೪

ಅಂತು ಸಾಮಾಜಿಕಸಮಾಜಮುಂ ಜಗಜ್ಜನದಾರಿದ್ರ್ಯನಿದಾಘಕನಕಮೇಘನನೂನದಾನದಿಂ ತಣಿಪಿ ಮಾನ್ಯರಾಜನ್ಯಕಮುಂ ತಾಂಬೂಲದಾನಪುರಸ್ಸರಂ ವಿಸರ್ಜಿಸುವುದುಮಾಪ್ರಸ್ಥಾವದೊಳ್ ॥೬೫

ನಾನಾಭೂಷಣಕಿರಣಾವಿ।
ತಾನಂ ಕಣ್ಗೊಳಿಸೆ ನಿಯಮಿತಾಸನದಿಂದೆ॥
ಜ್ಞಾನತಕಿರೀಟರವನಿಪ।
ಸೂನುಗಳಾಸ್ಥಾನರಂಗದಿಂ ಪೊಱಮಟ್ಟರ್ ॥೬೬

ಅಲ್ಲಿಂ ಬಱಿಯಂ ॥೬೭

ನಗೆಗಣ್ಣೊಸೆ ವಿಳಾಸಮುಂ ನಗೆಮೊಗಂ ಲಾವಣ್ಯಮುಂ ಬೀಱೆ ಸಾ।
ವಗಿಸುತ್ತುಂ ಕಚಬಂಧಮುಂ ಶಿಥಿಲನೀವೀಬಂಧನಮುಂ ಕಾಂಚಿಯೊಳ್॥
ತೆಗೆಯುತ್ತುಂ ಪ್ರಣಯಾನುಬಂಧಮುಖಿಲೋರ್ವೀಶಂಗೆ ಶೃಂಗಾರಚೇ।
ಷ್ಟೆಗಳಂ ಕಣ್ಗೆಸೆದಿರ್ದುದೆರ್ದು ಕೆಲದೊಳ್ನಿಂದಿರ್ದ ಕಾಂತಾಜನಂ॥೬೮

ಅದಲ್ಲದೆಯುಂ ॥೬೯

ಪುಳಿನದೊಳಾಡುಮಂಚೆಗಳ ನುಣ್ಬರದುಳೆ ನಿತಂಬಬಿಂಬಮುಂ।
ಬಳಸಿದ ನೂಲ ತೊಂಗಲುಲಿ ಕೈಮಿಗೆ ತಾವರೆಯೊಳ್ಪರಾಗಪಾಂ॥

೧. ಅಂತನತಿಶಯಂ.ಕ॥ ೨. ಕುತಪಿ.ಕ॥, ಕುತುಕಿ, ಗ॥

ಸಳವೆುಳದುಂಬಿಗಳ್ಮೊಱೆವವೊಲ್ಪದನೂಪುರಹೇಮಕಿಂಕಿಣೀ।
ಕಳರವಮುಣ್ಮೆ ಬಾಲೆಯರದೇಂ ಪೊಱಮಟ್ಟರೊ ನಾಟ್ಯಶಾಲೆಯಿಂ ॥

ಕೆದಱಿದ ಕಪ್ಪುರವಳುಕಿಂ।
ಸುದತಿಯುರಲತಗೆಯ ವಜ್ಜೆಯಿಂ ಮುಡಿಯಿಂ ಸೂ॥
ಸಿದ ಪುಷ್ಪಮಾಲೆಯಿಂದೆಸೆ।
ದುದು ಚಿತ್ರಿಸಿದಂತೆ ಮಧ್ಯಮರಕತರಂಗಂ ॥೭೧

ವಾರವಿಲಾಸಿನೀಚರಣನೂಪುರನಾದ ನಿತಂಬಸೂತ್ರಘಂ।
ಟಾರುತಿ ಯಕ್ಷಕರ್ದಮಮೃಗೋದ್ಭವಚಂದನದಿವ್ಯಸೌರಭಾ ॥
ಸಾರಸಮೀರಣಂ ಕಥಕಗಾಯಕವಾದಕವರ್ಣನಂ ಪ್ರತೀ।
ಹಾರಕತರ್ಜನಂ ಪರೆವಿನಂ ಪರೆದತ್ತು ನರೇಂದ್ರನೋಲಗಂ ॥೭೨

ಅಂತೋಲಗಮಂ ವಿಸರ್ಜಿಸಿ ॥೭೩

ಜನನಾಥಂ ವಶ್ಯಾಂಜನ।
ಮೆನಿಸಿದ ಕರವಾಳ ಪೊಳೆವ ನುಣ್ಬೊಗರಿಂದಂ ॥
ತನಗೆ ಬಸಂಮಾಡಿ ಜಯಾಂ।
ಗನೆಯಂ ನೊಬಗಿಂಗೆ ನಾಡೆಯುಂ ಮುಯ್ಯಾಂತಂ[1] ॥೭೪

ಆಮಹೀಭುಜನ ಭುಜಪ್ರತಾಪವಜ್ರಪಾತದಿಂ ಪರನರಪತರುಪ್ರನ್ಮೂಲವಾಗೆಯುಂ ರಿಪುಕದಂಬನಾಟಕಸೂತ್ರಧಾರಿಯ ಗಜಘಟಾಬೃಂಹಿತದಿಂ ಜಯಶ್ರೀಕಲಾಪಿನೀಲಲಿತಲಾಸ್ಯಮೆಸೆಯೆಯುಂ ಕರವಾಳ ಭೈರವನ ಬಾಹುದಂಡಮಂಡಲಾಗ್ರವಿದ್ಯುದ್ವಿಳಾಸದಿಂ ವಿರೋಧಿಬಳಮರಾಳಮಂಡಳಂ ಭಯಚಕಿತವಾಗೆಯುಂ ದಾನವಿನೋದನ ದಾನ

೧. ಮುಯ್ಯಾಂತಂ. ಕ॥ಗ॥

ವರ್ಷದಿಂ ವಿಬುಧದ್ರುಮಕದಂಬಮಂಕುರಿತಮಾಗೆಯುಂ ಜಗಜ್ಜನದಾರಿದ್ರ್ಯನಿದಾಘಕನಕಮೇಘನ ದಯಾರಸಪ್ರವಾಹದಿಂ ಜನಾನುರಾಗರಸತರಂಗಿಣಿ ನೆಲೆವೆರ್ಚೆಯುಮಿಂತು ಸಾರ್ವಕಾಲಿಕಮಾದ ನೃಪಚರಿತಮೆಂಬ ಮೞೆಗಾಲಮನೋಲಗಿಸುವಂತೆ ॥೨೫

ಮುಗುಳ ತೆಱಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಸುೞಿ ಪುಟ್ಟೆ ಪುಟ್ಟೆಕೇ ! ದಗೆಗೆಳಸೊರ್ಕು [1]ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮಂ ॥ ಚೆಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸು ಪುಟ್ಟೆ ಬೆಟ್ಟಬೇ । ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ ॥೨೬

ಪರಿತಾಪಂ [2]ಕಿಡೆ ಪುಳಕಾಂ ।
ಕುರಮೊದವೆ ಲತಾಂಗಮೊಳ್ ನದೀಲೋಚನೆಗಂ ॥
ವಱೆಗಾನಂದಾಶ್ರುಗಳು ।
ಬ್ಬರಮಾದುವು ಪಶ್ಚಿಮಾನಿಳಂ ಸೋಂಕಲೊಡಂ ॥೨೭

ಪಸುರ್ಗವಿಲನಾದ [3]ನೀಪದ ।
ಕುಸುಮಮುಮೆಣ್ದೆಸೆಗೆ ಕಂಪನೆತ್ತುವ ಲೋಧ್ರ ॥
ಪ್ರಸವಮುಮಂ ಸೂಱೆಗೊಳ್ಳೆಱೊಳ್ ।
ಪಸವಟ್ಟಂದದೊಳೆ ಮುಸುಱೆ ಮುತ್ತಿದುವಳಿಗಳ್ ॥೨೮

ತಿಳಿಗೊಳದ ಸುತ್ತಲುಂ ಕ ।
[4]ಣ್ಗೊಳಿಸಿತು ತಳತಳಿಸುವೆಳಗಱುಂಕೆಯ ಗಱುತೆ॥

೧. ಬೆಕ್ಕರಿಸೆ.ಗ॥ ೨. ಗಡೆ.ಕ॥, ೩. ನೆಯ್ದಿಲ.ಕ॥, ನೀರದ. ಗ॥
೪. ದುಸೆಳದಳಿಸು.ಕ॥ಗ॥

ೞ್ತೆಳವಸೆಲೆ ಪೂರ್ಣಶಶಿಮಂ ।
ಡಳಮಂಡನಮಾದ ಹರಿತಪರಿವೇಷದವೊಲ್ ॥೭೯

ರತಿಯ ಕಟಾಕ್ಷದೊಳ್ಸೆಣಸೆ ತನ್ನ ಪೊದೞ್ದೆಸಲ್ಗಳ್ಮಧುವ್ರತ ।
ಪ್ರತತಿಯನಾತ್ಮಸೌರಭದ ಸಂಕಲೆಯಿಂ ಸೆಱೆಗೆಯ್ದು ಕಂತುನಿ ॥
ರ್ಜಿತಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತೆ ವೀಕ್ಷಣಾ ।
ವೃತಮಯಕಂವಳಂ ಪೊಸತೆರಲ್ದುದು ಕೇದಗೆ ಮೇಘಕಾಲದೊಳ್ ॥

ಅಂತು ಘನಸಮಯಪ್ರವೇಶಮ[೧]ಖಿಲಭುವನಜನಮನೋವಿಕಾಸಕ್ಕ ವಕಾಶಮಾಗೆ ॥೮೧

ಅಪರಾಂಭೋರಾಶಿವೇಳಾವನಮುಮರಪುರೋದ್ಯಾನಮುಂ ನೋಡ ಲೇೞ್ತಂ । ದಪ್ಪುದೋ ನೀಲಾಚಲಂಗಳ್ಕುಲಪರಿಭವಮಂ ಪಿಂಗಿಸಲ್ನಾ ಕಲೋಕಾ । ಧಿಪನೊಳ್ಮೇಲಿತ್ತು ಕಾದಲ್ಕೆಱೆದುವೊ ವಡವಾಭೀತಿಯಿಂ ಮೇಣ್ಮಱೆವೊ । ಕ್ಕಪುದೋ ನೀರಾಕರಂ ವ್ಯೋಮಮನೆನೆ ನೆಗೆದತ್ತಂ ದು ನೀಳಾಭ್ರಜಾಳಂ ॥೮೨

ಪಡುವಣ ಕಡಲಿಂದೊಗೆದುದು ।
ಬಡಬಾಗ್ನಿಯ [೨]ಪೊಗೆ ಪೊದಳ್ದು ಕಿಡಿವೆರಸೆನಲೇಂ ॥
ಕುಡುಮಿಂಚುವೆರಸು ಗಗನಮ ।
ನಡರ್ದುದು ನೀರಂಧ್ರನೀಳನೀರದನಿವಹಂ ॥೮೩

[೩]ಪೊತ್ತುವ ವಡವಾಗ್ನಿಯ ಪೊಗೆ ।
ಸುತ್ತಿದೊಡುಮ್ಮಳಿಸಿ ಕರ್ಗಿ ಪಡುವಣ ಕಡಲೊಳ್ ॥
ನಿತ್ತರಿಸದೆ ನೆಗೆದುವು ಜಳ ।
ಮುತ್ತಿವ್ವಿವಘಟಿಗಳೆನಿಸಿದುವು ಘನಘಟೆಗಳ್ ॥೮೪

೧. ಮಖಿಲಜನ್ನ, ಗ॥ ೨. ಪೊಡ್ಮೆ, ಗ॥ ೩. ಪೊತ್ತಿದ, ಗ॥

ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ತೋರ
ಣಂಗ । ಟ್ಟಿದುದೋ ಮೇಣ್ಪಂಚರತ್ನಾವಳಿವಿಲಸಿತಮಂ ಕಂಠಿಕಾ
ಮಾಲೆಯಂ ಕ । ಟ್ಟಿದಳೋ ದಿಗ್ದೇವಿ ಮೇಣ್ ರನ್ನದ ಪೊರಜೆ
ನವಾಂಭೋದಮಾದ್ಯದ್ಗಜಕ್ಕಿ । ಕ್ಕಿದುದೋ ಪೇೞೆಂಬಿನಂ ಕಣ್ಗೆಸೆ
ದುದು ಶಬಳಚ್ಛಾಯೆಯಿಂ ಶಕ್ರಚಾಪಂ ॥೮೫

ವಸುಧಾವಲ್ಲಭೆ ಮೇಘಕಾಲವಿಟನೊಳ್ಸಂಭೋಗಮಂ ಮಾಡೆ ಬ ।
ಣ್ಣಸರಂ ಪೊರ್ಕುೞಿಯಿಂದ[1][ಮೇ]ಪಱಿದು ಸೂಸಿತ್ತಲ್ಲದಂದೆತ್ತಣಿಂ ॥
ಪೊಸಮುತ್ತಂ ಕಿಸುಗಲ್ಗಳುಂ ಕೆದಱಿ ಕಣ್ಗಂಬಾದುವೆಂಬಂತದೇ ।
ನಸೆದೊಪ್ಪಿರ್ದುವು ಸೂಸಿದಾಲಿವರಲುಂ ತೆಱ್ತಿಂದ್ರಗೋಪಂಗಳುಂ ॥

ನೆಗೆದ[2] ಮುಗಿಲ್ವೊಯ್ಲಿಂ ತಾ ।
ರಗೆಗಳ್ಪರಿದೊಡೆದು[3] ಸೂಸಿದವ್ವೆನಲ್ ಮಿಂ ॥
ಚುಗಳಕ್ಕುವ ತತ್ತಿಗಳೆನ ।
ಉಗುತಂದುವು ತುಱುಗಿ ತೋಱುವನಿ ಪೊಸಗಾರೊಳ್ ॥೮೬

ತೀಡುವ ಪಶ್ಚಿಮಾನಿಳನ ತೀಟದೊಳುತ್ಕಟಮಾಗೆ ರಾಗಮಿ ।
ರ್ಪೊಡಿದ ಚುಂಚುಮಂ ತೆಱೆದೆಱಂಕೆ ಸಡಿಲ್ದಿರೆ ಕಂಠನಾಳಮಂ ॥
ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ವನಿಯಂ ಮನಂ ಕುಳಿ ।
ರ್ಕೊಡುವಿನಂ ಕ*ರ್ದುಂಕಿ ನಲಿದಾಡಿದುದಾಡಿದುದೊಂದು ಚಾತಕಂ ॥

ರಾಗದ ಬಳ್ಳಿ ಚಾದಗೆಗೆ ಕಾಂಚನಚಂಚಳಲಾಸ್ಯನಿರ್ಝರಂ ।
ಸೋಗೆನವಿಲ್ಗೆ ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ ॥
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್[4] ನಭೋ ।
ಭಾಗದೊಳಂದು ಬಿತ್ತರಿಸಿದತ್ತು ತಟಲ್ಲತೆ ಲಾಸ್ಯಲೀಲೆಯಂ ॥೮೭

೧. ಲೇಂ.ಕ॥ಗ॥ ೨. ನೆಗೆದು ಮುಗಿಲೊಯ್ಲಿಂ.ಗ॥ ೩. ಳ್ಬರಿ.ಕ॥ ೪. ಯಿಂ.ಕ॥

ಬಿಡೆ ಕೆಮ್ಮನೆ ಗರ್ಜಿಪ ತೆ ।
ಕ್ಕಡೆ ತಗದೆಡೆಯೆನ್ನದೆಱಗುವಸ್ಥಿರವುಪ್ಪಾ[1] ॥
ಜಡಮುಚಿರಪ್ರಭೆ ನಿಮಿಷದೊ ।
ಳಡಂಗುಗುಂ ಬೆಳಗದೆಂ[2]ದುಮದು ಸತ್ಪಥಮಂ ॥೯೦

ಘನಗರ್ಭಾಶಾವಧೂಪ್ರಂಸವನದೆಸೆವ ತೂರ್ಯಸ್ವನಂ ಚೊಳಿಕಾ
ವ । ರ್ಧನವಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ
ವಿಡೂರಾ ॥ ವನಿಯೊಳ್ವೈಡೂರ್ಯರತ್ನಂ ಜನಿಯಿಸೆ ನೆಗಳ್*ದಾನಂದ
ಭೇರೀರವಂ ತಾ । ನೆನೆ ರೋದೋಭಾಗದೊಳ್ಪೂರ್ಣಿಸಿದುದಭಿನವಾಂ
ಭೋದಗಂಭೀರನಾದಂ ॥೯೧

ಘನನಿನದಂ ಭಯರ[3]ಸಮಂ ।
ಜನಿಯಿಸೆ ನೆನೆಯಿಸಿದರಂದು ಕಳಹಂಸಕುಟುಂ ॥
ಬಿನಿಯಂ ಪ್ರಿಯವಿರಹಾಲಂ ।
ಬಿನಿಯುಪ್ಪದುವೆನಿಪ ಮನದೊಳಂ ಗಮನದೊಳಂ ॥೯೨
ಘನದೊಡ್ಡಣಕ್ಕೆ ನಿಲಲ ।
ಕ್ಕೆ ನಿದಾಘಂ ಕಾಯ್ಪುಗೆಟ್ಟು ಬೆನ್ನೀವುದುಮಾ ॥
ಱನ ಭೀತಿಗೆ ಬೊಬ್ಬಿಱಿದಪು ।
ವೆನೆ ಪುಡಿದತ್ತೊದವಿ ದರ್ದುರಪ್ರಬಲರವಂ ॥೯೩

ಉಗುಳುತ್ತುಂ ಸಿಡಿಲೆಂಬ ತೋಱಕಿಡಿಯಂ ಕಾಲೂಱಿ ಭೂಭಾಗ
ದೊಳ್ । ಗಗನಾಭೋಗಮನೆಯ್ದೆ ನೀಳ್ದ ಘನವೇಣೀಬಂಧಮಂ ಬಿ
ರ್ಚಿ ಮಿಂ ॥ ಚುಗಳೆಂಬುಳ್ಕುವ ದಾಡೆಗಳ್ಪೊಳೆಯೆ ಚಂದ್ರಾದಿತ್ಯರಂ

೯೩. ದರ್ದುರ- ಕಪ್ಪೆ.

೧. ರನಪ್ಪಾ॥ಜಡನಬೆ.ಕ॥ಗ॥ ೨. ದೆಂತು. ಕ॥ ೩. ಪಶದಿಂ, ಕ॥ ಪಶವಿಂ. ಗ॥

ನುಂಗಿ ಬೇ। ಸಗೆಯಂ ಬೆರ್ಚಿಸಿ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ॥೯೪

ಮದಮುದಿರಾಪ್ರಮತ್ತನ ಜಡಾಶಯದಂತೆ ಜಡಾಶಯಂ ಕಲಂ।
ಕಿದುದು ಮನೋಜದೀಪಕಳಕಾನನದಂತಿರೆ ಕಾನನಂ ಕಱು॥
ಗಿದುದು ವಿರೋಧಿವಾಹಿನಿಗಳಂತಿರೆ ವಾಹಿನಿಗಳ್ಕಡಂಗಿ ಮೀ।
ಱಿದುವನುಕೂಲಮಾರ್ಗವನದೇಂ ಮುಱಿಗಾಲಮಳುಂಬಮಾದುದೋ! ॥

ನವವಿಧಮಪ್ಪ ಕಣ್ಬೊಳೆಪು ರಂಜಿಸೆ ಸಂಚಳತಾಂಗಹಾರದಿಂ।
ವಿವಿಧಘನಸ್ವನಕ್ಕೆ ನವಿಲಾಡೆ ಘನಾಗಮಲಕ್ಷ್ಮಿ ಕೇತಕೀ॥
ಧವಳಕಟಾಕ್ಷೆ ಕಂಡು ರಸಮುಗ್ನತೆಯಿಂ ಪುಳಕಾಂಕುರಂಗಳ॥
ತ್ಯವಿರಳಮಾಗೆ ಕೊಟ್ಟಳಚಿರಪ್ರಭೆಯೆಂಬ ಸುವರ್ಣಮಾಲೆಯಂ ॥೯೬

ಇಂದೀವರೆನಿಸಿದ ತನಿರಸ।
ದಿಂದೊದವಿದ ನೀಳಪಾಟಳಚ್ಛವಿಯಿಂ ನು॥
ಣ್ಪಿಂದೆಸೆವರನೇಱುಲ ವ।
ಣ್ಣಂದರಗಿಳಗಾಮ್ರದೊಲವನೇಂ ತೊಲಗಿಸಿತೋ ॥೯೭

ಮಾಕಂದಂ ಫಲಹೀನಮಾದ ಪದದೊಳ್ಜಂಬೂಫಲಾಸ್ವಾದನ।
ಸ್ವೀಕಾರೋತ್ಸವದಿಂದದಂ ಮಱೆವ ಕೀರಪ್ರಾಥಿಯಂ ಕಾಣ್ಬುದ॥
ಲ್ತೇಕಗ್ರಾಹಿ ಕನಲ್ದು ಚೂತಕಳಿಕಾಸ್ವಾದವ್ಯವಚ್ಛೇದದಿಂ।
ಮೂಕೀಭಾವಮನಪ್ಪುಕೆಯ್ದುದು ವಿವೇಕವ್ಯಾಕುಳಂ ಕೋಕಿಳಂ॥

ಪಸುರ್ವುಲ್ಲುಂ ಮೇದು ಸಂದೊಂದೆಸೆಯೊಳಮೊಡಲಿಂಬಿಲ್ಲೆನಲ್ ಕೊರ್ಬಿ ಕೆಚ್ಚು। ಲ್ಕುಸಿವನ್ನಂ ಪೆರ್ಚೆ ಪಾಲಂಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ ॥ ಪೊಸಗಾರೊಳಾತ್ತರಲೊಳ್ ಕಣ್ಣರೆಮುಗು

ಚ್ಛಿದ್ರೆ ಸೃಕ್ವಂಗಳಿಂ ಸೂಸೆ ಫೇನ। ಪ್ರಸರಂ ಮೆಲ್ಕೊತ್ತುತ್ತುಂ ನಿಂದುದು ವನಮಹಿಷೀವೃಂದಮಾನಂದದಿಂದಂ॥೯೯

ಸುರಿವ ಮಱಿಗಳ್ಕೆ ಗಿರಿಕಂ।
ದರದೊಳ್ ಮಡಗಿಟ್ಟು ತಮ್ಮ ಶಾಬಕದಂಬ॥
ಕ್ಕರೆಗರ್ಚೆ ಹರಿತದೂರ್ವಾಂ।
ಕುರಮಂ ಕೊಂಡುಯ್ದ[1]ಂದು ಹರಿಣೀಯೂಥಂ॥೧೦೦

ಘೋರೆಂದೆಱಗುವ ಜಲಧರ।
ಧಾರಾಪುಷ್ಕರದಿನಾತ್ಮಕರಪುಷ್ಕರಮಂ॥
ಪೂರಿಸಿ ಸಿಂಪಿಣಿಯಂ ಕಾಂ।
ತಾರದೊಳಾಡಿದುವು ಕರಿಗಳುಂ ಕರಿಣಿಗಳುಂ॥೧೦೧

ಅಂತಪಗತಹೀನಾಧಿಕಸ್ವಭಾವಮೆನಿಪ ಘನಸಮಯಮನತಿಕ್ರಮಿಸಿ ಮೊಲ್ಲೆ ಪೂಗುಡಿಯುಂ ಪಲ್ಲಟಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ ಚಾದಗೆ ನವೋದಬಿಂದುಕಣಭಕ್ಷಣವ್ರತಮನುಜ್ಜೈಯಿಸೆಯುಂ ಸೋಗೆನವಿಲ ಪಿಂಡು ತಾಂಡವಕ್ಕಲಸೆಯುಂ ಹಂಸಮಂಡಳಿ ಮೃಣಾಳಕಾಂಡಮಂ ಸವಿದು ಸೊರ್ಕೆಯುಂ ಗಿರಿ ದರೀವನಕ್ಕೆ ನಿರ್ಝರಜಲಾಭಿಷವಣಮನೊಡರ್ಚೆಯುಂ ಪೊನ್ನೆ ಪೊಸನನೆಯ ಪಸದನದಿನೆಸೆಯೆಯುಂ ಪೊಂದಾವರೆಯಮಂದಮಕರಂದದಿನಳಗೆ ಬಳಯಟ್ಟೆಯುಮತಿಪ್ರಕಾಶಮಾದ ಶರತ್ಪ್ರವೇಶದೊಳ್॥೧೦೨

ಪೆರೆಯಿಕ್ಕಿ ಪೋದುವಚಿರಾಂ।
ಶುರಸನಘನಕಾಲವಿಷಧರಂಗಳ್ ಗಗನೋ॥

---

೧. ಉಯ್ದುದೋದು. ಕ॥

ದರಗಹ್ವರದೊಳೆನಲ್ತರ ।
ತರದಿಂ ಪಸರಿಸಿದುವಂದು ಬಿಳಿಯಮುಗಿಲ್ಗಳ್ ‖೧೦೩

ಇರುಳಿಂದುವಿನೊಡವೋಗದೆ ।
ಶರದದ ಬೆಳ್ದಿಂಗಳಹಿಮಕರಕರತಪ್ತಂ ‖
ತೆರಳೆ ಕೆನೆಗಟ್ಟದಂತಿರೆ ।
ಪೊರೆವೊರೆಗೊಂಡಿರೆ ಮುಗಿಲ್ಪಗಿಲ್ತುವು ನಭದೊಳ್ ‖೧೦೪

ಓವದೆ ಮೀನಮೇಷವೃಷಭಾದಿಗಳಂ ಕ್ರಮದಿಂ ದಿನಾಧಿಪಂ ।
ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನತೇಜಮಿ ‖
ನ್ನಾವುದೊ ಕಜ್ಜಮೆಂದು ತೊಲೆಯಂ ಜನರಂಜನೆಗೇಱೆ ತೇಜಮಂ ।
ಭೂವಲಯಕ್ಕೆ ಬೀಱುವನಿದೇಂ ಪ್ರಭು ಮಾಡಿದ ಮಾಯೆ ಸಲ್ಲದೇ ‖

ಈಂಗಡಲೊಳಗೋಲಾಡುವ ।
ಮೀಂಗಳ ಬಳಗಂಗಳೆಂಬಿನಂ ಶರದದ ಬೆ ‖
ಳ್ದಿಂಗಳಲಾಡಿದುವು ಚಕೋ ।
ರಂಗಳ್ ಚಂದ್ರಾಂಶುಪೂರ್ಣಚಂಚುಪುಟಂಗಳ್ ‖೧೦೬

ಬಳಸಿ ಸುಱಿದಾಡಿ ಕಾಲ್ವಿಡಿ ।
ದೆಳಸಿ ಕಳಾಳಾಪವೊದವೆ ಜನನಿಯ ಮೊಲೆವಾ ‖
ಲ್ಗಳನುಣ್ಬ ಸಿಸುವಿನಂತಿರೆ ।
ಕಳಮೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ ‖೧೦೭

ದೂರದೊಳೀಕ್ಷಿಸಿ ತುಂಗಾ ।
ಕಾರದೊಳೊಂಜಿದ ಋಜುತ್ವಮಂ ೧ಪದೆದೆಳಸಿ ‖

೧. ಪಡೆದೆಳಸಿ. ಕ‖ಗ‖

G.45

ತ್ತಾರಯ್ದು ನೋಡದಂತ !
ಸ್ಸಾರತೆಯುಂ ಕಾಶಕಣಿಶಮುಂ ಶುಕಶಾಬಾ ॥೧೦೮

ಕಿಡಿಸಿ ಕಳಂಕವಂಕದೊದವಂ ಸಮಯೋಚಿತಬಂಧುಜೀವದೊಳ್ ।
ಪಡೆದು ವಿಕಾಸಮಂ ನಿಲೆ ದಿಗಂಬರನಿರ್ಮಲವೇಷವೊಂದೆ ತ ॥
ನ್ನೊಡನನುಕೂಲವರ್ತನೆ ಸರಸ್ವತಿಗಾತಪಯೋಗದೊಳ್ಪಡಂ ।
ಬಡೆ ಶರದಾಗಮಂ ನೆನೆಯಿಸಿತ್ತು ಜಿನಾಗಮದಿವ್ಯಯೋಗಿಯಂ ॥೧೦೯

ಅಂತು ಪಸರಿಸಿದ ಶರತ್ಸಮಯದೊಳೊಂದು ದಿವಸಂ ವೈಶ್ರವಣವಲ್ಲಭಂ ನಿಜರಾಜ್ಯಶ್ರೀಯ ಯೌವನವನಕ್ರೀಡಾಚಲಕ್ಕೆ ದೊರೆಯೆನಿಪ ಕರುಮಾಡದೆರಡನೆಯ ಮರಕತಮಧ್ಯರಂಗದೊಳಿಕ್ಕಿದ ಮಣಿಖಚಿತ ಕನಕಪೀಠದೊಳಿರ್ಪುದುಂ ॥೧೧೦

ಸುಲಿಪೆಳೆಯುಡಕೆಯ ಪೊಗರಂ ।
ಗೆಲೆ ತೋಳ ಮೊದಲ್ ವಲಿತ್ರಯಂ ಕಿತೆ ತಳ್ಪ ॥
ಯ್ದುಲಿಯೆ ಮಣಿವಲಯಮೊರತುಂ ।
ಕೆಲದ ವಿಲಾಸಿನಿಯುರಿಕ್ಕಿದ ಚಾಮರನುಂ ॥೧೧೧

ದ್ವಿಗುಣಿಸೆ ಚಮರಜಮಂ ಪೊಳೆ ।
ವೃಗು*ರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತ ॥
ಳ್ತೊಗೆವಂಶುಮಾಳೆ ಮೇಗ ।
ಣ್ಗೊಗೆಯೆ ಕುಚಾಭೋಗಮಿಕ್ಕಿದರ್ ಚಮರಜಮಂ ॥೧೧೨

ಮನದನುರಾಗಮನೀಕಾ ।
ಮಿನಿ ತನ್ನಂಗೈಯೊಳಿಕ್ಕಿ ತೋಱುವಳರಸಂ ॥

೧. ಮುಂದೆ, ಕ॥ ೨. ಚಮರಜಮಂ, ಕ॥

ಗೆನೆ ಪಿಡಿದಿರ್ದಳ್ ಮಣಿಭೂ ।
ಜನರಂಜಿತಕುಂಕುಮಾಂಗರಾಗಮನೊರ್ವಳ್ ॥೧೧೩

ಮುತ್ತೊವರ್ದಳ್ ॥೧೧೪

ವದನಾಬ್ಜಗಂಧಮಂ ಮೃಗ ।
ಮದಗಂಧಮನೆಂದನೊರ್ವಳ್ ಸೂಚಿಸ್ಸಿಟೊಳ್ ಮಾ ॥
ಣದೆ ಸವಿಸಿ ತುಂಬಿಗಳ್ ಮೃಗ ।
ಮದಶುಕ್ತಿಕೆಯಂ ವಿಲಾಸವತಿ ಪಿಡಿದಿರ್ದಳ್ ॥೧೧೫

ಮದನನ ಕೆಲದೊಳ್ ಪೂವಿನ ।
ಪೊದೆಯಂಬಂ ಪಿಡಿದು ನಿಂದು ರತಿಗಂ ತನಗಂ ॥
ಪುದು ಚೆಲುವೆನೆ ಭುವನ ಪಾ ।
ರ್ಶ್ವದೊಳಿರ್ದಳ್ ಪುಷ್ಪಮಾಲ್ಯಧಾರಿಣಿಯೊರ್ವಳ್ ॥೧೧೬

ಸಿರಿಸದ ಮಾಲೆಯೊಳೊತ್ತರ್ಪ ನೆಯ್ದಿಲ ಮಾಲೆಯೊ ಪದ್ಮಕೋಶದೊಳ್ । ಮೊರೆಯುದೆ ನೀಳ್ದ ತುಂಬಿಗಳ ಮಾಲೆಯೊ ಚಂದನಶಾಟೆನತ್ತಿನಿಂ । ದುರಗಿಯೊ ಪೇೞೆನಲ್ ನೃಪನ ದಕ್ಷಿಣಪಾರ್ಶ್ವದೊಳೊಪ್ಪುತೋರ್ಪ ತ । ತ್ತರುಣಿಯ ಕೈಯ ಖಡ್ಗಲತೆ ಮೂಪಡಿಸಿತ್ತು ಮನಕ್ಕೆ ಮೂರ್ಛೆಯಂ ॥೧೧೭

ಇನಿಸಂ ಚಂದ್ರಮರೀಚಿಮಾಳೆ ಪಗಲುಂ ಮಾಕೊರ್ಗಳ್ಗಮೇ ಬಳ್ಳಿಯಿಂ । ಜನಿಸಂ ನಿಶ್ಚಲಮಾಗಿ ನಿಲ್ಕುಮೆ ವಿಲಕ್ಷ್ಯಂ ತಾನಿದೆಂಬನ್ನಮೋ ॥ ಘನಮಂ ಪುಟ್ಟಿಸಿ ತನ್ನ ದಿಟ್ಟವೆಳಗಿಂ ನುಣ್ಪಿಟ್ಟ ಕೊಟ್ಟಳ್ ಘನ । ಸ್ತನಭಾರಾವನತಾಂಗಿ ವಿಸ್ಮಯಪದವ್ಯಾಹಾರಮಂ ಹಾರಮಂ ॥೧೧೮

ಒಂದೆಲೆವೋದಶೋಕೆಯೆರಡೊಳ್ಗುಡಿವೋದ ತಮಾಳಷಂಡದೊಳ್ ।
ಮಂದಸಮೀರನಿಂ ಪೊಳಪವೊಲ್ ತಳಮುಂ ನಳತೋಳುಮಂದಮಂ ॥
ಮುಂದಿಡೆ ಪಿಕ್ಕಿ ಪಿಕ್ಕಿ ಪುಡಿಗತ್ತುರಿಯಂ ತಳದಳ್ ಪೆಚಳ್ ಲತಾ ॥
ಸುಂದರಿ ಕಾಮಪಾಶದವೊಲಿರ್ದವನೀಶನ ಕೇಶಪಾಶದೊಳ್ ॥೧೧೯

ಅಂತು ನಿಜನಿತಂಬಿನಿಯರ ಪಿಡಿದ ಪೊನ್ನ ಸಿಪ್ಪಿನೊಳ್ ರನ್ನದ ಪಡಲಿಗೆಯೊಳನಿರ್ದನರ್ಘರತ್ನಾಭರಣಸುಗಂಧಾನುಲೇಪನಸುರಭಿಸುಮನೋದಾಮಸುರುಚಿರವಸನಂಗಳಿಂದಳಂಕರಿಸಿ ॥೧೨೦

ಪೊರೆಯೆತ್ತಿದ ಬೆಳ್ದಿಂಗಳ ।
ಪೊರೆ ಗಂಗೆಯ ಪೊನಲೊಳೊಗೆದ ತೆರೆ ಶೇಷನ ಮೆ ॥
ಯ್ವೊರೆಯೆನಿಪ ನವದುಕೂಲಾಂ ।
ಬರಕ್ಕೆ ಪರಭಾಗಮಾಯ್ತು ದೇಹಪ್ರಭೆಯಿಂ ॥೧೨೧

ವಿಕಟಮಕುಟಸ್ಫುರದ್ರ ।
ತ್ನಕಳಾಪೋನ್ಮುಖಮಯೂಖಮಂಡಳಿ ಬೇಱೊಂ ॥
ದಕೃತಕಚಿತ್ರಚ್ಛತ್ರ ।
ಪ್ರಕಾರದಿಂ ಮೆಱೆದುದೀಕ್ಷಣಾಕರ್ಷಣಮಂ ॥೧೨೨

ಮರಕತಮಣಿಕುಂಡಳರ ।
ಶ್ಮಿರೇಖೆಯಿಂ ಗಂಡಮಂಡಳಂ ಶೈವಾಳಂ ॥
ಬೆರೆದ ಕನಕಾಬ್ಜದಳದಂ ।
ತಿರೆ ಕಣ್ಗೆಸೆದಂ ನರೇಂದ್ರಚೂಡಾರತ್ನಂ ॥೧೨೩

ಉಭಯಪ್ರಕೋಷ್ಠಶಾಖಾ ।
ಸುಭಗಧನುರ್ಗುಣಕಿಣಂಗಳುಂ ಮಣಿಮುದ್ರಾ ॥

೧. ಪೊಳೆವ, ಖ॥ಗ॥ ೨. ಕ್ಯಪರ, ಕ॥

ಪೃಥೆಯುಂ ಗೆಲೆವುದುವು ಬಾ ।
ಹುಭುಜಂಗನ ಕೊರಲ ಕಱೆಯ ಫಣಾಮಣಿರುಚಿಯಂ ॥೧೨೪
ಉರದಿಂ ತೊಲಗದ ಲಕ್ಷ್ಮ್ರಿಯ ।
ಕರಯುಗಳದೊಳಿರ್ದ ಹಾರನಾಳದ ಬೆಳ್ದಾ ॥
ವರೆವೂಗಳವೆನ್ನದರಾ ।
ರದನನ ಭುಜಶಿಖರಚಂದನಸ್ಥಾಸಕವಂ ॥೧೨೫
ತೊಳಗುವ [1]ನಿಸ್ತುಳಮುಕ್ತಾ ।
ವಳಿ ನೃಪನ [2]ವಿಶಾಳವಕ್ಷದೊಳ್ ಸೊಗಯಿಸುಗುಂ ॥
ಕಳಧೌತಗಿರೀಂದ್ರಶಿಳಾ ।
ತಳದೊಳ್ ವಿಶ್ರಮಿಸಿ ಪೊಳೆವ ತಾರಾ[3]ವಳಿವೋಲ್ ॥೧೨೬
ಕಟ್ಟದ [4]ಪಟ್ಟಕೆಯೊಳೊಡಂ ।
ಬಟ್ಟರೆ ಪೊಂಜಾರಿಗೆ ಪೊಳೆವ ಪೊನ್ನೊಱೆಯ ಬೆಡಂ ॥
ಗಿಟ್ಟಳವೆಸೆದಿರೆ ಮದನನೆ ।
[5]ಬಟ್ಟಗೆಯೊಳ್ ತಿಟ್ಟವಿಟ್ಟವೊಲ್ ನೃಪನೆಸೆದಂ ॥೧೨೭

ಅಂತು ಕಯ್ಗೆಯ್ದು ಕರುವಾಡದ ಮೊಗಸಾಲೆಗೆ ಬಿಜಯಂಗೆಯ್ದು ಮಾಣಿಕದ ಮತ್ತವಾರಣದೊಳಿಕ್ಕಿದ ಮುತ್ತಿನ ಬಿತ್ತರಿಗೆಯೊಳ್ಕಳ್ಳಿರ್ದ ಪೊಳೆವ ಪಳುಕಿನ ಕಂಬಮಂ ಮಲಂಗಿ ಮೇಳದ ವಿಳಾಸಿನಿಯರ ಪರ್ಯಂಕತಳಮಂ ಚರಣತಳದಿನಳಂಕರಿಸಿ ತಾಂಬೂಳವಾಹಿನಿ ಕುಡುವ ಕಪ್ಪುರವಳ್ಳಿಯ ಬಿಳಿಯೆಲೆಯ ವೀಳೆಯಕ್ಕೆ ಕರಸರೋ

೧೨೭. ತಿಟ್ಟವಿಡು- ಚಿತ್ರಪ್ರಾರಂಭೇ.

೧. ನಿಶ್ಚಲ.ಕ॥ ೨. ವಿಲಾಸ.ಕ॥ ೩. ಯೋಲ್.ಕ॥ ೪. ೫. ಪಟ್ಟಿಗೆ.ಗ॥

ಜಮಂ ನೀಡಿ ಮನೋಜಲೀಲೆಯುನವಕರ್ಣಿಸಿ ಕರ್ಣಾಂತವಿಶ್ರಾಂತಲೋಚನಂಗಳುತ್ಸ್ಫುರಿತಂಗಳಾಗೆ ದಿಗವಳೋಕನಂಗೆಯ್ದು॥೧೨೮

ಕಳವೆಯ ಕೆಯ್ವೊಲಂಗಳ ಪಸುರ್ಪು ದಿಶಾಪಟಳಕ್ಕೆ ಪದ್ಮಿನೀ ।
ದಳದ ಪಸುರ್ಪು ಪೆರ್ಗೆಱೆಗೆ ತೆಳ್ತಿಳಪುಲ್ಲ ಪಸುರ್ಪು ಶೈಳಮೇ ॥
ಖಳಿಗೆ ಶುಕಪ್ರತಾನದ ಪಸುರ್ಪು ವಿಯದ್ವಳಯಕ್ಕೆ ಪಚ್ಚೆ[1]ಯಿಂ ।
ವಿಳಸಮನಿಕ್ಕಿದಂತೆಸೆಯೆ ಭೂಪತಿ ಮೆಚ್ಚೆ[2] ಶರದ್ವಿಳಾಸಮಂ ॥೧೨೯

ಅಂತು ಬೆಳ್ಮುಗಿಲ ತೆಳ್ಪಿನಿಂ ಪಳಚ್ಚನಾದ ವಿಯಚ್ಚಕ್ರಮುಂ ಕೆಸರ್ಮಸುಳ್ದು ಪಸಲೆಗವಿದ ಧರಾಚಕ್ರಮುನಾತ್ಮೀಯುಚಿತ್ತಪ್ರಶಸ್ತಿಯುಂ ಪಡೆಯೆ ನಿಜಕ್ರೀಡಾಶೈಲದ ಬಯಲೊಳ್ ನೆಲಸಿ ಚತುರಂಗಬಳಪ್ರಬಳಭಾರಭಗ್ನಭೋಗೀಂದ್ರಫಣಾಸಹಸ್ರಫೂತ್ಕಾರಮುಂ ಕೇಳಲುತ್ಕಂಠನಾಗಿ ಪಡೆಯುಂ ಪಣ್ಣಿ[3] ಬರವೇೞೆಂದು ಬಳಾಧ್ಯಕ್ಷಂಗೆ ಬೆಸಸುವುದುಂ ॥೧೩೦

ಒಡೆದುದೊ ಕೂರ್ಮಪೃಷ್ಠಮಹಿರಾಜವರಿಷ್ಠತನುಪ್ರತಿಷ್ಠೆಯಿಂ ।
ದುಡಿದುದೊ ಶೇಷಕಂಠಕಠಿಣಾಸ್ಥಿ ಧರಾಭರದಿಂ ಕುಳಾಚಳಂ ॥
ಪಿಡಿಗಿದುದೋ ಸಿಡಿಲ್ವೊಡೆದು ಭಾನುರಥಂ ಕೆಡೆದತ್ತೊ ಧಾತ್ರಿಗ ।
ಚ್ಚುಡಿದೆನೆ ತೀವಿದತ್ತು ಗಗನೋದರಮಂ ಘನದುಂದುಭಿಸ್ವನಂ ॥
ಆಧ್ವನಿಯುಂ ಕೇಳಲೊಡಂ ॥೧೩೨

ಘನಘಂಟಾಘೋರನಿರ್ಘೋಷಣಚಕಿತದಿಶಾಸಿಂಧುರಂ ಚಂಚಳತ್ಕೇ । ತನಚಕ್ರಾಚ್ಛಾದ್ಯಮಾನದ್ಯುಮಣಿ ಮದಜಳಾಸಾರಧಾರಾವಳೀದು ॥ ರ್ದಿನಮುದ್ಯತ್ಕರ್ಣತಾಳಾನಿಳಚಕಿತಚತುಸ್ಸಾಗರಂ ಗಾತ್ರ

೧. ಯುಂ.ಕ॥ ೨. ಮೆಚ್ಚಿ.ಕ॥ ೩. ಬರವೇೞ್ದೆಂದು.ಕ॥

ವಿಕ್ಷೇ । ಪನತಕ್ಷೋಣೀತಳಂ ಬಂದುದು ಘನಘಟೆಯುಂ ಮುಟ್ಟಿ ಮ
ತ್ತೇಭಸೈನ್ಯಂ ॥೧೩೩

ಅವಿಧೇಯಕ್ಷತ್ರಸಂವರ್ತನಸಮಯಪರಿಕ್ಷುಬ್ಧವಾರಾಶಿವೀಚೀ ।
ನಿವಹಂ ಮರ್ಯಾದೆಯಂ ದಾಂಟಿದುದೆನೆ ನಿಜಹೇಷಾರವವ್ಯಾಪ್ತರೋ
ದೋ ॥ ವಿವರಂ ಪಲ್ಯಾಣನಿರ್ಯನ್ಮಣಿಕಿರಣತಟದ್ವಲ್ಲರೀವೇಲ್ಲಿತಂ ವಾ ।
ಹವಸಂಖ್ಯಾತಪ್ರವಾಹಂ ನೆಱೆದುದು ಸಮರೋತ್ಸಾಹಸನ್ನಾಹವಾ
ಹಂ ॥೧೩೪

ಗಣನಾತೀತಮೆನಲ್ ಮಹಾರಥಧನುರ್ಜ್ಯಾಘಾತಗಂಭೀರಘೋ ।
ಷಣಮುಜ್ಜೃಂಭಿತಚಕ್ರಚೀತ್ಕೃತರವಂ ಜಾತ್ಯಶ್ವಹೇಷಾಪ್ರತಿ ॥
ಕ್ವಣಿತಾಶಾಮುಖಮುನ್ನಮದ್ಧ್ವಜಪಟಚ್ಛನ್ನಾಂಬರಂ ಬಂದು ಸಂ ।
ದಣಿಸಿರ್ದತ್ತುಸುಹೃದ್ಭಯಾನಕರಸಪ್ರಸ್ಯಂದನಂ ಸ್ಯದನಂ ॥೧೩೫

ಪ್ರಬಳಜ್ಯಾಟಂಕೃತಂ ನಿಷ್ಠುರಗುಣಕಿಣಲೇಖಾಪ್ರಕೋಷ್ಠಂ ದೃ
ಢಸ್ಕಂ । ಧಬೃಹತ್ತೂಣೀರಬಂಧಂ ಶರಧಿಶರತನುತ್ರಾಂಗುಳತ್ರಾಣ
ರೋಚಿ ॥ ಶ್ಯಬಳಂ ಕಲ್ಪಾಂತಕಾಲಭ್ರುಕುಟಿಳಮೆನೆ ಕೋದಂಡದೋ
ರ್ದಂಡಧಾನು । ಷ್ಕಬಳಂ ತೂಗುತ್ತುಮಂಬಂ ನೃಪಭವನಪುರೋ
ಭಾಗದೊಳ್ ನಿಂದುದಾಗಳ್ ॥೧೩೬

ಪರಚಕ್ರವಿಳಯಕಾರಣ ।
ಪರಂಗಳವೆ ಧೂಮಕೇತು ನೆಗೆದುವೆನಲ್ ಭೀ ॥
ಕರವಾದುವು ಕುಂತಂಗಳ್ ।
ವಿರೋಧಿಗಜಕುಂಭಮೌಕ್ತಿಕೋದ್ದಂತಂಗಳ್ ॥೧೩೭
ಅಂತವರಂ ತವೆ ತಿಂಬ ಕೃ ।
ತಾಂತನ ಕುಡುದಾಡೆಯಂತೆ ಕಡಿತಲೆ ಪಲವುಂ ॥

ಕಿಂತಿಣಿಯೆನೆ ಕಲ್ಪಾಂತಕ್ಕೃ ।
ತಾಂತನ ಪಡೆಯಂತೆ ಪಡೆದುದಣಿ ಸಂದಣಿಯಂ ॥೧೩೮

ಅಂತವಿಶ್ರಾಂತವಾದ ನದೀಪ್ರವಾಹವರ್ಷದರಪರ್ವತಂಗಳೆನಿಸಿ ದಿರ್ಪತ್ತೊಂದು ಲಕ್ಕೆ ಭದ್ರಹಸ್ತಿಯುಮುಧ್ವರಥಮುಧ್ವಜಮುಗ್ರ್ಯ ಳೂಕಕಮುಳಭವಬಾಷ್ಪಸಂಭವಂಗಳೆನಿಸಿದ ನಾಲ್ಕುವರೆ ಕೋಟಿ ಜಾತ್ಯಶ್ವಮುಂ ರಿಪುಮಹೀಭುಜಲತಾಸಂಚಾರಿಜಯಶ್ರೀಶಾರಿಕಾವಜ್ರ ಪಂಜರಂಗಳೆನಿಸಿದಿರ್ಪತ್ತೊಂದು ಲಕ್ಕೆ ರಥಮುಂ ನಿರ್ಜಿತಾನೇಕಪ್ರ ತ್ಯನೀಕಮೆನಿಸಿದಿರ್ಪತ್ತೊಂದು ಕೋಟಿ ವೀರಭಟರುಂ ನೆಲಂ ಬೆಸಲೆ ಯಾದಂತೆ ನೆರೆದು ನಿಲ್ವುದುಮಾಪ್ರಸ್ಥಾಪದೊಳುದ್ದಂಡಮಂಡಳಮ ಮರಡಕ್ಕಾಹುಡುಕ್ಕಪಣವಮುರವಜಯಘಂಟಾರಝಲ್ಲರೀಮೃದಂಗವಂ ಶಕಾಂಸ್ಯತಾಳಧವಳಶಂಖಕಾಹಳಕೋಳಾಹಳಬಧಿರೀಕೃತಬ್ರಹ್ಮಾಂ ಡಮುದ್ದಂಡಕನಕದಂಡವಿಚಿತ್ರಾತಪತ್ರಪಾಳಿಕೇತನಪಿಹಿತಮಿಹಿರಕರ ಸಹಸ್ರಮುನ್ನತಕಿರೀಟಮಣಿಗಣಮರೀಚಿವಿರಚಿತಸುರಶರಾಸನ ಸಹಸ್ರಮುಷ್ಟಸಹಸ್ರಮುಕುಟಬದ್ಧಸಮಾಜಮಾನತಶಿರಸ್ಸರೋಜಂ ರಾಜ ವೀಥಿಯೊಳ್ಮಂಡಳಿಸಿ ನಿಂದು ವೈಶ್ರವಣಮಹಾಮಂಡಲೇಶ್ವರಭ್ರೂಲತಾ ದೇಶದಿಂ ಬಹಿಃಪುರಾಭಿಮುಖವಾಗಿ ತಳರ್ವುದುಂ ॥೧೩೯

ಪೆಡೆಯೊಳಡಂಗೆ ವಾಸುಗಿಯ ನೆತ್ತಿಯ ಮಾಣಿಕಮಾಟೆ ಕಂಠದೊ ಳ್ । ಪೆಡೆಗಳ ಗೊಂದಣಂ ಸರವಿ ಸುತ್ತಿದವೊಲ್ತನು ಕೂರ್ಮಪೃಷ್ಠ ದೊಳ್ ॥ ಪಡಲಿಡೆ ಖರ್ಪರಂ ಕುಸಿದು ಕೂರ್ಮಶಿರಂ ಪ್ರೊಟಪಾಯ್ದು [೩] ಕಣ್ಣುಮು । ಳ್ಗೊಡೆವನಿತಾಗೆ ತನ್ನ ಭರದಿಂ ತಳರ್ದತ್ತು * ನರೇಂದ್ರ ಸೈನಿಕಂ ॥೧೪೦

೧. ವಿಚಿತ್ರಪತ್ರಶಾಳಿ. ಕ॥ ೨. ಳ್ದೊವ್ವ್ಮಳಿಸಿ. ಗ॥ ೩. ನಡೆದತ್ತು. ಕ॥

(ಪೃಥ್ವೀ ವೃತ್ತಂ)

ಧರಿತ್ರಿ ಬಲಭಾರದಿಂ ಕುಸಿಯೆ ಪನ್ನಗಾಧೀಶ್ವರಂ ।
ಶಿರಂ ಬಿರಿದು ಬಿರ್ದ ಕೂರ್ಮಮುಖದೇಶದೊಳ್ಮೂರ್ಛಿತಂ ॥
ಕ್ಷರದ್ರುಧಿರವಾರಿಯುಂ ಕಮಠದೀರ್ಘನಿಶ್ವಾಸಮುಂ ।
[೧]ತೆರಳ್ಚೆ ನಿಜಮೂರ್ಛೆಯಂ ಮುಗುಳ್ದ ಕಣ್ಗಳಂ ಬಿಚ್ಚಿದಂ ॥

ನಳಿವಿರ್ದ ಕೂರ್ಮಪೃಷ್ಠದ ।
ಕುಳಿಯೊಳ್ ಮಂಡಳಿಸಿ ಕೆಡೆದು ಬಳಭರದಿಂ ಪಾ ॥
ಡಳಿದ ಫಣಿನಾಯಕಂ ಸು ।
ತ್ತಳಿಯುದ ಪೇಳಿಗೆಯ ಪಾವಿನಂತೆವೊಲಿರ್ದಂ ॥೧೪೨

ಅಂತು ತಳರ್ವುದುಂ ॥೧೪೩

ಪದೆಪಂ ಮೇಳಿಸೆ ದೂಳಿ ಸೆಜ್ಜರವಿದೆಂದಾಶಾಗಜಂಭೀತಿಯೊಂ ।
ದಿದು ನೂಱೊಂದೆನಿಸಿರ್ದ ಕೇತುವೆರಸೀಗಳ್ ರಾಹು ಮೇಲೆತ್ತಿ ಬಂ ॥
ದುದೆನುತ್ತುಂ ರವಿಮಂಡಳಂ ನಡುಗೆ ಹವ್ಯಾಸಕ್ತಿ[೨]ಯಿಂ ದೇವರಿಂ ।
ತಿದು ಹೋಮಾನಳಧೂಮಮೆಂದೆಳಸೆ ಪರ್ಬಿತ್ತುರ್ಬಿ ಸೇನಾರಜಂ ॥

ನೆಲನಂ ಕೂಡೆ ನಿಮಿರ್ಚುವಂತೆ ಕೆಡಲಂ ಪೂರ್ಬ್ದತ್ತು ಚಂಡಾಂಶುಮಂ । ಡಳಮಂ ತೋಱದೆ ಮಂಡಳಾಗ್ರರುಚಿಯಂ ಮಾಣೆಂದು ಮೇಲೆತ್ತಿ ಮಂ ॥ ಡಳಸಿತ್ತುತ್ಪಥವಾಹಿವರ್ತಿನಿಯಿದೆಂದಾಟಂದು ದೇವಾಪಗಾ । ಜಳಮಂ [೩]ತೊಟ್ಟನೆ ಸೇತುಗಟ್ಟಿ [೪]ತಡೆದತ್ತುತ್ತಾನಸೇನಾರಜಂ ॥೧೪೪

ಅಂತು ಚತುರಂಗಬಳಪ್ರಬಳಪಾಂಸುಪಟಳಮೆ ಪಟಳಮಾಗೆ ॥

---

೧. ತೆರಳ್ಚಿ. ಗ॥ ೨. ಯಿಂ. ಗ॥ ೩. ತೊಟ್ಟನೆ. ಕ॥ ೪. ಕಡೆದ. ಗ॥

ಅನುಕೂಲಶ್ವಸನಂ ಹಯಾನನಸಮೀರಂ ಚಕ್ರರಂಹಪ್ರವ।
ರ್ತನಸಂಜಾತಸಮೀರಣಂ ಫಳಕಸಂಚಾರಾನಿಳಂ ವಾಳವೀ॥
ಜನವಾತಂ ಕರಿಕರ್ಣತಾಳಪವನಂ ಚಂಚತ್ಪತಾಕಾಪ್ರಭಂ।
ಜನವೊಂದಾಗಿ ತೆರಳ್ಚಿ ತೂಳ್ದಿದುದು ತತ್ಸೇನಾರಜೋಜಾಳಮಂ॥

ಅನ್ನೆಗನಿತ್ತಲಮೃತಜಳಧಿವೇಳೆಯಿಂ ಪೊಱಮಡುವ ಶೇಷನಂತೆ ಚಂದ್ರಕಾಂತದ ಮುಂದುರದಿಂ ಪೊಱಮಟ್ಟು ತವದ ಜವದ ಬಿರುದಿಂಗೆ ಗರುಡಂಗೆ ಗಱಿಗಟ್ಟಿದ ಗಱಿಯ ಗಳೆಯುಂ ಉಚ್ಚೈಶ್ರವಕ್ಕೆ ಕಟ್ಟಿದ ತೊವಲ ಪಾಪೆಯ ಗಳೆಯುಮಾದಿತ್ಯನೇೞು ಕುದುರೆಗೆ ಕಟ್ಟಿದೇೞು ಕವಡಿಕೆಯ ಗಳೆಯುಂ ಮುಂದೆ ಪರಿಯೆ ತನ್ನುಭಯಪಕ್ಷದೊಳಂ ಪರಿವ ಕೆಂಬಟ್ಟೆಯ ಮೇಘಡಂಬರದಿಂ ಕೆಮ್ಮುಗಿಲ ಕೆಳಗೆ ಪರಿವ ಚಂದ್ರಬಿಂಬಮಂ ವಿಡಂಬಿಸಿ ಕಮಳಗರ್ಭನಲ್ಲಿಗೆ ವರ್ಪ ಕಳಹಂಸನಂತೆ ಕಳಾಕಮಳಗರ್ಭನಿರ್ದ ಕರುಮಾಡಕ್ಕೆ ವಂದು ॥೧೪೮

ಅತಿನಿಮ್ನಾಂಸಮುಖಂ ವಿಶಾಳಜಘನಂ ವಿಸ್ತೀರ್ಣವಕ್ಷಂ ಸುಸಂ।
ಗತಪಾರ್ಶ್ವಂ ಮೃದುಕೇಸರಂ ನಿಬಿಡಜಂಘಾಕಾಂಡನುದ್ಬದ್ಧಕು॥
ಕ್ಷಿ ತನುಸ್ನಿಗ್ಧತನೂರುಹಂ ಸರಳವಾಳಂ ಬಂಧುರಸ್ಕಂಧನು।
ದ್ಧೃತಕರ್ಣಂ ತುರಗಂ ಮನಂಗೊಳಿಸಿದತ್ತುತ್ತಾರಹೇಷಾರವಂ॥

ಪೊಱಪಾಯ್ದು ಕಡೆದ ನೀಲದ।
ತಿಱಿಕಲ್ಲಂ ಪೋಲ್ತು ನೀರ ಬೊಬ್ಬುಳಕೆಯೆನಲ್॥
ಮಿಱುಗುವ ಕಣ್ಣ ಚೆಲ್ವಿನ ಕ।
ಣ್ದೆಱವಿಯನನುಕರಿಸುಗುಂ ತುರಂಗಾಧಿಪನಾ ॥೧೫೦
ಎಡೆನೆಱಿಯದೆನ್ನಲಂಘನ।
ದೆಡೆಗಂ ಪರಿವೆಡೆಗವೆಂಬ ಮುಳಿಸಿಂ ನೆಲನಂ॥

ಪೊಡೆವಂತಿರೆ ಬಾರಿಪುದಡಿ ।
ಗಡಿಗೆ ಹಯಂ ತನ್ನ ತೀಕ್ಷ್ಣದಕ್ಷಿಣಖುರವಂ ॥೧೫೧
ಚವುರಜವುಂ ಕಟ್ಟಿದವೋಲ್ ।
ನಿವಿದಿರ್ದೊಪ್ಪುವ ಕೇಸರಾಳಿ ವಿಚಕಿಳಮುದಿರೋ ॥
ದ್ಗಮಗುಚ್ಛದೊಳೆಱಗಿದ ಭೃಂ ।
ಗಮಾಳೆಯಂ ಪೋಲ್ತು ನಿಟಿಳದೊಳ್ ಸೊಗಯಿಸುಗುಂ ॥
ಧವಳಗ್ರೀವಾವೇಷ್ಟಿತ ।
ಸುವರ್ಣ್ಣಪರಿಪೂರ್ಣ್ಣಶೃಂಖಳಾಬಂಧಮದೇಂ ॥
ಧವಳಾಂಭೋಧರಪರಿರಂ ।
ಭವಿಳಾಸಿನಿಯಚಿರರುಚಿಯನಭಿನಯಿಸಿದುದೋ ॥೧೫೩
ಬರೆದಂಜನದಿಂ ಕಾಲಂ ।
ಖುರಮಂ ನಿರ್ವಾಣರೇಖೆದೆಗೆದನಜಂ ಕ ॥
ಸ್ತೂರಿಯಿಂದಮೆನಿಪ ನಡುವೆ ।
ನ್ನ ರೇಖೆಯಿಂದೆಸೆದುದಸದಳಂ ಹಯರಾಜಂ ॥೧೫೪

ಖುರದಿಂ ಬಾರಿಸುತುಂ ಧರಾವಳಯಮಂ ತೀವ್ರುತ್ತಮುತ್ತಾರ
ನಿ । ರ್ಭರಹೇಷಾರವದಿಂ ವಿಯದ್ವಿವರಮಂ ಕೆತ್ತುತ್ತಮತ್ಯಂತವಿ ॥
ಸ್ಫುರಿತಪ್ರೋಥಮನೊರ್ವೆಯುಂ ಕೆದಱುತುಂ ಲಾಲಾಂಬುವಂ ಘಾ
ಣಗ । ಹ್ವರದಿಂ ಘೋರಸಮೀರನಂ ಪಸರಿಸುತಿರ್ದತ್ತುದಾತ್ತಂ
ಹಯಂ ॥೧೫೫

ಬಿರುದಿನ ಕಾಳೆಯ ದನಿ ಮಂ ।
ದುರಿಗರ ಜೇಂಕರಿಸುತಿರ್ಪ ದನಿ ಪಾಡುವ ಗಾ ॥

೧. ಮೆನಿಸಲುಂ ಬೆ।ನ್ನ. ಕ॥ ೨. ಕಿತ್ತುತ್ತುಂ.ಕ॥ ೩. ಘೋಷ.ಕ॥

ಣರ ದನಿ ಕೀರ್ತಿಪ ಗಳಗ।
ರ್ತರ ದನಿ ಪ್ರೊಣ್ಮಿತ್ತು ವಾಜಿರಾಜನ ಕೆಲದೊಳ್ ॥ ೧೫೬

ಆಗಳೊರ್ವನುರ್ವೀತಳಾಲಿಂಗಿತಸರ್ವಾಂಗಂ ದೇಸೆವೆತ್ತ ಪೊಗಸುತ್ತುಂ ಪಱಿಯ[1] ಪಟ್ಟಂಗಿಯುಂ ಉಟ್ಟ ಪಟ್ಟಣಿಗೆಯುಂ ಪೊದೆದ ಪಾಣಿಯ ವಣ್ಣಮುಮೆಸೆಯೆ ತಿಸರದ ನಡುವೆ ಕೀಲಿಸಿದ ಹಯದ ಪೆಸಱಕ್ಕರದ ಪದಕಮುಂ ಹರಿನೀಳದ ತೋಳ ಮಣಿಯುಂ ಮಾಣಿಕದ ಕಂಕಣಮುಂ ತಳತ್ತಳಿಸೆ ಕುದುರೆವರ್ಪವನುಚ್ಚಳಿತಕರಪಲ್ಲವನಪರಿಮಿತವಾಗ್ವಿಳಾಸನವಸರೋಚಿತಸ್ತವನಮುಖರಮುಖನಾಗಿ ॥ ೧೫೭

ಇದಱ ಜವಕ್ಕೆ ಸೋಲ್ತು ಗರುಡಂ ಗಱಿಯಿಂ ಕಡುನೊಚ್ಚನಾದನೇ।
ಱದನಿದಱೊಳ್ಕಡಂಗಿ ಪರಿದಾಱದೆ ಕಾಲ್ನಡೆಗೆಟ್ಟು ಗಾಳಿ ಮಾ ॥
ಳದಮಱುವಲ್ಲೆವೋರಿಯನೆಸಲ್ ಪೆಱದೇಪಡಿಮಾತೊ ಮಾಡಧಿ।
ರ್ಪದೆ ಜವದೇೞ್ಗೆಯಿಂ ಪೆಱವು ವಾಜಿಗೆ ಭಂಗಮನೀತುರಂಗಮಂ ॥

ತುರಗಕ್ಕೆ ಜವದೊಳೆಣೆಯೆಂ।
ಬರೊಳೇಂ ಸಂಗ್ರಾಮಯೋಗ್ಯಮಲ್ತು ವಿಮಾನಂ ॥
ಗರುಡಂ ವಿಜಾತಿ ಪವನಂ।
ವಿರೂಪವೇಷಂ ಮನಂ ನಪುಂಸಕಮಲ್ತೇ ॥ ೧೫೯

ಪತ್ತುಂಗತಿಯೊಳಮೀರೆರೊಂ।
ಬತ್ತುಂ ಚಾರಿಯೊಳಮೈದು ದಾರಿಗಳೊಳಮೊಂ ॥
ಬತ್ತುಂ ರಸದೊಳಮೀಹಯ।
ಮಿತ್ತಪುದುಚ್ಚೈಶ್ಶ್ರವಕ್ಕೆ ನೀಚೈಶ್ಶ್ರವಮಂ ॥ ೧೬೦

೧. ಬಟ್ಟಂಗಿಗೆ. ಕ॥

ಆದಿತ್ಯನ ತುರಗಂ ಮೇ ।
ಲಾದುವು ಮೇಲಿರ್ದ ದೂಸಱುಜವದಿಂ ಕೀ ॥
ೞಾದುವು ಚೆಲ್ವಿಂದೇೞಿದು ।
ವಾದುವು ತನಗೆನಿಸುಗುಂ ತುರಂಗಮತಿಳಕಂ ॥೧೬೧

ಎಂದು ಕೀರ್ತಿಸಿದ ಗಳಗರ್ಜನೆಗೆ ಪೊನ್ನ ಪೊಟ್ಟಳದ ಮಱೆಯಂ ಕಱೆದು ॥೧೬೨

ಮಣಿಹರ್ಮ್ಯಸ್ಥಳದಿಂ ನರೇಂದ್ರನಿೞಿದಂ ನಿತ್ಯೋದಯಂ ರತ್ನಭೂ । ಷಣಭಾಸ್ವತ್ಕಿರಣಂ ತಳತ್ತಳಿಸೆ ಲೀಲಾಂಭೋಜಹಸ್ತಂ ಹಯ ॥ ಪ್ರಣಯಂ ಕೈವಿಗೆ ಸಪ್ತಸಪ್ತಿಗೆಣೆಯಾಯ್ತೆಂತಾನುಮೆಂದಾನಭೋ । ಮಣಿ ತನ್ನಿರ್ಪ ವಿಮಾನದಿಂದಿೞಿದಿಳಾಭಾಗಕ್ಕೆ ಬರ್ಪಂದದಿಂ ॥೧೬೩

ಆಗಳೊರ್ವಳೊಡನೊಡನಡಿಯಂಡಿದಲತಗೆಯ ಪಜ್ಜೆಯಿಂ ಪಚ್ಚೆಯ ನಿಚ್ಚಣಿಗೆಯಂ ಪಲ್ಲವಿಸುತ್ತುಂ ॥೧೬೪

ಇನಿಸಂ ಕೈವಿಗೆ ನೂಲ ತೊಂಗಲುಲಿಯುಂ ಮಂಜೀರಕಾಮಂಜುಳ। ಧ್ವನಿಯುಂ ಕಾಂಚನಶೃಂಖಳಾಕ್ವಣಿತಮುಂ ರತ್ನಸ್ಫುರತ್ಸಾರಿಹಾ ॥ ರ್ಯನಿನಾದಂಗಳುಮೊಂದಿ ಸಂಧಣಿಸೆ ಬಂದತ್ತೆಂದು ಕಂದರ್ಪಮೋ । ಹನವಿದ್ಯಾಕುಳದೇವತಾಕುಳಮೆನಲ್ ಶುದ್ಧಾಂತಕಾಂತಾಜನಂ ॥೧೬೫

ಕೆಂದದ ಕುಂದದ ನಗೆಮೊಗ ।
ದಿಂದಂ ಪರಿಭವಮನೆನಗೆ ಪಡೆದರ್ ನಿನ್ನೀ ॥
ಸುಂದರಿಯರೆಂದು ದೂಱಲ್ ।
ಬಂದ ಸುಧಾರುಚಿವೊಲಾಯ್ತು ಧವಳಚ್ಛತ್ರಂ ॥೧೬೬

೧. ಪಜ್ಜೆಯ. ಗ॥ ೨. ಗಳ್ ಮುದದಿಂ. ಕ॥, ಜಗಮೊಂ. ಗ॥

ಅನ್ನೆಗಮಿತ್ತಲಯಶ್ಶುಕ್ತಿ[೧]ಚಯಚರಂಗಳಪ್ಪ ಲೋಹಖುರಮಾಹಂಗಳಿಂದಿೞಿದು ತಾಳವ್ಯಜನಮಾಳಕೇತನವಿಚಿತ್ರಾತಪತ್ರಂಗಳನತಿದೂರದೊಳಿರಿಸಿ ವಜ್ರಕವಚದ ಕಾಂತಿ ದಿವಸಲಕ್ಷ್ಮೀವಿಳಾಸಮಂ ದ್ವಿಗುಣಿಸೆ ತನ್ನ ಬರವಂ ಪಾರ್ದು ನಿಂದ ರಾಜಲೋಕಮಂ ॥೧೬೭

ಪ್ರಣಯಾಳೋಕನರಸದಿಂ ।
ತಣಿಪುವುದುಂ ದೇವವರ್ತಿ ನಿಧಿಗೆಱಗುವವೊಲ್ ॥
ಗುಣನಿಧಿಗೆ ರಾಜಲೋಕದ ।
ಮಣಿಮಯಮಕುಟಂಗಳನಿತುಮೇನೆಱಗಿದುವೋ ॥೧೬೮

ಅನಂತರಂ ನಿಜವಲ್ಲಭವಾಜಿವಿಳೋಕನಜನಿತಪ್ರಮೋದಮಂ ನಿವೇದಿಪಂತೆ ಮಣಿಕಂಕಣಪುರಸ್ಸರಂ ವಿಚಿತ್ರವಸ್ತ್ರಮಂ ಹಯಮಹತ್ತರಂಗೆ ದಯೆಗೆಯ್ದು ತಾನುಂ ಕೈಗೆಯ್ದು ॥೧೬೯

ಸರಮಂ ಮೆಲ್ಲನೆ ತೋಱಿ ದಕ್ಷಿಣಕರಾಂಭೋಜಾತದಿಂ ಸ್ನಿಗ್ಧಕೇ ।
ಸರಮಂ ನೇರ್ಪಡೆ ನೀವಿ ಕಂದರಕೆ ಕೈಯಂ ನೀಡಿ ರತ್ನಾಂಶುಭಾ ॥
ಸುರಮಂ ಲಾಘವದಿಂದಮಂಕವಣೆಯಂ ಪಾದಾಗ್ರದಿಂ ಮೆಟ್ಟಿ ತ ।
ತ್ತುರಗಾಧೀಶನ ಬೆಂಗೆ ವಂದನನವದ್ಯಂ ರಾಜವಿದ್ಯಾಧರಂ ॥೧೭೦

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಶರತ್ಸಮಯವರ್ಣನಂ
ಅಷ್ಟಮಾಶ್ವಾಸಂ ಸಂಪೂರ್ಣಂ.

---

೧. ಶ್ಶುಕ್ತಿಸನ್ನಾಹಭರಭಯಂ, ಕ॥

## —ನವಮಾಶ್ವಾಸಂ—

ಶ್ರೀರಮಣಂ ಮಂಗಳಭೇ।
ರೀರವಮಾಶಾಂತರಾಳಮಂ ತೀವೃವಿನಂ॥
ಮಾರುಮದ ಬೆಂಗೆ ಪೌರ।
ಸ್ತ್ರೀರತ್ನದ ಕಣ್ಗೆ ವಂದನಭಿನವವೆಂಪಂ॥೧

ಆಗಳ್॥೨

ಎಡೆಯುಡುಗದೆ ಭೇರೀರವ।
ದೊಡನೊಡನೆ ನಭೋವಿಭಾಗಮನಿತುಂ ತೆನಗಿ॥
ಟ್ಟಡೆಯೆನೆ ಕುಳಗಿರಿ ಮಾರ್ದನಿ।
ವಿಡೆ ಪ್ರೋಣ್ಮಿತ್ತಂದು ಧವಳಶಂಖಧ್ವಾನಂ॥೩

ಪುಟ್ಟಿದುವಬ್ಜಸಂಭವನ ಕಣ್ಬುನಿಯಿಂದೆನೆ ಚೀರಘಟ್ಟಗಂ।
ತಿಟ್ಟುಮಿಡಲ್ಕೆ ಬಾರದೆನೆ ದಿಟ್ಟಗೆ ವಂದು ಮನೋಜವಕ್ಕೆ ಬೂ॥
ಚಟ್ಟನ ತಕ್ಕು ಮಿಕ್ಕು ಬರೆ ಬಂದುವು ಪೊಂಬುಲಿದೋಲ ಪಲ್ಲಣಂ।
ಗಟ್ಟದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್॥೪

ಮುಖಶಿಖಿಮುಖಸಂಭವಲೋ।
ಹಖುರಂಗಳವೆನಿಪ ಪಟ್ಟ ಸಾಹಣದ ಹಯಂ॥
ಮುಖಲೀನಖಲೀನೋತ್ಥಾ।
ನಖಣತ್ಕೃತಮೊದವೆ ನಿಂದುವಂದರಮನೆಯೊಳ್॥೫

ಆಪ್ರಸ್ತಾವದೊಳ್॥೬

೧. ಮೊಡ, ಕೆ॥

ಮುಂದಿರೆ ಭೂಭುಜಪರ್ಿಡಿಯ ಮೇಲೆ ವಿಳಾಸಿನಿಯರ್ವಿಳಾಸದಿಂ।
ಬಂದಿರೆ ಸೋರ್ಕಿದಾನೆಗಳನೇಱಿ ಕುಮಾರಕರಿರ್ಕೆಲಂಗಳೊಳ್ ॥
ಬಂದಿರೆ ಸುತ್ತಲುಂ ಪುಲಿಯ ಜಂಗುಳಿಯುಂದದಿನಂಗರಕ್ಷಕರ್ ।
ನಿಂದಿರೆ ಕೌಸ್ತುಭಾಭರಣನಾಯಕದಂತೆವೊಲಿರ್ದನಾನೃಪಂ ॥೭

ಚಿತ್ರಲಯಪ್ರಗಲ್ಭಹಯವಲ್ಗನದಿಂ ಮಣಿಕುಂಡಲಾಂಶುಗಳ್ ।
ಚಿತ್ರಿಸೆ ಗಂಡಭಿತ್ತಿಯನುರಸ್ಸ್ಥಳರಂಗದೊಳಂಗಹಾರವಂ ॥
ಸೂತ್ರಿಸೆ ತೋಱಹಾರರುಚಿಮಂಜರಿಗಳ್ ತಳರ್ದ*ಂ ಪುರಾಂಗನಾ ।
ನೇತ್ರಚಕೋರಮುಗ್ಗಲಿಸೆ ಸಂಮದಮಂ ಮನುಜೇಂದ್ರಚಂದ್ರಮಂ ॥

ಅಂತು ತಳರ್ದು ಮುಕ್ತಾಫಳಪ್ರಳಂಬಲಂಬೂಷಸುಂದರವಂದನಮಾಳಾವಿರಾಜಿತರಾಜವೀಧಿಯೊಳ್ ತಾರಾವೀಧಿಯಂ ಪುಗುವ ಚಂದ್ರನಂತೆ ಬರ್ಪ ಮನುಜೇಂದ್ರಚಂದ್ರನಂ ನೋಡಲೆಂದು ನೆರೆದು ॥೯

ಚರಣಾಲಕ್ತಕರಾಗಮುರ್ವರೆಯೊಳಾರಕ್ತಾಬ್ಜಮಂ ಪಾಸುವಂ ।
ತಿರೆ ಸಸ್ಮೇರಕಟಾಕ್ಷಮಾಲೆ ಬಯಲೊಳ್ ಕರ್ನೆಯ್ದಿಲಂ ಸೂಸುವಂ ॥
ತಿರೆ ಭೂಷಾರುಚಿ ಶಕ್ರಚಾಪಲತೆಯಂ ದಿಕ್ಚಕ್ರದೊಳ್ ಬೀಸುವಂ ।
ತಿರೆ ಬಂದೀಕ್ಷಿಸಿದರ್ ಪುರಪ್ರಮದೆಯರ್ಸಾಹಿತ್ಯಸರ್ವಜ್ಞನಂ ॥೧೦

ಬಾಸಿಗದಂತೆ ಕಣ್ಗೆಸೆದು ತೋಱೆ ತುಱುಂಬಿನೊಳುತ್ತಮಾಂಗದೊಳ್ । ಸೇಸೆವೊಲೊಪ್ಪೆ ಹಾರರುಚಿಯುಂತುರದೊಳ್ಕರೆಗಣ್ಮೆ ಚಂದನ ॥ ಸ್ಥಾಸಕದಂತೆ ರಂಜಿಸೆ ಭುಜಾಗ್ರನೊಳುಜ್ಜ್ವಳಕೇಕರಾಂಶುವಿ । ನ್ಯಾಸವೊಱಲ್ದು ಕೋಮಳೆಯರೀಕ್ಷಿಸಿದರ್ ಮನುಜೇಂದ್ರಚಂದ್ರನಾ ॥೧೧

೧. ಸರ್ವಜ್ಞನಾ. ಕ॥

ಅಲ್ಲಿ ಕೆಲರ್ ಪೊದೆಗೆದಱಿದ ಪೊಗಣೆಗಳಂತೆ ಸಂಗಡದಿನುತ್ತುಂಗ ಸೌಧತಳಮನೇಱಿ ನೋೞ್ಪಾಗಳ್ ॥೧೨

ಬಯಸಿದುವಟ್ಟೆ[1] ಪತ್ತಿದುವು ಕೀಲಿಸಿ ನಿಂದುವು ಪೌರವಾರನಾ ।
ರಿಯರ ಚಳಚ್ಚಕೋರನಯನಂ ಶಫರೀನಯನಂ ಮೃಗಾಂಗನಾ ॥
ನಯನವಲಂಪು ನೂರ್ಮಡಿಸೆ ಸುಗ್ಗಿಯ ಮಲ್ಲಿಗೆ ಕಾರ ಮೊಲ್ಲೆ ಮಾ ।
ಗಿಯ ಪೊಸನೆಯ್ದಿಲೆಂಬ[2] ಬಗೆ ಕೈಮಿಗೆ ರಾಜಮನೋಜಭೂಪನಂ ॥

ಮತ್ತವೊಂದು[3] ಮಣಿಮಯಮಂದಿರದ ಮಗಿಲ ಜಗಲಿಯೊಳ್ನಿಂದು ಮದನಶರಪರವಶೆಯರಾಗಿ[4] ॥೧೪

ಒದವಿದಲಂಪು ಕಣ್ಗೊಳಳವೋಲೆ[5] ಮನಂ ಬಸದಾಗೆ ಪಾಶವಿ ।
ಲ್ಲದ ವರುಣಂ ಫಣಾಪಟಳವಿಲ್ಲದ ಪನ್ನಗರಾಜನಾಲವಿ ॥
ಲ್ಲದ ಕುಮುದಪ್ರಿಯಂ ಕುಸುಮಸಾಯಕವಿಲ್ಲದ ಕಂತು ವಜ್ರವಿ ।
ಲ್ಲದ ದಿವಿಜೇಂದ್ರನೆಂದಬಲೆಯರ್ ನಡೆ ನೋಡಿದರಾನರೇಂದ್ರನಂ ॥೧೫

ಮತ್ತವೊರ್ವಳಭಿನವಯೌವನ ಮದೋನ್ಮತ್ತೆ ಚಿತ್ತವಲ್ಲಭನ ಪಿಡಿದ ಮೇಲುದಱ ಸೆಱಂಗನುಱುಸೆಱಗೆಯ್ದು ॥೧೬

ಮುಡಿಯಿಂದಲ್ಲುಗೆ ಮಾಳತೀಕುಸುಮದಾಮಂ ಹಾರದಿಂ ಸೋ
ರ್ದು ಸಾ । ಲಿಡೆ ಮುಕ್ತಾಫಳಜಾಳಕಂ ಘನನಿತಂಬಾಭೋಗದಿಂದು
ಣ್ಮಿ ಜೋ ॥ ಲ್ದುಡೆನೂಲುತ್ತುಂಗಕುಚಾಗ್ರದಿಂ ತೊಲಗೆ ಚೀನಾಗ್ರಂ ಬೞ
ಲ್ದುಟ್ಟುದಂ । ಪಿಡಿಯುತ್ತುಂ ಪರಿತಂದು ತನ್ವಿ ನೃಪನಂ ಕಣ್ಣಾರ್ವಿ
ನು ನೋಡಿದಳ್ ॥೧೭

ಮತ್ತೊರ್ಬಳ್ ॥೧೮

೧. ದಿಟ್ಟೆ. ಗ॥ ೨. ನೆಯ್ದಲೆ. ಕ॥ಗ॥ ೩. ಮತ್ತೊಂದು. ಕ॥
೪. ಪರವಶರಾಗ. ಗ॥ ೫. ಕಣ್ಗೊಳಳೆವೋಗೆ. ಕ॥

ತೆಗೆಯೆ ಮನಃಪ್ರಿಯಂ ಪಿಡಿದು ಹಾರಮನಾರದ ಮುತ್ತು ಸೂಸೆ ಯುಂ। ಬಗೆಯದೆ ಬೇಗಮೇಱಿ ಮಣಿಮಾಡದ ಮೇಗಣ ಭೂಮಿಭಾಗ ಮಂ॥ ಮೃಗಶಿಶುನೇತ್ರೆ ಬೇಟದಗೆಯಂತಿರೆ ಬೇರ್ವರಿದಿರ್ದ ದಿಟ್ಟೆ ಯಂ। ತೆಗೆಯದೆ ಕಂಡು ಕಣ್ಬಲೆವೊಲಿರ್ದ ನರೇಂದ್ರನ ಗಂಡಗಾ ಡಿಯಂ॥೧೯

ಮತ್ತಮತಿಸಂಭ್ರಮಸ್ಖಲಿತಚಿತ್ರಚೀನೋತ್ತರೀಯಮಂ ಮ ಱೆದು॥೨೦

ನಿನಗೆನ್ನಂ ಮದನಾಗ್ನಿಸಾಕ್ಷಿದೊಳೆ ಲಜ್ಜಾಲಾಜೆಯಂ ಸೂಸಿ ಗೋ। ಸನೆಯಿಂ ಹಾರಮರೀಚಿಜಾಳಜಳಧಾರಾಪೂರ್ವಕಂ ಕೊಟ್ಟೆ ನೆಂ॥ ದು ನೃಪಂಗೆತ್ತಿದ[1] ಪೊನ್ನಮಳ್ಗಳಸಮಂ ವ್ಯಸ್ತೋತ್ತರೀ ಯಂ ಘನ। ಸ್ತನಯುಗ್ಮಂ ಗೆಲೆ ನೋಡಿ ಮೆಯ್ಮಱೆದಳೋರ್ವಳ್ ರಾಜಸರ್ವಜ್ಞನಂ॥೨೧

ಮತ್ತಮಾಮಹೀವಲ್ಲಭನ ಸೌಭಾಗ್ಯಯಶಃಪಟಹನಿನದಮಂ ಕೇ ಳ್ದು ಮುನ್ನಮೆ ಕಿವಿವೇಟಕ್ಕೆ ಪಕ್ಕಾದ ಪೊಸಜೌವನೆ[2]॥೨೨

ಬಗೆ ಬೆಚ್ಚಂತಿರೆ ದಿಟ್ಟ ಮುಟ್ಟಿ ಗಮನಂ ಬೇಗಕ್ಕೆ ಪಕ್ಕಾಗೆ ಸಾ। ವಗಿಸುತ್ತುಂ ಮುಡಿಯಂ ಸಡಿಲ್ದೊಡೆ ತಡಂಗಾಲ್ವೊಯ್ಯೆ ಕಾಮಂ ಖ ಳಂ॥ ತಗುಳ್ದಪ್ಪಂ ಶರಣೆಂದು ಬಾಯ್ವಿಡುವವೊಲ್ ಕಾಂಚೀರವಂ ಪೊಣ್ಮುವ। ನ್ನೆಗಮೋರ್ವಳ್ ಬಱಿಸಂದಳಾನೃಪನ ಸೌಂದರ್ಯಕ್ಕಿದಾ ಶ್ಚರ್ಯಮೋ॥೨೩

ಯುವತಿಯರ ಕಣ್ಗಳೊಂದೊಂ[3]।
ದವಯವಮಂ ಪತ್ತಿ ಪತ್ತುವಿಡದಲ್ಲಿಮೆ ನಿಂ॥

೧. ಪೊನ್ನವುಳ್ಗಳಸಮಂ. ಕ॥ ೨. ಪೊಸಯೌವನೆ. ಕ॥ ೩. ಕಣ್ಗಳೊಂದೊಂ. ಕ॥

ಮುವಿದೇಂ ಭೂಪಾಳನ ರೂ।
ಪವಿಳಾಸಂ ವಜ್ರಲೇಪದೊಡನಾಡಿದುದೋ ॥೨೪
ಮರಕತರತ್ನಾಂಗದ ರ।
ಶ್ಮಿರಾಜಿಯಿಂ ಪಸಲೆಗವಿದ ಭುಜಶಿಖರದೊಳಾ ॥
ಧರಣೀಶಂ ತಾಂಗುವುದ।
ಚ್ಚರಿಯೆ ಲತಾಂಗಿಯರ ಚಕಿತಹರಿಣೇಕ್ಷಣಮಂ ॥೨೫

ಅಂತು ಪುರವಿಳಾಸಿನೀವಿಳೋಕನಾಕರ್ಷಣವಿದ್ಯೆಯಂ ರಾಜಂ ನಿರತಿಶಯವಿಳಾಸದಿಂ ಪ್ರಕಟಸುತ್ತುಮಗಣ್ಯಪುಣ್ಯವನಿತೆಯರ ತಳಿವ ತೋಱಮುತ್ತಿನ ಸೇಸೆಗಳನಳಕವಲ್ಲರಿಯಂ ಕುಸುಮಿಸುತ್ತುಂ ಪುರಮಂ ಪೊಱಮಟ್ಟು ॥೨೬

ಸಮನಿಸೆ ವಿಳಂಬಿತಂ ಮಾ।
ರ್ಗಮನುಪಜನದಿಂ ಮಹೀಭುಜಂ ತೋಱೆ ತುರಂ ॥
ಗಮತಿಳಕಂ ನೋಟ್ಪರಹೃದ।
ಯಮನೊಳಪೊಕ್ಕತ್ತು ನಯನಮಾರ್ಗದಿನಾಗಳ್ ॥೨೭

ಅಂತು ನೋಟ್ಪ ಪುರಜನಕ್ಕೆ ಜಾತ್ಯಶ್ವದ ಚಿತ್ರಗತಿಸ್ತಂಭಮನೊಡರ್ಚೆ ॥೨೮

ತವೆ ನೋಡಲ್ ನಾಡೆ ಕಣ್ಣುಳ್ಳುವ ರವಿಪಥಮಂ ಕೇತುಹಸ್ತಂ
ಗಳಂ ನೀ। ಳ್ಕುವ ಬಿಣ್ಪಿಂ ಭೂತಳಂ ಬಳ್ಕುವ ರಿಪುನೃಪಚಾತುರ್ಬ
ಲಂ ಕಾದಲುಳ್ಕ॥ ಳ್ಕುವಿಭೋದ್ವೃತ್ತಕರ್ಣತಾಳಕ್ಷುಭಿತಪವನವಿಕ್ಷೇಪದಿಂ

೧. ವಿದ್ಯೆಯರಾಜನಿರತಿಶಯ. ಕ॥ ೨. ತಾರಾ. ಕ॥ ೩. ವಲ್ಲಿಯುಂ. ಗ॥
೪. ಪೊಕ್ಕನ್ತು. ಗ॥ ೫. ರಥಮಂ. ಕ॥

ವಾರ್ಧಿಯುಂ ತು । ಳ್ಕುವ ಸೇನಾಚಕ್ರಮುಂ ತೊಟ್ಟನೆ ಸಕಳಮಹೀ
ವಲ್ಲಭಂ ಮುಟ್ಟಿವಂದಂ ॥ ೨೯

ಆಪ್ರಸ್ತಾವದೊಳ್ ॥ ೩೦

ಕರಕಿಸಲಯಂಗಳನೆಸುಂ ।
ಪರಭಾಗಂಬಡೆಯೆ ತಮ್ಮ ಮಣಿಮುಕುಟಹಟ ॥
ತ್ಕರಕಿಸಲಯದಿಂ ಭೂಪರ್ ।
ಧರಣೀನಾಥಂಗೆ ವಿನಯವಿನಮಿತರಾದರ್ ॥ ೩೧

ತದನಂತರಮಿಳಾವಿಳಾಸಿನೀನಿತಂಬವಳಯದಂತೆ ವೃತ್ತಮುಂ ದ
ರ್ಪಣದಂತೆ ಸಮತಳಮುಮಪ್ಪ ವಾಹಳಿಯ ನಡುವೆ ನಿಂದು ತನಗೆ
ಜಗಿದ ಮಕುಟಬದ್ಧರನುಭಯಕುಳವಿಶುದ್ಧರಂ ಪ್ರಸನ್ನಪ್ರಸಾದದೃ
ಷ್ಟಿಯಿಂ ಪರಿತುಷ್ಟರ್ಮಾಡಿ ತನ್ನ ಕುದುರೆಯ ವಿನ್ನಾಣಮಂ ನೋ
ಡಲಡಹಡಿಸುವ ಹಯಾರೋಹಕರ ಮನೋರಥಂ ಸಫಳಮಾಗೆ ಕೀ
ಲ ನೇಣನಳವಡಿಸಿ ಪಿಡಿದು ಪೊಳೆಯಿಸಿ ॥ ೩೨

ಮುಟ್ಟುವೆನೆ ಪೆಱವು ತುರಗಂ ।
ಮೆಟ್ಟದ ವಾಹಳಿಯನೆಂಬವೊಲ್ ಖುರಮಿಳೆಯಂ ॥
ಮುಟ್ಟಿದುದು ಮುಟ್ಟದೆನಲಳ ।
ವಟ್ಟ ಬಿಸಿಲ್ಗುದುರೆಯಂತೆ ಪೊಳೆದುದು ತುರಗಂ ॥ ೩೩

ಅಳವಡೆ ಗುಣಕೋಟಿಗಳಂ ।
ತಳೆದುತ್ತಮವಂಶಸಂಭವಂ ಹಯರತ್ನಂ ॥
ತಳದೊಳಳವಟ್ಟುದಾಭೂ ।
ತಳನಾಥನ ವಿಜಯಚಾಪರತ್ನಾಕೃತಿಯಂ ॥ ೩೪

೧. ತನ್ನ. ಕ॥

ತೊಡೆಯೊಡನೆ ಪರ್ಚುವಂತಿ ।
ರ್ಮುಡಿಸೆ ಕೊರಲ್ ಕಾಲ್ಕಪಲ್ಲುವೆನೆ ಮುಂದುದ್ದಂ ॥
ಬಡೆಯೆ ಪೆಱಗುಡುಗೆ ನೃಪನಳ ।
ವಡೆ ತೋಱಿದನೇಱಿ ಮಧ್ಯಲಯದಿಂ ಹಯಮಂ ॥ ೩೪
ಬಿಂಕಂಬಡೆದುದು ವಿಕ್ರಮ ।
ಮಂಕಿತಮುಪಕಂಠಮುಪಜಮುಪಜವಮೆಂಬ ॥
ಯುದ್ಧಂ ಕಣ್ಗೊಳಿಸುವ ಧಾರೆಗ ।
ಳಂ ಕುದುರೆಯ ಕಾಲ್ಗೆ ಕೋಡಗಱಿಯೊಳವಕ್ಕುಂ ॥ ೩೬
ಮಾಣದೆ ನೋಡಿ ಕಣ್ಬೊಳಲಿ ಕಯ್ಮುಗೆ ಸೇನೆಗೆ ಸುತ್ತುವಾರುವಂ ।
ಸಾಣೆಯ ನೇಣವೊಲ್ಪರಿಯೆ ವಾಹಳಿಯೊಳ್ಪರಿವೇಷಮಾದ ಪ ॥
ರ್ಯಾಣದ ಪಂಚರತ್ನರುಚಿಯಿಂದಱಿವರ್ಣಱಿಗಾಗಿ ಬಲ್ಮೆ ನಿ ।
ರ್ವಾಣಿಸಿತೆಂದು ಬಿಚ್ಚಳಿಸೆ ಪಂಚಮಧಾರೆಯೊಳೇಱಿದಂ ನೃಪಂ ॥ ೩೭
ತಿರಿಪಿದ ತಿಗುರಿಯ ಮೇಗಣ ।
ಗರೆಯಂತೆಡವಱಿಯದಂಕವಣಿ ವಾಹಳಿಯಂ ॥
೧ಗರೆವರಿಯೆ ದಂಡೆ ಚಾರಿಸೆ ।
ಪರಿದುದು ಜವದಿಂ ಮನೋಜವಂ ಜಾತ್ಯಶ್ವಂ ॥ ೩೮
ನರನಾಥನ ಮಕುಟದ ಪಂ ।
ಚರತ್ನರುಚಿ ಮೇಘವಟ್ಟೆಯಿಂ ವಾಹಳಿಯಂ ॥
ತೆರೆಸುತ್ತಿದಂತೆ ರಂಜಿಸೆ ।
ಪರಿದುದು ತುರಗಂ ಮನೋಜವಂ ಪವನಜವಂ ॥ ೩೯

೩೭. ಕಣ್ಬೊಳಲಿ- ಕಣ್ಣಂದೊಳಲಿ, ಕಣ್ಣುಗುಡ್ಡೆ.

೧. ಗರಿವರಿಯ, ಕ॥

ಸುತ್ತಲ್ಲದು ಕುದುರೆಯು ತೆರೆ ।
ಸುತ್ತನೆ ವಾಹಕರ ಮಾನಗರ್ವಂ ಮನದಿಂ ॥
ಸುತ್ತಱಿಯೆ ಮೆಚ್ಚಿ ಬಿಚ್ಚಳಿ ।
ಸುತ್ತುಂ ನೃಪನೇಱಿದಂ ತುರಂಗೋತ್ತಮನಂ ॥೪೦

ಕರಚರಣಶಿರೋಗ್ರೀವಾ ।
ಧರನೇತ್ರವಿಕಾರವೇಷಮಿಲ್ಲೆನೆ ಭೂಪಂ ॥
ಕರಮೆಸೆದಂ ಸ್ತ್ರೀವಿದ್ಧದ ।
ತುರಗಮನೇಱಿರ್ದ ಕುಸುಮಶರವಿದ್ಧದವೋಲ್ ॥೪೧

ದ್ವಾದಶವಿಧಮಾರೂಢವಿ ।
ಭೇದಂ ಪದಿನಾಲ್ಕೆ ಮುಖ್ಯಭೇದಮೆನಲ್ ಕ ॥
ಲ್ತೋದಿದೊಡೇನುಪಯೋಗಿಸ ।
ಲೀದೊರೆಯಂ ಬಲ್ಲನಾವನವನೀನಾಥಂ ॥೪೨

ಕೊಂಡಾಟದ ಹಯಮಿದು ಕ ।
ಯ್ಕೊಂಡಱಿಯದು ಗತಿ ವಿಪರ್ಯಯಂಗಳನದಱಿಂ ॥
ದಂಡಾಂಕಶಬ್ದದೊಳ್ ಭೂ ।
ಮಂಡಳನಾಥಂಗೆ ಕೊಟ್ಟುದಿಲ್ಲವಸರಮಂ[1] ॥೪೩

ಬಿಡೆ ಪಿಡಿದು ಬಿಟ್ಟ ಮಿಂಚಿಂ ।
ಕಡಿದಾದುದು ಪಿಡಿಯೆ ತಿಟ್ಟಮಿಟ್ಟಂದದಿನೊಂ ॥
ದಡಿಯುಂ ಮುಂದಿಡದೊಪ್ಪಂ ।
ಬಡೆದುದು ಮನವೊಂದೆ ನೃಪತಿಗಂ ಹಯಪತಿಗಂ ॥೪೪

೧. ವಸರದೊಳ್. ಕ॥

ರಸಭೇದಂಗಿಡದೆ ವಿರಾ।
ಜಿಸಿ ಪರಿವಾಹಯುದ ಕೆಲದೊಳುಚ್ಚೈಶ್ಶ್ರವಮುಂ॥
ರಸವಿಱಿದಂತಿರ್ಕುಂ ತೆರೆ।
ಮುಸುಗಿಸಲಾರ್ಕುಮೆ ಜನಕ್ಕೆ ಸುಮದರಸಮುಂ॥೪೫

ಇದು ಭದ್ರಾಶ್ವಂ ಶಿಕ್ಷಾ।
ವಿದನಿದಱೊಳ್ತನ್ನ ಬಲ್ಮೆಯುಂ ಮೆಱೆಯುನೆ ತಿ॥
ರ್ದದ ನಾಲ್ವತ್ತೆಂಟುಂ ಭೇ।
ದದ ಸೊಕಳಹಯುಮನೇಱೆ ಮೆಱೆವ ನರೇಂದ್ರಂ॥೪೬

ಬಿನದಕ್ಕಂ ವಿಗ್ರಹಕ್ಕಂ ತುರಗಮಿದುವೆ ಶಿಕ್ಷಾವಿದಂ ರಾಜಸರ್ವ। ಜ್ಞಾನೆ ಮೂಱುಂ ವಾಜಿಯುಂ ಮುಚ್ಚಿಗಳ ತೆಱನನಾರೂಢಮುಂ ಯೋಗ್ಯಮಪ್ಪ। ಸನಮುಂ ದುಡಾಂಕಶಬ್ದಂಗಳನಱಿವೆಡೆಯೊಳ್ ಮಿಕ್ಕರಂತಿರ್ಕೆ ರೇವಂ। ತನತಿಭ್ರಾಂತು ಮಹೀವಲ್ಲಭನ ಕೆಲದೊಳಾಶಾಳಹೋತ್ರಂ ವಿಸೂತ್ರಂ॥೪೭

ಎಂದು ನಿಖಿಳಸೇನಾಪ್ರಧಾನರಾನಂದಲತಾಕಳಿಕೆಯೆನಿಸಿದ ಪುಳಕಮನೊಳಕೊಂಡು॥೪೮

ಬಳದೀಡಾಡಿದ ಪೞಯಿಂ।
[1]ಬಳಯಿಂ ಚೆಂಬೊನ್ನ ತುಡುಗೆಯಿಂ ತೀವಿದ ವಾ॥
ಹಳಿ ವಿದ್ಯಾವಂತರ ಪೆ।
ರ್ಚೆಳಸಿನ ಪರವರಿಯ ಸಿರಿಯುನೇಂ ತಾಳ್ದುದೋ॥೪೯

ಆಸಮಯದೊಳಸಮಸತ್ವನುಮಮಂದರಶಿಕ್ಷಾಭಿಯೋಗ್ಯನುಮಪ್ಪದಱಿಂ ಪರಿಶ್ರಮಸ್ವೇದಲವಮಿಲ್ಲದೆ ಜವನಿವಾರಣಕ್ಕುಮ್ಮಳಿಸಿ

೧. ಚಳಿಯಿಂ, ಗ॥ ೨. ನ್ಮಥಿಸಿ, ಗ॥

ಕೀಲಿಂ ಕಣಕ್ಕಣಿಸುತ್ತುಮುತ್ತರಳತವಿಲೋಚನಂ ಘೋರಮುಖಸಮೀರಘೂರ್ಣಿತಘ್ರಾಣವಿವರನಾಗಿರ್ಪುದುಂ ರಾಜವಿದ್ಯಾಧರಂ ಮಣಿಮುದ್ರಿಕಾಮಯೂಖಮಾಳೆಯಿಂ ಕೀಲ ನೇಣಂ ಚಿತ್ರಿಸುತ್ತುಂ ದಕ್ಷಿಣಪಾಣಿಶೋಣಿಮದಿಂ ಕುಂಕುಮಪಂಕಿಳಂಮಾಳ್ಪಂತೆ ಕಂಧರಮನಪ್ಪಳಿಸುತ್ತುಂ ಶಾಂತಿವಚನದಿಂ ಶಾಂತಿವಡೆದು ಲಲಿತಗತಿಯೊಳಗಳವಡಿಸಿ ನಡೆಯಿಸುತ್ತುಂ ||೫೦

ಪವಮಾನಂ ತಣಿದತ್ತು ಗಂಧಗಜದಾನಾಮೋದದಿಂ ಕೇತುಪ |
ಲ್ಲವದಿಂ ಚಿತ್ರಿತಮಾದುದಂಬರತಳಂ ಭೂಪಾಳಭೂಷಾಂಶುವಿಂ ||
ದಿವಸಶ್ರೀ ಪೊಸತಾಯ್ತು ಪೊಯ್ವ ಪಟಹಪ್ರಧ್ವಾನದಿಂದಷ್ಟದಿ |
ಗ್ವಿವರಂ ತೀವಿದುವೆಂಬ ತನ್ನ ಬಲಮಂ ಭೂಪಾಳಕಂ ನೋಡಿದಂ || ೫೧

ಅಂತು ನೋಡಿ ಚರಣಸಂಚಾರಕ್ಕೆಳಾವಳಯಮಿಟ್ಟೆಡೆಯೆನಿಸಿ ನೆರೆದು ನಿಂದ ನಿಜಚತುರ್ಬಲಕ್ಕಂ ದೋರ್ವಲಕ್ಕಮರಿದಿಲ್ಲದುದರ್ಕೆ ಕಟ್ಟಕಡೆದುಚ್ಚೈಃಶ್ರವದಿನಿಜುವ ನಿಳಂಪನಾಯಕನಂತೆ ಭದ್ರವಾಹನದಿಂದಿಳಿದು ನಿಷ್ಟಪ್ತಕನಕವಿಷ್ಟರಾಧಿಷ್ಠಿತಂ ಪುಣ್ಯಾಹವಾಠಕಪಠನಮನಾಲಿಸುತ್ತುಂ ಬದ್ಧಾಂಜಲಿಗಳಾಗಿ ಮುಂದೆ ನಿಂದ ಸಕಳಮಕುಟಬದ್ಧರನುನ್ನಮಿತಭ್ರೂಲೇಖೆಯಿಂ ಸನ್ಮಾನಭರಮನಿಱುಪುವಂತಃಪುರದ್ವಾರದಾರಕರೊಡನೆ ಬೀಡಿಂಗೆ ಬೆಸಸೆ ||೫೨

ಅಪಗತಕಂಚುಕಂ ಮಣಿವಿಭೂಷಣಕಾಂತಿ ಶರೀರಕಾಂತಿಯಿಂ |
ದಪರಿಮಿತಂ ತಳತ್ತಳಿಸೆ ಪಾದಪಯೋಜನಖಾಂಶುಲೇಖೆಯಿಂ ||
ದುಪವನಮಾರ್ಗಮುಜ್ಜ್ವಳಿಸೆ ಭೂಭುಜನಂಗಜಚಕ್ರವರ್ತಿ ಬಂ |
ದಪನೆನೆ ಬಂದನುಚ್ಚಳಿತಚಾಮರನುಚ್ಛ್ರಿತಮೇಘಡಂಬರಂ || ೫೩

೧. ಘೂರ್ಣಿತ, ಕ||  ೨. ಕ್ಷಾಂತಿ, ಗ||

ಅಂತು ಬಂದು ॥೫೪

ಸಿಡಿಲೆಂಬ ಜವನ ಕೊಡಲಿಯು ।
ಕಡುಪೊಯ್ಲಿಂ ನೆಗೆದ ಬೇರ್ಗಳೊಡನೆ ನೆಲಂ ಬಾ ॥
ಯ್ವಿಡೆ ಬೆಟ್ಟು ಕೆಡೆವ ತೆಱದಿಂ ।
ಕೆಡೆದಾಲಮನಿದಿರೊಳವನಿಪಾಳಂ ಕಂಡಂ ॥೫೫

ಕಂಡು ॥೫೬

ತಲೆಯೊಳ್ತೊಳ್ಪೊಯ್ವ ಬೇರ್ಗಳ್ ಫಣಿಪತಿ ತಲೆಮುಟ್ಟುತ್ತಿರ್ದಂ ಕು
ತ್ತ ಸುತ್ತುಂ । ಕೆಲಗೊಂಬಾಶಾಗಜಂ ತಾಗಿದುವೆಡೆಗುಡದಾಕಾಶಮಂ
ತೀವೆ ತೀವ್ರಾ ॥ ನಿಲನಾಟಂದೊತ್ತಿರ್ದಂ ತಿಗ್ಮರುಚಿಕರಸಹಸ್ರಂಗಳಂ
ಪೊಯ್ದುನಡ್ಡಂ । ನಿಲೆ ತೇರ್ಗಂತಲ್ಲಪಂದೀತರು ಕೆಡೆವುದೆ[1] ಸೌದಾಮಿ
ನೀಪಾತದಿಂದಂ ॥೫೭

ಎಂದು ಬಗೆ ಪಚ್ಚು ಪಸರಿಸೆ ।
ಮಂದರಧೈರ್ಯಂ ಧರಾಧಿಪಂ ಸುರಧನುಮಂ ॥
ಮುಂದಿಡೆ ಕಿರೀಟಕಿರಣ ।
ಸ್ಪಂದನಮುಡಿಗಡಿಗೆ ತಲೆಯನೇಂ ತೂಗಿದನೋ ॥೫೮

ಅಂತು ಮನದೊಳ್ ಬಗೆದು ವಿಸ್ಮಯಮೆ ತನಗೆ ವೈರಾಗ್ಯರಸಕ್ಕೆ
ಸೇತುವಾಗೆ ॥೫೯

ಆಲಂಬಂ ನಭಮಂ ಪಳಂಚಲೆವ ಶಾಖಾಶ್ರೇಣಿ ಸಗ್ಗಕ್ಕೆನಿ ।
ಪ್ಪಾಲಂ ಬನ್ನಮನೆಯ್ದೆ ಕಾಲವಶದಿಂ ಕಂಡುಂ ವಿದಗ್ಧಂ ಮಹೀ ॥

೫೭. ತಲೆಮುಟ್ಟು– ಧಾ. ತಲೆಮಡು- ಶಿರಸ್ಸಂಧಾನೇ.
ಆಟಂದು–
೫೮. ಪಚ್ಚು – ಧಾ. ಪಸು- ವಿಭಜನೇ, ಎಂಬದರ ಭೂತನ್ಯೂನ.

೧. ಕೆಡೆವುದೊ, ಕ॥

ಪಾಲಂ ಭಾವಿಸಿದಂ ದ್ರುಮಪ್ರಕೃತಿಯಂ ದುರ್ವೋರ್ಹದಿಂ ಸಜ್ಜನೋ।
ಪಾಲಂಭಾವಿಳನಾಗಿ ನಿಲ್ಲದೊಡಲಂ ನಂಬಲ್ಕನಂದರ್ಪ್ಪುದೇ ॥೬೦

ಸ್ಥಿರಮೂಲಮನಾಲದ ವೆ।
ರ್ಮರನಂ ಕಡಿಗೊಂಬುಗೊಂಡ ಕಾಲವ್ಯಾಳ ॥
ದ್ವಿರದಕ್ಕೆ ನರಕಳೇಬರ।
ಜರತ್ತೃಣಗ್ರಾಸಮಾತ್ರಮಾವುದೊ ಗಹನಂ ॥೬೧

ಉಸಿರಂ ಕಾಳೋರಗನುಸಿ।
ರ್ದುಸಿರ್ದಿರುಳುಂ ಪಗಲುಮೀಂಟಿಯುಂ ಮತ್ತಂ ಜೀ ॥
ವಿಸುವಳಪಿಂದೆಸಗುವ ಮಾ।
ನಿಸನಂ ಸೋಂಕಿದುದು ದೇಹಮೋಹಪಿಶಾಚಂ ॥೬೨

ಜೀವನ ಸಂಗತಿಯಿಂದಂ।
ಪಾವನಮುಂಬಿದಂದಪಾವನಂತಾನೆನೆ ಮೆ ॥
ಯ್ಯಾವನೊ ಬೆಸೆದಪ್ಪನವಂ।
ಜೀವನ್ಮೃತಕಂ ವಿವೇಕಶೂನ್ಯನಮಾನ್ಯಂ ॥೬೩

ಎನಿತುಂ ಘನಮಾದೊಡಮುವ।
ಘನಮೆ ಗಡಂ ಸ್ಥೂಳರೂಪಮೆನಿತಾದೊಡಮೇಂ ॥
ತನುವೆ ಗಡಂ ದೇಹಂ ಜಾ।
ಣನೊ ಸೂತ್ರಿಸಿದಂತೆ ಪೆಸಱನಿಟ್ಟ ವಿಧಾತ್ರಂ ॥೬೪

ನಿಮಿಷಾರ್ಧದ ಸಂಗತಿಯಿಂ।
ಸಮಸ್ತಭೋಗೋಪಭೋಗಶುಚಿವಸ್ತುಗಳ್ ॥

೧. ಮುಳಿದಂತಪಾ. ಗ॥ ೨. ಬಸವಪ್ಪ. ಕ॥

ಲ್ಲಮನಶುಚಿಮಾಳ್ಪುದಂ ದೇ।
ಹಮನಾತ್ಮಂ ಬಿಟ್ಟು ಪಿಂಗದನ್ನಂ ಶುಚಿಯೇ ॥೬೫
ಕುತ್ತದ ಪರಿಪರಿ ಪಾಪದ।
ಬಿತ್ತು ಪರಾಭವದ ಬೆಳಸು ಪಸಿದ ಕೃತಾಂತಂ ॥
ಗೆತ್ತಿದ ಬೋನಂ ತನುವೆಂ।
ದುತ್ತಮರೞ್ದುೞಿದರದೞ ನಂಟರ್ತನಮುಂ ॥೬೬
ಮೂತ್ರನಿವಾಸಂ ಜನ್ಮ।
ಕ್ಷೇತ್ರಂ ಗಡ ಶುಕ್ಲಶೋಣಿತಂ ಬಿತ್ತು ಗಡೇಂ॥
ಪಾತ್ರಂ ದೇಹಂ ದೇಹಿಗೆ।
ಮೈತ್ರೀಭಾವಮನೊಡರ್ಚಲುಂ ಮೋಹಿಸಲುಂ ॥೬೭
ಎಲ್ಲರುಮೊಳಗಱಿದುಂ ಬಿಡ।
ಲೊಲ್ಲರ್ಬಿಡೆ ಸಮಱಿ ಲೇಸು ಮಾಡಲಿ ಪಡೆವರ್ ॥
ಪೊಲ್ಲೆನಿಪ ಸಪ್ತ[1]ಧಾತುಗ।
ಳೆಲ್ಲಮನೊಳಕೊಂಡ ತೊವಲ ಪಾಪೆಯನೊಡಲಂ ॥೬೮
ನೆಱಪುವುದೊಡಲಂ ಮುನ್ನಂ।
ನೆಱಿದೊಡಲಂ ಬಿಟ್ಟು ಕಳೆದು ಬೇಱೊಂದೊಡಲಂ ॥
ನೆಱಪುವುದಿಂತನವಸ್ಥೆಯ।
ಮರುಳಾಟದೆ ಮರುಳ[2]ಮಾವನಕ್ಕುಂ ಜೀವಂ ॥೬೯
ಪರಿಕಿಸದೆ ನಿತ್ಯಮರಣದ।
ಪರಿಣತಿಯುಂ ಕಳಿವ ಕಾಲಮುಂ ಮೋಹಾಂಧಂ ॥

೧. ಧಾತುಮನೆಲ್ಲ. ಕ॥ ೨. ಮಾಲವಕ್ಕುಂ. ಗ॥

ಪರಮಾಣುವನಣು ದಾಂಟುವ ।
ಪರಿಮಾಣಮನೇಕಸಮಯಮಂ ಸಾವೆಂಗುಂ ॥೨೦

ತೂಗುವಿನಂ ತಲೆ ಸೆರೆಗ ।
ಳ್ಬೇಗಿ ಕೊರಲ್ಕುಸಿವಿನಂ ಕಟಿಲ್ವಿನೆಗಂ ಪಲ್ ।
ಬಾಗುವಿನಂ ಬೆಱ್ ಮನುಜರ ।
ಮೂಗಿನ ಮೇಲಾಡುವಂ ಜವಂ ಪೆಕ್ಕಣಮಂ ॥೨೧

ಆವುದು ಸುಖಮೆಂದೆಳಸುವ ।
ನಾವಸ್ತುವೆ ದುಃಖಹೇತು ದುಃಖೋಪಶಮಂ[1] ॥
ಜೀವಕ್ಕೆ ಸುಖಭ್ರಾಂತಿಯ ।
ನೀವುದು ಭಾವಿಪೊಡಸಾರಮೀಸಂಸಾರಂ ॥೨೨

ಯುವಸಪ್ತಚ್ಛದಮಂ ವಯಃಪರಿಣತಶ್ರೀಖಂಡಮಂ ಬಾಳಶಾ ।
ಖಿವನಶ್ರೇಣಿಗಳಂ ಪಡಲ್ವಡಿಸಿ ನಾನಾದೇಹಭೂಜಂಗಳಂ ॥
ಕವಳಂಗೊಂಡು ಕಲಂಕಿದತ್ತು ಪಲವುಂ ಪಾತಾಳಕಾಸಾರಮಂ ।
ಭವಕಾಂತಾರದೊಳದ್ಭುತಂ ವಿಧಿಮದೋನ್ಮತ್ತೇಭವಿಕ್ರೀಡಿತಂ ॥೨೩

ಸಂಸಾರದೆಱಕದಿಂದಯ ।
ಶಂ ಸಾರದೆ ಮಾಣದೆಂದು ಮೋಹಮನುಳಿದಾ ॥
ತಂ ಸಕಳವಂದ್ಯನುಳಿದಾ ।
ತಂ ಸಕಳಂಕಪ್ರಮತ್ತಕಾತರಚಿತ್ತಂ ॥೨೪

ಆಮಯಮಂದಿರಮಂ ಬಾ ।
ಧಾಮಯಮಂ ತನುವನೆಯ್ದದನ್ನಂ ಭೀಮಾ ॥

೧. ದುಃಖೋಪಗಮಂ. ಕ॥

ಯಾಮಯಮಂ ಸಾಧಿಸುವೆನ।
ನಾಮಯಮಂ ಪ್ರಿಯಮನಮಳರತ್ನತ್ರಯಮಂ ॥೨೫

ನಿಸೆಕಂಗಳ್ನೆಜೀವನ್ನಮುತ್ಪನ್ನತೆಜಿನಾಯುಃಪ್ರಾಣಮಂ ಬೆನ್ನನೇ।
ಜಿಸಿ ಕೊಂಡೋಡುವ ಕಾಲಮೆಂಬೆರಲೆಯಂ ಬೆಂಬತ್ತಿಬೀಳ್ತಂದ ದೇ॥
ಹಸಮೂಹಂಗಳೊಳಾವುದಂ ನೆನೆದು ಮೋಹಂಗೆಯ್ದನೇನೆಂದು ಭಾ।
ವಿಸಿದಂ ದೇಹದನಿತ್ಯಮಪ್ಪ ನಿಲವಂ ಸಾಹಿತ್ಯವಿದ್ಯಾಧರಂ ॥೨೬

ಅನುಲೇಪಂ ಭೂಷಣಂ ತಂಬುಲಮುಣಿಸು ವಿಚಿತ್ರಾಂಬರಂ ಶಯ್ಯೆ ದಾಮಂ। ವನಿತಾಸಂಭೋಗಮೋರಂತಿವನನುಭವಿಸಲ್ ಭಿನ್ನರೂಪಂ ರಸಾಸ್ವಾ॥ ದನಮಿಲ್ಲೀದೇಹಮುಂ ಧಾತುಗಳ ಪುಡುಕೆ ವಿದ್ಯುಲ್ಲತಾ ಸಂಚಳಂ ಜೀ। ವನಮೆಂದಾಮಾನವೇಂದ್ರಂ ಪರಮಸುಖಸುಧಾಸ್ವಾದನೋತ್ಕಂಠನಾದಂ ॥೨೭

ಅಂತು ಸಂಸಾರಶರೀರಭೋಗನಿರ್ವೇಗಮನಪ್ಪುಕೆಯ್ದು ಪೂರ್ವಾನುಭವವಿಷಯಸುಖವಿಮುಖಚಿತ್ತಂ ನಿಜನಿವಾಸಕ್ಕೆ ಬಿಜಯಂಗೆಯ್ದುಪ್ರಪಚರಿತಮಜ್ಜನಭೋಜನವ್ಯಾಪಾರಂ ಕರ್ಪೂರಲಹರಿಬಹಳಮರಿಮಳತಾಂಬೂಳರಾಗರಂಜಿತಾಧರಂ ವಿಚಿತ್ರವೇತ್ರಧರಪುರಸ್ಸರನಾಗಿ ॥೨೮

(ಮಾಲಿನೀವೃತ್ತಂ)

ವಿಕಟಮಕುಟಕೂಟವ್ಯಕ್ತಮುಕ್ತಾಳಿಯಿಂ ತಾ।
ರಕಿತಮಮಿತರತ್ನಚ್ಛಾಯೆಯಿಂದಂಬರಂ ಮೇ॥
ಚಕಿತಮೆನಿಸಿ ಬಂದಂ ಪಾದವಿನ್ಯಾಸಲೀಲಾ।
ಪ್ರಕಟತಮಣಿವೇದೀಶೋಣಪದ್ಮೋಪಹಾರಂ ॥೨೯

೧. ನಿಸಕೆ. ಕ॥ಗ॥ ೨. ಮಿಂತೆಂದಾನರೇಂದ್ರಂ. ಕ॥ ೩. ವಾರಿ. ಗ॥

ಅಂತು ಮಂತ್ರಶಾಲೆಗೆ ಬಿಜಯಂಗೆಯ್ದು ನ್ವಯಾಗತಮಂತ್ರಿಮಂಡಳ ಮಹಾಪ್ರಧಾನಸೇನಾಪತಿಪುರೋಹಿತರಂ ಬರಿಸಿ ಯಥೋಚಿತಾಸನದೊಳಿರಿಸಿ ॥೮೦

ಬರವೇೞ್ದಟ್ಟಲೊಡಂ ಸಸಂಭ್ರಮಪದನ್ಯಾಸಂ ಸ್ಫುರತ್ಕರ್ಣಪೂ।
ರರುಚಿವ್ಯಾಪ್ತದಿಗಂತರಂ ವಿನಯಮಂ ಮುಂದಿಟ್ಟು ಪ್ರೊಕ್ಕಾಸಭಾಂ॥
ತರಮಂ ತಂದೆಯ ಪಾದಪಂಕಜಮನಾಂತಂ ನೆತ್ತಿಯೊಳ್ ಭಕ್ತಿನಿ।
ರ್ಭರಚಿತ್ತಂ ನಿಜಧೈರ್ಯನಿರ್ಜಿತಕುಳಕ್ಷ್ಮೋಣೀಧರಂ ಶ್ರೀಧರಂ ॥೮೧

ಅಂತು ಪದಪಯೋಜಪಾರ್ಶ್ವಮಣಿಕುಟ್ಟಿಮತಳಮನವತಂಸಮಕಾಂತಮಣಿಕಿರಣಜಾಳಜಟಿಳತಂಮಾೞ್ಪುದುಂ ॥೮೨

ರಾಜಿಸಿದುದು ನಿಟಳದೊಳಧಿ।
ರಾಜನ ಪದನಖಮಯೂಖಮಂಜರಿ ಪಾಡಾಂ ॥
ಭೋಜಾನತನೆನಿಸಿದ ಯುವ।
ರಾಜಂಗಧಿರಾಜಪಟ್ಟಮಂ ಕಟ್ಟಿದವೋಲ್ ॥೮೩

ವಿನಯವಿಳಾಸದಿಂ ವಿನತಮಸ್ತಕನಾಗಿರೆ ನೀಳ್ದ ತೋಳ್ಗಳಿಂ।
ತನಯನನಪ್ಪಿಕೊಂಡು ತೆಗೆದು ತರ್ಕೈಸೆ ತೆಕ್ಕನೆ ತೀವೆ ತತ್ಕುಮಾ॥
ರನ ತನುವಂ ನೃಪಾಂಗದ ಮರೀಚಿ ಪಳಂಚಲಿದತ್ತು ಪಟ್ಟಬಂ।
ಧನಸಮಯೋಚಿತಪ್ರಥಮಮಂಗಳತೀರ್ಥಜಳಾಭಿಷೇಕಮಂ ॥೮೪

ಅಂತು ತೆಗೆದು ತರ್ಕೈಸಿ ತನ್ನ ಬಲದ ಕೆಲದೊಳಿಕ್ಕಿದ ಮಣಿಮಯಾಸನಮನೊಲ್ಲದೆ ಪರ್ಯ್ಯಂಕಾಂಕಿತಪಾರ್ಶ್ವದೇಶದೊಳ್ ಕುಳ್ಳಿರ್ದ ಮಗನ ಮೊಗಮನಾನಂದಜಳಲುಳಿತಲೋಚನನಾಗಿ ನೋಡಿ ॥೮೫

೧. ವ್ಯಾಪಿ. ಕ॥ ೨. ಪಂಕಜಮುಮಂತನ್ನೆ. ಕ॥

ನಯಶಾಸ್ತ್ರಂ ಧರ್ಮಶಾಸ್ತ್ರಂ ಕರತಳಕಳಿತವ್ಯಕ್ತಮುಕ್ತಾಫಳಂ ದು । ರ್ಜಯನಾನಾಶಸ್ತ್ರವಿದ್ಯಾವಿಭವಮಭಿನವಂ ಬಾಹುವೀರ್ಯಂ ವಿಪಕ್ಷ ॥ ಕ್ಷಯಕಾಳೋತ್ಪಾತಕೇತುಪ್ರತಿಕೃತಿ ಸಹಜಕ್ಷತ್ರತೇಜಂ ಮದೀಯಾ । ನ್ವಯರಾಜ್ಯಶ್ರೀಲತಾಲಂಬನಮೆನೆ ನೆಗೞ್ದ* ಪುತ್ರ ನಿನ್ನನ್ನನಾವಂ ॥೮೬

ಅದಱಂ ನಿನ್ನ ದೊರೆಯ ರಾಜ್ಯಭರಧುರೀಣನಂ ಪಡೆದು ಪರಮಪುರುಷಾರ್ಥಮನೆಮಗೆ ಸಾಧಿಸುವುದೆ ಕರಣೀಯಮೆಂತೆನೆ ॥೮೭

ಕಿಱಿಯಂದೋದುವುದೆಲ್ಲಮ ।
ನಱಿದನುಭವಿಸುವುದು ವಿಷಯಮಂ ಜೌವನದೊಳ್ ॥
ತೆಱಸಂದು ತಪದ ನೆರವಿಂ ।
ತೊಱೆವುದು ಮುಪ್ಪಿನೊಳದಲ್ತೆ ಪಾರ್ಥಿವಚರಿತಂ ॥೮೮

ಸುತ ನಮ್ಮನ್ವಯದೊಳ್ ಪುರಾತನಜಗದ್ವಿಖ್ಯಾತಭೂನಾಥರೀ ।
ಸ್ಥಿತಿಯಿಂ ರಾಜ್ಯಸುಖಂಗಳೊಳ್ತಣಿದು ತತ್ವಾಭ್ಯಾಸವಿಶ್ರಾಂತಜೀ ॥
ವಿತರಾದರ್ಮಱದೀಕುಳಕ್ರಮಮನಾನಿಂತಿರ್ದ[1] ಸನ್ಮಾನವ ।
ದ್ಧತಿಯಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳತಂಮಾಳ್ಪನೇ ॥೮೯

ಎಂದು ನುಡಿದೆಮಗೆ ಮಗನೆ ತಾತ್ಪರ್ಯಕಾರ್ಯಸಿದ್ಧಿಯಪ್ಪಂತು ರಾಜ್ಯದೊಳ್ನಿಂದು ತಪೋರಾಜ್ಯದೊಳೆಮ್ಮಂ ನಿಲಿಸಿ ನಿಜಾನ್ವಯಾಗತಪರಿಜನಕ್ಕಂ ಜನಪದಜನಕ್ಕಮನುರಾಗಮಪ್ಪಂತು ನಯಾಭಿಮುಖದಿಂ ಸುಖಮನನುಭವಿಸೆಂಬುದುಂ ಕುಮಾರಂ ಮೋಹಾಂಧಕಾರಕಲುಷಿತನುಮತಿಚಕಿತಚಿತ್ತನುಮಾಗಿ ಕಿಱದಾನುಂ ಬೇಗದಿಂ ಮೆಯ್ಯಿಕ್ಕದೆ

1. ಸನ್ಮಾರ್ಗ. ಕ॥

ಮರವಾನಿಸನಂತುಸಿರದಿರ್ದು ಚತುರ್ದಶವಿದ್ಯಾಸ್ಥಾನರತ್ನಪ್ರದೀಪ ನುಂ ಸಹಜಸತ್ವಸಂ[1]ಪನ್ನನುಮಪ್ಪುದಱಿಂ ಕೊರಲ ಗಗ್ಗರಿಕೆಯಂ ಸಂ ವರಿಸಿ ಮುಕುಳಿತಕರಕಮಳನಾಗಿ ॥೯೦

ಫಣಿಪತಿಗಮಮರಪತಿಗಂ ।
ಪ್ರಣಯಪ್ರದಮಪ್ಪ ಪಿರಿಯ ಸಿರಿಯುಂ ದೇವರ್ ॥
ತೃಣಮಾತ್ರಮಾಗಿ ಬಗೆವೊಡೆ ।
ಮಣುಗುಣರಿದನೆಮ್ಮವಂದಿಗರ್ತಾಳ್ದುವರೇ ॥೯೧

ಬಳವದರಾತಿಮಂಡಳಮನಂಡಲೆದುದ್ಧತಬಾಹುದಂಡದಿಂ ।
ಇಳೆಯನಿಳೇಶ ನೀಂ ತಳೆದುದಂ ರಣಬಾಳಕರೆಮ್ಮವಂದಿಗರ್ ॥
ತಳೆವರೆ ಭೂರಿಭೂತಳಮನಶ್ರಮದಿಂ ಪ್ರಬಳಪ್ರಭಂಜನಂ ।
ತಳೆವವೊಲಕ್ಷಮಂ ತಳೆಯಲಾರ್ಕುಮೆ ವೀಜನಮಂದಮಾರುತಂ ॥೯೨

ಅಳವೆ ನಿಜರಾಜ್ಯಲಕ್ಷ್ಮಿಯ ।
ನೊಳಕೊಳ್ವ ಮಹತ್ವಮೆನಗೆ ಗುಣರತ್ನಮಹಾ ॥
ಜಳನಿಧಿಯಲ್ಲದೆ ಕುಳನದಿ ।
ಕುಳಮಂ ಬಗೆವೊಡೆ ಕೊಳಂಗಳೊಳಕೊಂಡಪ್ಪವೇ ॥೯೩

ವನಜವನಕ್ಕೆ ವಿಕಾಸಂ ।
ದಿನಪತಿಯಿಂದಲ್ಲದುೞಿದಱಿಂದಕ್ಕುಮೆ ಪೇೞ್ ॥
ಜನಪತಿ ನಿ[3]ಮ್ಮಿಂದಲ್ಲದೆ ।
ಜನಕ್ಕೆ ಹರ್ಷಪ್ರಕರ್ಷಮಕ್ಕುಮೆ ಪೆಱರಿಂ ॥೯೪

ಎಂದು ಬಿನ್ನವಿಸೆ ವೈಶ್ರವಣಮಹಾಮಂಡಳೇಶ್ವರಂ ನಿನ್ನ ವಿನಯ ವೃತ್ತಿಗುಚಿತಮಪ್ಪುದಾದೊಡಂ ॥೯೫

೧. ಸಂಹನ. ಕ॥ ೨. ಮುಕುಳಿತಾಂಜಳಿಕರ. ಕ॥ ೩. ನಿನ್ನಿಂದ. ಕ॥

ಗುಣನಿಧಿ ನೀಂ ನೆಱೆವೈಧಾ ।
ರಿಣಿಯುಂ ತಾಳ್ದಲ್ಕೆ ತರುಣಯುವಭೇದಂ ಕಾ ॥
ರಣಮಲ್ತಲ್ಲಿಗೆ ಚಿಂತಾ ।
ಮಣಿಯಾದೊಡೆ ಸಾಲ್ಗುಮಲ್ತೆ ಕಿಱಿದೇಂ ಪಿರಿದೇಂ ॥೯೬
ಕಿಸಲಯಕೋಮಳಕರಮಂ ।
ಪಸರಿಸು ಬಾಳಾರ್ಕನಂತೆ ಕಮಳೋತ್ಸವಮಂ ॥
ಪೊಸಯಿಸು ಜನಕ್ಕೆ ಪಡೆ ಸಂ ।
ತಸಮಂ ನಿನ್ನುದಯಮಾರ್ಗಮಭ್ಯುದಯಕರಂ ॥೯೭
ಧರೆಯುಂ ತೋಳೊಳ್ ಲಕ್ಷ್ಮಿಯು ।
ನುರದೊಳ್ ಸಾಮ್ರಾಜ್ಯಪಟ್ಟಮಂ ನೊಸಲೊಳ್ ನೀಂ ॥
ಧರಿಯಿಸು ಧರಿಯಿಸಿ ಮನದೊಳ್ ।
ಗುರುವಚನಮಲಂಘನೀಯಮೆಂಬೀನುಡಿಯಂ ॥೯೮

ಎಂದು ಮತ್ತಮನಿತಾನುಂ ಪ್ರಾರ್ಥನೆಗಳಿಂ ತನೂಜಂ ರಾಜ್ಯಪದ ...ಯೊಳ್ ನಿಲ್ವಂತು ಮಾಡಿ ನಿಜಪರಿಜನದ ಮೊಗಮಂ ನೋಡಿ— ಸಿಂಹಕ್ಕೆ ದಾಡೆಯುಂ ಭಗ್ಗಜಕ್ಕೆ ನಿಗ್ಗವಮುಂ ನಭೋಮಣಿಗೆ ಕಿರಣಮುಮೆಂತಂತೆನಗೆ ನಿಮ್ಮ ಬಲಮೆ ವಿಜಿಗೀಷುವೃತ್ತಿಗೆ ನಿಮಿತ್ತಮೆನಿ...ದುದು ; ನಿಮ್ಮ ಮಂತ್ರಬಲಂ ದೈವಬಲಮಾದುದು ; ಎನ್ನ ನೆಲನಂ ಕುಲಗಿರಿಯಂತೆ ನೀಮೆ ತಾಳ್ದಿದಿರ್ ; ಆನುಂ ನಿಮ್ಮಿಂ ನಿಖಿಳಸುಖಾನು...ವ್ಯಾಸಂಗಮಲ್ಲದೆ ರಾಜ್ಯರಕ್ಷಣವ್ಯಾಸಂಗಮಂ ಮಱೆದುಮಱೆದೆನಿಲ್ಲ ; ...ದುಕಾರಣದಿಂ ರಾಜ್ಯಭರಧುರಂಧರತೆಗೆ ಕುಮಾರಂ ತರುಣನಾದೊಡಂ

೮೯. ನಿಗ್ಗವ— ಗಜದಂತ.

೧. ಮಲಂಘ್ಯನಿಯಮಮೆಂಬಿ. ಕ॥ ೨. ತನೂಜನಂ. ಕ॥

ನೀಮೆ ಸೊಲ್ವಿರ್; ಈತಂ ಕ್ರಮಾರ್ಹಂ; ನಿಮಗತಿವ್ಯಾಮೋಹಭೂಮಿಯುಂ ಕುಲಸ್ವಾಮಿಯುಮಾಗಲ್ತಕ್ಕಂ ; ಅದೆಂತೆನೆ:— ಕುಳಾಚಾರಾಭಿಜನಶುದ್ಧನುಂ ಕೋಪಪ್ರಸಾದಸ್ವತಂತ್ರನುಂ ರಾಜವಿದ್ಯಾನಿಧಾನನುಂ ಧರ್ಮಶಾಸ್ತ್ರದತ್ತಾವಧಾನನುಮಪ್ಪುದಱಿಂ ॥೯೯

ನಿಮಗೆನ್ನಿಂ ಮಿಗಿಲೀತನೀತನಯನಂ ಕೈಕೊಂಡು ಸಾಮ್ರಾಜ್ಯಪ।
ಟ್ಟಮನಾನಂದದೆ ಕಟ್ಟಿ ರಾಜ್ಯಭರಮಂ ಕೈಕೊಳ್ವುದಾನುಂ ಯಥಾ॥
ಕ್ರಮದಿಂ ಸಾಧಿಸುವೆಂ ಪರತ್ರೆಯನಿದೆಂತುಂ ನಿಮ್ಮೊಳಪ್ರಾರ್ಥಿತಂ।
ಕ್ರಮಮಂ ಪಾಳಿಪುದುಂ ಪರಾಕ್ರಮಮನೇಕಾಧಿಷ್ಠಿತಂಮಾಳ್ಪುದುಂ॥

ಎಂದು ಪರಿಜನಮಂ ಮಱುಮಾತಿಂಗೆಡೆಯಿಲ್ಲದಂತೊಡಂಬಡಿಸಿ ಗೃಹಮಹತ್ತರಂಗೆ ಪಟ್ಟಬಂಧಸಮಯಸಮುಚಿತವ್ಯಾಪಾರಮಂ ಬೆಸಸಲೊಡಂ ॥೧೦೧

ಮಿಳಿರ್ದು* ಪ್ರನೇತ್ರದ ಗುಡಿ ಮಣಿ ।
ಕಳಶಂಗಳ ಮೇಲೆ ಪೌರ್ಣಮಾಸೀಶಶಿಮಂ ॥
ಡಳಸಾಂಧ್ಯಕಿರಣಮುದಯಾ ।
ಚಳದೊಳ್ಮಿಳಿರ್ವಂತೆ* ಹರ್ಮ್ಯಶಿಖರಸ್ಥಳಿಯೊಳ್ ॥೧೦೨

ಅಕರುಮಾಡದ ಮುಂದೆ ॥೧೦೩

ಹರಿನೀಳಸ್ತಂಭಮಂ ಜಾಗರಪಡಲಿಗೆಯುಂ ತುಂಗಭೃಂಗಾರಮುಂ ನೆ। ಮ್ಮಿರೆ ಭಾಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾ ॥ ಜಿರಮಂ ಮುಕ್ತಾವಳೀರಂಗವಲಿ ಬಳಸೆ ಕರ್ಕೇತನ

೧೦೪. ಜಾಗರ- ಪಾಲಿಕೆ.

೧. ದುಂತುಂ. ಕ॥ ೨. ಜಾಗದ. ಕ॥ ಗ॥

ದ್ವಾರಶಾಖಾಂ । ತರಮಂ ರತ್ನಸ್ಫುರತ್ತೋರಣಮೆಳಸೆ ಜಿಡಂಗಾದು
ದು ತಾನ್ಸಹಗೇಹಂ ॥೧೦೪

ಆಮೋದಮುದಿತಮಧುಕರ ।
ದಾಮಕದೊಳ್ ನೀಳರತ್ನದಾಮಂ ಮಲ್ಲೀ ॥
ದಾಮಕದೊಳ್ ಮುಕ್ತಾಫಳ ।
ದಾಮಂ ತಡವಾದುವಂದು ಮಣಿಮಂಡಪದೊಳ್ ॥೧೦೫

ಪೆಡೆವರಲಿವೆನಿಸೆ ರನ್ನದ ।
ಸೊಡರ್ಗಳ್ಮೆಯ್ಗುಜಿದು ತೋರ್ಪ ಕಾಳಯುಸರ್ಪಂ ॥
ಗೆಡೆಗೊಟ್ಟಂದಿನ ಜಗುನೆಯ ।
ಮಡುವಂ ಪೋಲ್ತತ್ತು ಮಧ್ಯಮರಕತರಂಗಂ ॥೧೦೬

ಕಟ್ಟದ ಮೇಲ್ಗಟ್ಟನ ಪಸು ।
ರ್ವಟ್ಟೆಯ ಸೂಸಕದ ಪೊನ್ನ ತಿಂಗಣಿಯ ನೆಬಲ್ ॥
ದಿಟ್ಟಗೆ ರಂಗದೊಳೇನಳ ।
ವಟ್ಟರ್ದುವೊ ಕೊಸಗಿನೆಸಟ [1]ಪೊವಲಿಗಳವೋಲ್ ॥೧೦೭

ಚಿತ್ರಲತಾಕಳಿಕಾಶತ ।
ಪತ್ರಂಗಳನೆಸೆವ ರತ್ನವೇದೀವನದೊಳ್ ॥
ಚಿತ್ರಿತಕೃತಕಾಜಳಮೆನೆ ।
ನೇತ್ರೋತ್ಸವಮಾಯ್ತು ಮಧ್ಯದೊಳ್ ಹರಿಪೀಠಂ ॥೧೦೮

ಆಸಿಂಹಾಸನದೆರಟ್ಕೆಲದೊಳಂ ॥೧೦೯
ಶ್ರೀವನಿತಾಕಟಾಕ್ಷರುಚಿಮಂಜರಿಯಂತಿರೆ ಚಾಮರಂ ಜಯ ।

೧. ಸುಕುಮಾರತೆಯೊಲ್. ಕ॥

ಶ್ರೀವನಿತಾಸ್ವಯಂವರವಿನೀಳಸರೋರುಹಮಾಳೆಯಂತೆ ಶೋ ॥
ಭಾವಹಮಾಗೆ ಖಡ್ಗಲತೆ ವೀರರಸಾರ್ಣವಫೇನಪಿಂಡದಂ ।
ತಾವಗಮೊಪ್ಪೆ ಬೆಳ್ಗೊಡೆ ಮನೋಹರಮಾದುದು ರಾಜ್ಯಮಂಡಪಂ ॥

ಮತ್ತಮಲ್ಲಿ ಪುಂಜಿಸಿದ ಪಂಚರತ್ನಸಂಚಯದ ಸರ್ವಧಾನ್ಯರಂಗ ದೊಳ್ ಮನಂಗೊಳಿಸಿ ಪುಣ್ಯನದೀಸಲಿಲಪೂರ್ಣಮುಂ ಘನಸಾರಸುರ ಭಿಮಳಯರುಹಚರ್ಚಿತಮುಂ ಕನಕಸೂತ್ರತ್ರಯಸೂತ್ರಿತಮುಂ ಯ ವಪ್ರರೋಹಪರಿಕಲಿತಮುಂ ದಧಿತಿಳಕವಿಳಸಿತಮುಂ ಧವಳಶಾಲ್ಯಕ್ಷ ತೋಪಲಕ್ಷಿತಮುಂ ಧವಳಕುಸುಮದಾಮಾಭಿರಾಮಮುಂ ಗರ್ಭೀ ಕೃತಸರ್ವೌಷಧಮುಂ ಪ್ರಕಟಿತಪ್ರವಾಳಮುಖರಾಗಮುಂ ಸ್ವಸ್ತಿಕ ಪ್ರಶಸ್ತಮಣಿದರ್ಪಣಸಮರ್ಪಿತಮುಮಪ್ಪ ಕಳಧೌತಮಂಗಳಕಳಶ ಮುಂ ಬಳಸಿ ॥೧೧೧

ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣಕ್ರೌಂಚದೊಳ್ ರೋಚನಂ । ಘನಹಾರೀತಕಹಂಸಿಯೊಳ್ ಹರಿತದೂರ್ವಂ ರಾಜತ ದ್ರೋಣಿಯೊಳ್ ॥ ಘನಸಾರಂ ಹರಿನೀಳಶುಕ್ತಿಕೆಗಳೊಳ್ ಕಸ್ತೂರಿ ಮಾಣಿಕ್ಯಭಾ । ಜನದೊಳ್ ಕುಂಕುಮಪಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮುಂ ॥೧೧೨

ಅಂತು ಮಂಗಳೋಪಕರಣವಸ್ತುವಿಸ್ತೀರ್ಣಮೆನಿಸಿದ ಮಂಡಪ ಕ್ಕೆ ಮಹಾಮಂಡಳೇಶ್ವರಂ ವೈಶ್ರವಣಂ ಅವಿಶ್ರಾಂತಮಂಗಳಾನಕಧ್ವಾ ನಬಧಿರಿತದಿಗ್ಗಜಶ್ರವಣಂ ಅನ್ವಯಾಗತಪರಿಜನಪರಿವೃತಂ ನೀರಾಜನ ಗಜರಾಜತುರಗರಾಜಿವಿರಾಜಮಾನವಾಮದಕ್ಷಿಣಪಾರ್ಶ್ವಂ ನಿಜಭುಜನಿ ವಾಸಿನಿಯುಂ ಸಂಗ್ರಾಮವಿಜಯಲಕ್ಷ್ಮಿಯುಂ ಸಮರ್ಪಿಸುಮಂತೆ ದಕ್ಷಿಣ ಬಾಹುಲತೆಯಂ ಶ್ರೀಧರಕುಮಾರಭುಜಶಿಖರದ ಮೇಲೆ ನೀಡಿ ಪೂವಲಿ

ಯು ಮೇಲೆ ಕೆಂದಳಿರಂ ಪಾಸುವಂತೆ ಕೇಸಡಿಯ ಕೆಂಪು ಪಸರಿಸೆ ಕರು ಮಾಡದಿಂ ತಳರ್ದುವಾಸಮಯದೊಳ್ ಪಳಂಚಿನುಂಗುರದಿಂಚರಮುಂ ಮಣಿನೂಪುರದ ನುಣ್ಚರಮುಂ ನೂಲ ತೊಂಗಲ ಮೆಲ್ಲುಲಿಯುಂ ಪಿಂಡುಗಂಕಣದ ಬಲ್ಲುಲಿಯುಮಡಿಗಡಿಗೆ ನೆಗೞೆ ಪೆಂಡವಾಸದ ವಿಳಾಸಿನಿಯರಲ್ಲಿ ಕೆಲರನಂಗಜಂಗಮಲತೆಗಳಂತೆ ಮಜ್ಜನೋಪಕರಣದ್ರವ್ಯಂಗಳಂ ಧರಿಯಿಸಿಯುಂ ಕೆಲರ್ವನಲಕ್ಷ್ಮಿಗಳಂತೆ ನಾರಂಗನಾಳಿಕೇರಕ್ರಮುಕಮಾತುಳುಂಗಫಳಂಗಳಂ ತಳೆದುಂ ಕೆಲರ್ವಸ್ತ್ರಾಂಗಕಲ್ಪವಲ್ಲಿಗಳಂತೆ ವಿಚಿತ್ರವಸ್ತ್ರಪಟಲಿಕೆಗಳಂ ತಾಳ್ದಿಯುಂ ಕೆಲರ್ಕುಸುಮಾಸ್ತ್ರಶಸ್ತ್ರಶಾಲೆಯಂತೆ ಪೂಮಾಲೆಗಳನಪ್ಪುಕೆಯ್ದುಂ ಕೆಲರಿಕ್ಷುಚಾಪವಿಜಯಲಕ್ಷ್ಮಿಗಳಂತೆ ಧವಳೇಕ್ಷುದಂಡಂಗಳಂ ಪಿಡಿದುಮೊಡನೊಡನೆ ನಡೆಯೆ॥೧೧೩

ಕುಲಗಿರಿ ಬರ್ಪಂತೆ ಧರಾ ।
ತಲನಾಥಂ ಬಂದನಲ್ತು ಜಳಕಮಳಂ ಮೇಣ್ ॥
ಸ್ಥಲಕಮಳಮಲ್ತು ಗಗನ ।
ಸ್ಥಲಕಮಳಮಿದೆನಿಸೆ ಪಿಡಿದ ಧವಳಚ್ಛತ್ರಂ ॥೧೧೪

ಅಂತು ಬಂದು ಮಂದಾಕಿನೀತರಂಗಮಾಳೆಯೆನಿಪ ನವದುಕೂಲಪಾಳಿಧ್ವಜವಿರಾಜಿತರಾಜಮಂಡಪಮಂ ಬಂದು ಪೊಕ್ಕು ॥೧೧೫

ಕೆಲದೊಳ್ ಸಾಮಂತಸೇನಾಪತಿಮಕುಟಧರರ್ಮೇರುಮಂ ಸುತ್ತಿ ಗೋತ್ರಾ । ಚಲಮಿರ್ಪಂತಿರ್ಪಿನಂ ಮಂಗಳಪರಿಕರಮಂ ತಾಳ್ದಿ ಕಾಂತಾಜನಂ ಕ ॥ ಲ್ಪಲತಾಸಂಕಲ್ಪಮಂ ಪುಟ್ಟಿಸೆ ನಿಜತನುಜಂ

೧. ವಸ್ತ್ರಾಂಗವಲ್ಲಿಗಳಂತೆ. ಗ॥ ೨. ರಾಜ್ಯ. ಗ॥

ತನ್ನ ಪರ್ಯಂಕಪಾರ್ಶ್ವ। ಸ್ಥಳಿಯೊಳ್ ಬಾಲಾರ್ಕನಿರ್ವಂತಿರೆ ಜನಪತಿ ಸಿಂಹಾಸನಾಸೀನನಾದಂ ॥೧೧೬

ಆಪ್ರಸ್ತಾವದೊಳ್ ಪುರೋವರ್ತಿ ಮೌಹೂರ್ತಿಕಂ— ದೇವ ಶುಭ ಮುಹೂರ್ತಮಾಸನ್ನಮೆಂದು ಬಿನ್ನಪಂಗೆಯ್ವುದುಂ, ರಾಜಸರ್ವಜ್ಞಾ ಸಾಜ್ಞೆಯಿಂ ಕುಮಾರಂ ದುಕೂಲಕಾಂಡಪಟೀಪರಿವೃತಸ್ನಪನಮಂಡ ಪಕ್ಕೆ ಬಿಜಯಂಗೆಯ್ದು ॥೧೧೭

ಪಳುಕಿನ ಮಜ್ಜನಪೀಠ।
ಸ್ಥಳದೊಳ್ ಕಣ್ಗೊಳಿಸಿದಂ ತದೀಯದ್ಯುತಿ ಮಂ॥
ಡಳಿಸಿರೆ ತನುವಂ ನಿಜಮಂ।
ಡಳದೊಳ್ ಕಣ್ಗೊಳಿಪ ರೋಹಿಣೀರಮಣನವೋಲ್ ॥೧೧೮

ಆಗಳವನೀಶ್ವರಂ ಗುರುಜನಸನಾಭಿಜನಸಮನ್ವಿತಂ ಚತುಷ್ಕೋ ಣಶೋಣಮಣಿಕಳಶವಿಳಸಿತಮಜ್ಜನಮಂಡಪಕ್ಕೆ ಬಿಜಯಂಗೆಯ್ದು ಮೌಹೂರ್ತಿಕನಿರೂಪಿತಶುಭಮುಹೂರ್ತದೊಳ್ ನೀಳಾಚಳಶಿಖಂಡ ಕಮಲಷಂಡಪ್ರಸೂತ ಸಿತಾತರಂಗಿಣೀಸಲಿಲಪೂರ್ಣಶಾತಕುಂಭಕಳಶ ಮನೆತ್ತುವುದುಂ ॥೧೧೯

ತಳರ್ವೇಱಿದ ಸುರಭೂಜದ।
ಸೆಳೆಗೊಂಬುಗಳೆರಡುಮೊಂದೆ ಪರಿಣತಫಳಮಂ॥
ತಳೆದಂತವನೀಶನ ಕರ।
ತಳದೊಳ್ ರಮಣೀಯಮಾಯ್ತು ಮಂಗಳಕಳಶಂ ॥೧೨೦

ಅಂತು ಪೊಂಗಳಸಮಂ ನೆಗಪಿ ॥೧೨೧

ಪರಸುತ್ತುಂ ಮಗನಂ ಪಲ।

೧. ನಲವರಕೆ. ಗ॥

ವರಕೆಗಳಿಂದೊಸಗೆವಱೆಯ ದನಿ ಸಕಳದಿಶಾ ॥
ಭರಿತಮೆನೆ ಮಾಡಿದಂ ಬಿ ।
ತ್ತರದಿಂ ರಾಜ್ಯಾಭಿಷವಣಮಂ ವೈಶ್ರವಣಂ ॥೧೨೨
ಉದಯಗಿರಿಕೂಟಕೋಟಿಯಿ ।
ನುದಯಿಸುವಿನನೆಳವಿಸಿಲ್ಗಳೆನೆ ಭೂಭುಜನೆ ॥
ತ್ತಿದ ಪೊಂಗಳಸದ ಧಾರಾ ।
ಕದಂಬಮೆಸೆದತ್ತು ಕನಕರುಚಿಪಿಂಜರಿತಂ ॥೧೨೩
ಸುರಭಿಸಲಿಲಾಭಿಷೇಕಂ ।
ತರುಣಿಯರಿಂ ಕನಕಕಳಶದಿಂ ತಲ್ಲಾವ ॥
ಣ್ಯರಸಾಭಿಷೇಕಮೆಸೆದುದು ।
ಗುರುಕುಚಕಳಶಂಗಳಿಂ ಕುಮಾರಂಗಾಗಳ್ ॥೧೨೪
ನೀರಂಧ್ರಬಂಧುರಸ್ತನ ।
ಹಾರಾಂಶುಗಳುಂ ವಿಳೋಚನಾಂಶುಗಳುಂ ವಾ ॥
ರ್ಧಾರೆಗಳುಂ ಮೂವಳಸೆ ಕು ।
ಮಾರಂಗೆಸೆದತ್ತು ಮುಖ್ಯಮಂಗಳಸವನಂ ॥೧೨೫

ತದನಂತರಂ ನವದುಕೂಲಪರಿಧಾನಪರಿಶೋಭಿತನುಂ ಮಂಗಳಾಭರಣಭೂಷಿತನುಮಭಿನವಸುರಭಿಕುಸುಮದಾಮಶೇಖರನುಮಾದ ಮಗನನೊಡಗೊಂಡು ಬಂದು ಮಂಗಳವೇದಿಕಾಮಧ್ಯಮನಳಂಕರಿಸಿರ್ದ ಸಿಂಹಾಸನದೊಳ್ ಕುಳ್ಳಿರಿಸಿ ಮಣಿಮಯಮಾತುಳುಂಗಫಳಮನಂಜಳಿಪರಿಪೂರ್ಣಂಮಾಡಿ ॥೧೨೬

ವಿವಿಧಾತೋದ್ಯರವಂ ಪಳಂಚೆ ದೆಸೆಯಂ ಮಾಂಗಲ್ಯಗೀತಸ್ವನಂ ।
ಶ್ರವಣಾನಂದಮನೀಯೆ ಪುಣ್ಯಪಠನಂ ಮೆಯ್ವೆರ್ಚೆ ವಿದ್ವಜ್ಜನ ॥

ಸ್ತ್ರಾವನಂ ಕೈಮಿಗೆ ಬಂದ ವೃದ್ಧಕುಳವೃದ್ಧಾಶೀರವಂ ಪೊಣ್ಮೆ ವೈ।
ಶ್ರವಣಂ ತನ್ನ ಮಗಂಗೆ ಪಾರ್ಥಿವಪವಿತ್ರಂ ಪಟ್ಟಮಂ ಕಟ್ಟಿದಂ॥೧-೨೭

ಅಂತು ತನ್ನ ವೈರಾಗ್ಯರಸಕ್ಕೆ ಸೇತುಗಟ್ಟುವಂತೆ ಮಗಂಗೆ ಪಟ್ಟಮಂ ಕಟ್ಟಿ ಸಕಳಜನಮಂ ನಿಜಪ್ರಸಾದಕಲ್ಪಪಾದಪದಿಂ ತಣಿಪಿ ॥

ಕಳೆದಿತ್ತಂ ನಿಜಮಕುಟಮ ।
ನಿಳಾಧಿಪಂ ಶ್ರೀಧರಂಗೆ ಭೂತಳಭಾರ ॥
ಕ್ಕೆಳವಟ್ಟ ಸಿಂಬೆಯಂ ತೆಂ ।
ಡಿಱಿವುವ ತೇಱಿಂ ತದುತ್ತಮಾಂಗದಿನಾಗಳ್ ॥೧-೨೮

ಯುವರಾಜಂಗರಸಂ ರಾ ।
ಜ್ಯವಿಳಾಸಮನಿತ್ತು ಪರಮಸಂಯಮಸಾಮ್ರಾ ॥
ಜ್ಯವಿಳಾಸತತ್ಪರಂ ಭೂ ।
ರವಾಹಕಂ ಪೊಱೆಯನಿೞಿಪಿದಂತೆವೊಲಾದಂ ॥೧೩೦

[1]ಅಂತು ನಿಶ್ಚಿಂತಸ್ವಾಂತನಾಗಿ ॥೧೩೧

ಸ್ನಪನಪವಿತ್ರಂ ಶುಚಿವ ।
ಸ್ತ್ರಪ್ರೋತಗಾತ್ರಂ ಪ್ರಧಾನಮಂತ್ರವಿಧಾನಾ ॥
ದ್ಯುಪಚರಿತಾಚಮನಂ ಪಂ ।
ಚಪರಮಗುರುಗರ್ಭ್ಯಮೆತ್ತಿದಂ ಧರಣೀಶಂ ॥೧೩೨

ತದನಂತರಂ ಮಹಾಪ್ರವಾಹಿನೀಸಲಿಲಸಂಮಿಶ್ರಕರ್ಪೂರದಳಬಹಳ ಕಾಂತಿದಂತುರಿತಚಂದ್ರಕಾಂತಕಳಶಂಗಳಿಂ ಸುರಭಿಮಳಯರುಹಪಂಕ ಪಿಂಜರಿತರಜತಶುಕ್ತಿಕೆಗಳಿಂ [2]ಸಜಳಧವಳಕಳಮಾಕ್ಷತಕ್ಷೀರಗೌರ ಪಾಂಡುರಿತಕರ್ಕೇತನಕರಂಡಕಂಗಳಿಂ ನವೀನಪ್ರಸೂನಮಧುವಿಲೀನ

೧. ಗ॥ ಪುಸ್ತಕದಲ್ಲಿ ಇಲ್ಲ. ೨. ಸಜ್ಜಳ. ಗ॥

ಮಧುಕರಪಟಳಕರ್ಬುರಿತರತ್ನಪಟಳಿಕೆಗಳಂ ಸುಪಕ್ವಭಕ್ಷ್ಯೋಪದಂಶ ಪ್ರಚುರಚರುವಿಚಿತ್ರವರ್ಣಶಬಳಿತಸುವರ್ಣಪರಿಯಣಂಗಳಂ ಉನ್ಮುಖಮಯೂಖಮಾಣಿಕ್ಯದೀಪಕಿರಣಾರುಣಿತಮರಕತಮಣಿಪುತ್ರಿಕೆಗಳಂ ಬಹಳಕಾಳಾಗರುಧೂಪಧೂಮಶ್ಯಾಮಳಿತಕಳಧೌತಧೂಪಘಟಂಗಳಂ ಕ್ಷೀರಾದಿಸವನಪಾವನರಸಪವಿತ್ರಿತಶಾತಕುಂಭಕುಂಭಂಗಳಂ ಗಂಧಸಲಿಲಸಂಭೃತವಿಶಾಳಹರಿನೀಳಭೃಂಗಾರಂಗಳಂ ನಿಜಪ್ರಭಾಪಟಳಪಲ್ಲವಿತಮಣಿಶೋಣಕೋಣಕಳಶಂಗಳಂ ಸ್ಫಟಿಕಮಣಿಕಿರಣಜಾಳಜಟಿಳಿತಮಧ್ಯರಂಗದಿಂ ಸಂಗೀತಕರಸತರಂಗಿತಬಾಹ್ಯರಂಗದಿಂ ಸ್ಥೂಳಮುಕ್ತಾಫಳಮುಕುಳಿತವಿವಿಧರಂಗವಲಿಯಿಂ ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು ದರ್ಶನಸ್ತವನಮುಖರಮುಖಂ ಯಥಾವಿಧಿಯಿನಭಿಷೇಕಾರ್ಚನಾವಿಧಿಗಳಂ ತೀರ್ಚಿ ಜಿನೇಂದ್ರಮುಖನಿರೀಕ್ಷಣಹರ್ಷಪುಳಕಿತಸರ್ವಾಂಗನಾನಂದಬಾಷ್ಪಸಲಿಲವಿಲುಳಿತವಿಳೋಚನಂ ನಿಟಳತಟಕುಟ್ಮಳಿತಾಂಜಳಿಪುಟಂ ವಿನಯವಿನಮಿತಶಿರಸ್ಸರೋಜಂ ಗಂಧಸಲಿಲಶೇಷಾಕ್ಷತಾಕುಸುಮಶೇಖರಂ ಜಿನಚರಣಚಂದನತಿಳಕವಿಳಸಿತವದನಾರವಿಂದಂ ದೇವತಾನಿಕೇತನಮಂ ಪೊಱಮಟ್ಟು ಅಪಗತಧೌತವಸನಂ ಗಂಗಾತರಂಗಧವಳಾವಾಸಕ್ಕನ್ನವಾಸಕ್ಕೆ ಬಿಜಯಂಗೆಯ್ದು ॥೧೩೩

ಅಮೃತಾಹಾರಮನುಂಡು ಚಂದನಜಳಪ್ರಕ್ಷಾಳ್ಯದೊಳ್ ಯಕ್ಷಕ।
ರ್ದಮಸಂಮರ್ದನಹಸ್ತದೊಳ್ಪೊಳೆಯೆ ತಾಂಬೂಲೀದಳಂ ರತ್ನಕು॥

೧. ಪುಟಂ. ಗ॥ ೨. ಶೋಣಮಣಿ. ಗ॥ ೩. ವಲ್ಲಿಯಿಂ. ಗ॥
೪. ಕ್ಷತ. ೫. ತಾಂಬೂಲಾದಿಗಳ್. ಗ॥

ಟ್ಟಮದೊಳ್ ಮೆಲ್ಲನೆ ಲೀಲೆಯಿಂ ಸುೞಿದು ಹಂಸಾಂಸೋಪಧಾನಪ್ರಥಾ
ನಮೃದುಪ್ರಚ್ಛದತಲ್ಪದೊಳ್ನೆಲಸಿದಂ ಸಾಹಿತ್ಯವಿದ್ಯಾಧರಂ ‖ ೧೩೪

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಶ್ರೀಧರಕುಮಾರಪಟ್ಟಬಂಧೋತ್ಸವವರ್ಣನಂ
ನವಮಾಶ್ವಾಸಂ ಸಮಾಪ್ತಂ.

— ದಶಮಾಶ್ವಾಸಂ —

———o———

ಶ್ರೀಗಂ ಪರಮಾತ್ಮಪದ।
ಶ್ರೀಗಂ ನೆಲೆ ಧರ್ಮಮೆಂದು ಧರ್ಮಧ್ಯಾನೋ ॥
ದ್ಯೋಗಂ ಕೈಮಿಗೆ ವಿಷಯವಿ।
ರಾಗಮನಂ ಸುಖದಿನಿರ್ದನಭಿನವವಂಪಂ ॥೧

ಅಂತಿರ್ಪುದುಂ ॥೨

ಧರಣೀಶನ ಚಿತ್ತದ ಶಾಂ।
ತರಸಂ ನೆಲೆವೆರ್ಚೆ ಬಿಸುಪುಗಿಡಿಸಿತ್ತಕ್ಕುಂ ॥
ಖರಕಿರಣಂಗಳನೆಂಬಂ।
ತಿರೆ ಭೋಂಕನೆ ಬಿಸಿಲ ಬಿಸುಪು ಮಸುಳ್ದತ್ತಾಗಳ್ ॥೩

ಕರುಣಾರಸಮುಹಿತಂ ರಾ।
ಗರಹಿತನೀಮುಹಿವನಿದಿರೊಳಾನೆಂತಿರ್ಪೆಂ ॥
ಖರದಂಡಪ್ರಿಯನೆಂ ರಾ।
ಗರುಚಿಯೆನೆಂಬಂತೆ ಮೇರುವಂ ರವಿ ಸಾರ್ದಂ ॥೪

(ಹರಿಣೀವೃತ್ತಂ)

ಸಿರಿಗೆ ನೆಲೆಯೆಂದೆನ್ನಂ ಮುನ್ನಂ ನೃಪಂ ಪಿಡಿದಿರ್ದನಾ।
ಸಿರಿಯ ದೆಸೆಯಂ ಬಿಟ್ಟಂ ವೈರಾಗ್ಯದಿಂದೆನಲೆನ್ನ ಕ ॥
ಣ್ಬುರಿಯೆ ಕನಸಿಂ ಪೋಯೆತ್ತೆಂದುದ್ವೇಗದಿಂ ಮುಗಿದಂತೆವೋ।
ಲಿರುಳ ಪುಗಿಲೊಳ್ ಸಂಕೋಚಂಗೊಂಡುದಂಬುಜಮಂಡಳಂ ॥

೪. ದಂಡ- ಮಾಠರ, ಪಿಂಗಳ, ದಂಡ ಎಂಬವರು ಸೂರ್ಯನ ಪಾರಿಪಾರ್ಶ್ವಕರು.

೧. ಭೋಂಕೆನೆ. ಕ॥ಗ॥

ಸ್ಮರರಾಗಂ ಮನದೊಳ್ಬೇ।
ರ್ವರಿದ ರಥಾಂಗಕ್ಕೆ ದಿವಸದವಸಾನದ ನೋ॥
ವರಿದಾದುದಧಿಕರಾಗಂ।
ವಿರಾಮದೊಳ್ ವಿಷಮಮಪ್ಪುದೊಂದಚ್ಚರಿಯೇ ॥೬

ಪರಿಹರಿಪೆನೆನ್ನ ದೋಷಾ।
ನುರಾಗಮಂ ಸಾಲ್ವುದಖಿಳಪಾವನಮಪ್ಪೀ॥
ಧರಣೀನಾಥನ ಧರ್ಮಾ।
ನುರಾಗಮೆಂಬಂತೆ ಸಂಜೆ ಪರೆದತ್ತಾಗಳ್ ॥೭

ಅಂತು ನೇಸರ್ಪಡುವುದುಂ ॥೮

ಅರುಣಕರಕಿಸಲಯಾಗ್ರದೊ।
ಳಿರೆ ತಾರಾಸುರುಚಿರಾಕ್ಷಮಾಳಿಕೆ ಸಂಧ್ಯಾ॥
ಚರಣನಿಯಮಾನುರಕ್ತಂ।
ಗಿರಿಶಿಖರದೊಳಿಸೆದನಮೃತರುಚಿಯೋಗೀಂದ್ರಂ ॥೯

ತಮಮುಂ ರಜಮುಂ ಕಿಡೆ ಸ।
ತ್ವಮೊಂದೆ ನಿಂದಂತೆ ನಯನಸುಖಮಯನಾಡಂ॥
ತಮಮುಂ ನಿಜಸಂಧ್ಯಾರಾ।
ಗಮುಮೊರ್ಮೆಯೆ ಪಿಂಗಿ ಪೋಗೆ ಕುವಳಯಮಿತ್ರಂ ॥೧೦

ಅಂತು ಶಾಂತರಸವಿಷಯಮಾದ ದಿವಸದವಸಾನಸಮಯದೊಳ್ ಸಂಧ್ಯಾನಿಯಮಮಂ ನಿರ್ವರ್ತಿಸಿ ॥೧೧

ತಪದೊಳ್ಕಳಿಪದೆ ಕಾಲಮ।
ನಪಾರಮಂ ವಿಷಯಕಾಂಕ್ಷೆಯಿಂದಿನ್ನೆವರಂ॥

೧. ನೋ। ವಿರಿದಾದುದ, ಕ॥, ನೋ। ವವತರಿಸಿದ, ಗ॥ ೨. ಸಾಲ್ದುದ, ಗ॥

ಕ್ಷಪಿಯಿಸಿದೆನೆಂದು ನಿರ್ವೇ।
ಗಪರಂ ವೈರಾಗ್ಯಪರಮುಪದದೊಳ್ನಂದಂ ॥೧೨
ಸಕಳಚತುರ್ಗತಿದುಃಖ್ಯೆ।
ಕಕಾರಣಂ ಕ್ರೋಧಮಾನಮಾಯಾಲೋಭಾ॥
ತ್ಮಕಮುಶುಚಿದ್ರವ್ಯಕ್ಷೇ।
ತ್ರಕಾಲಭವಭಾವಭೇದಮೀಸಂಸಾರಂ ॥೧೩

ಎಂದು ಭಾವಿಸುತ್ತುಂ ಸೆಜ್ಜೆವನೆಗೆ ಬಿಜಯಂಗೆಯ್ದು ಸುಖದಿ ಸುಪ್ತನಿರೆ ॥೧೪

ಮೂಪಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಳಂ।
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ॥
ರೋಡಿ ಕಟಿಲ್ದು ಬೀಱ್ವ ಕಳವ್ರೊಗೆಣೆಯಾಗಿರೆ ತಣ್ಣನಪ್ಪೆಲರ್।
ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್॥

ಭವನವನಂಗಳಂ ಸರಸಸಾರಸಭೃಂಗರಥಾಂಗನಾದಮು।
ತ್ಯವಿರಳಮಾಗಲುಣ್ಮಿದುವು ಭೋಂಕೆನೆ ಭೂಭುಜ ಸೆಜ್ಜೆಯಿಂದಮು॥
ಪ್ಪವಡಿಸಿ ಮುಖ್ಯಮಂಗಳಪರಂಪರೆಯಿಂ ಜಿನಪೂಜೆಯಂ ಮಹೋ।
ತ್ಸವದೊಳೆ ಮಾಡಿ ಸಾಧಿಸಘುಸುಘುವಿರೋಧಿಯುನೆಂಬ ಮಾಱ್ಕೆಯಿಂ॥

ಕರೆಯೆ ಗೃಹದೀರ್ಘಿಕಾವಿಹ।
ಗರಾಜಿ ಪರಿಹರಿಸಿ ಬಂದು ನೃಪನಯುನೇಂದೀ॥
ವರಮಂ ಕಾತರೆ ನಿದ್ರಾ।
ವರವಧು ಮೋಹಿಸಿದಳಾಗಳಿಂದೀವರಮಂ॥೧೫

೧. ದುಃಖ। ಕ್ಕೆ. ಗ॥ ೨. ಸೆಜ್ಜೆಗೆ. ಕ॥ ೩. ದುಣ್ಮಿದುವುಭೋಂಕೆನೆ. ಕ॥ಗ॥

ದಿವಸಶ್ರೀಗೆತ್ತಿಸೆ ಗಗ।
ನವಲ್ಲಭಂ ಕಾಂಚನಾತಪತ್ರವನೀತ॥
ಱ್ತವೆ ಪಂಜರಶಾಖೆಗಳಿನೆ।
ರವಿ ಪಸರಿಸೆ ಕಿರಣಜಾಳಮುದಯಂಗೆಯ್ದಂ ॥೧೮

ಅಂತು ನೇಸಮೂಡುವುದುಮನುಷ್ಟಿತವಿಹಿತಾನುಷ್ಠಾನಂ ಧರ್ಮಸಹಾಯನಪ್ಪುದಱಿಂ ವಿವಿಧಾಯುಧನಿವೃತ್ತಿಗೆಯ್ದಂ ನಿಶ್ಚಳಗುಣಪತಾಕಾಸಮೇತನಪ್ಪುದಱಿಂ [1]ಚಂಚಚ್ಚಳಪಾಳಕೇತನಮಂ ನಿಱಿಕೆಯ್ದಂ ಶ್ರುತಸ್ಕಂಧಚ್ಛಾಯಾನಿಷಣ್ಣನಪ್ಪುದಱನಾತಪತ್ರವಿಳಾಸಮನುದಾಸೀನಂಗೆಯ್ದಂ ರತ್ನ[2]ತ್ರಯೀಭೂಷಣಭೂಷಿತನಪ್ಪುದಱಿಂ ಪಲತೆಱದ ಭೂಷಣಮನುಱುಸೆಱಗೆಯ್ದಂ ಆರ್ತಘರ್ಮನಿರ್ಮುಕ್ತನಪ್ಪುದಱಿಂ ಪಾಳವ್ಯಜನಪವಮಾನನನವಮಾನಂಗೆಯ್ದುಮದಲ್ಲದೆಯುಂ॥೧೯

ಇದು ಮಾಟದ ಸಿಂಹಾಸನ।
ಮಿದನೇಱುವುದಾವಗಹನಮೆನಗೆಂ[3]ದದನೊ॥
ಲ್ಲದೆ ಕಲ್ನೆಲೆಯೊಳ್ ಗಿರಿಶಿಖ।
ರದ ಸಿಂಹಾಸನಮನೇಱಲುದ್ಯತನಾದಂ ॥೨೦

ಇದು ಜಾತಿಭಂಗಮಂ ತಳೆ।
ದಾದು ಮಾತಂಗಪ್ರಸೂತಮುನ್ಮದಮಧುಪಾ॥
ಸ್ಪದಮೇವುದೆಂದದಂ ಮು।
ಟ್ಟದ ತೆಱದಿಂ ತೊಱೆದನಂದು ಗಜವಾಹನಮಂ ॥೨೧

೧. ಚಂಚಳ. ಕ॥ ೨. ತ್ರಯ. ಗ॥ ೩. ದವ. ಗ॥

ನಡೆವುದು ಕುಪಥದೊಳೆಂತುಂ ।
ಪಿಡಿಯಿಸಿದುದು ಕೀಲನೆಂದು ಹಯವಾಹನಮಂ ॥
ಕಡೆಗಣಿಸಿ ಧರ್ಮಪಥಮುಳ ।
ವಡೆ ಮೇಲಂ ಪಿಡಿವ ಬಗೆಯನವಸಂ ಬಗೆದಂ ॥ ೨೨

(ತ್ರಿಪದಿ)

ನಿಜಪರಿಭ್ರಮಣದಿಂ ರಜಮುಪ್ಪುದೆಂದು ಭೂ ।
ಭುಜನೊಲ್ದನಿಲ್ಲ ರಥಮಂ ನೀರಜಮುಪ್ಪ ॥
ನಿಜಮನೋರಥದ ನೇಱವಿಂದೆ ॥ ೨೩

ಅಂತು ನಿಸ್ಪೃಹಸ್ವಾಂತನಾಗಿ ತಪೋವನಕ್ಕಂದೇ ಪೋಗಲೆಂದೆ ನಿಶ್ಚಯಿಸಿ ಮುಂದಿರ್ದ ನಿಜನಂದನನ ವದನಾರವಿಂದಮಂ ನೋಡಿ ॥

ನಿನಗೆ ಕಲಿಸುವುದೆ ವಿದ್ಯಾ ।
ಧನಂಗೆ ಪೇಱಪೇಱವನಿನಿತೆ ಮಱಯದೆ ಮನದೊಳ್ ॥
ತನಯ ನಿಲಿಸುವುದು ಗುರುಜನ । 
ವಿನಯಮನತಿಶಯದ ಧರ್ಮಪರಿಪಾಲನಮಂ ॥ ೨೪

ಎಂಬುದುಂ ನಿಜಜನಕಗಮನಪರಿಚ್ಛೇದಮನಱದು ಶಿಖಿಮುಖಕ್ಕೆ ವಂದ ಪಾದಪಸದಂತೆ ನಿಜನಿಸರ್ಗಧೈರ್ಯಗುಣಂ ದೆಸೆದೆಸೆಗೆ ಪೋಗೆ ॥

ಮನಮೆಳದಾಗೆ ಮನ್ಯು ಮಿಗೆ ತಱ್ತುಮೆಯಿಂ ಕರೆಗಣ್ಮೆ ಸೂಸೆ ಕ ।
ಣ್ಬನಿ ಪೊಱಪೊಣ್ಮೆ ಗದ್ಗರಿಕೆ ಹಾರವಮುತ್ಕಟಮಾಗೆ ನಂದನಂ ॥
ಜನಕನ ಕಾಲ ಮೇಲೆ ಕವಿದಿರ್ದಟುತುಂ ಪಿರಿದಪ್ಪ ಶೋಕಮಂ ।
ಜನಿಯಿಸಿದಂ ದಲಾಸಭೆಗೆ ತಂದೆಯಗಲ್ಕೆಯನಾರೊ ಸೈರಿಪರ್ ॥ ೨೫

೧. ಪ್ರಿಯ. ಕ॥ ೨. ಕೈಪೋ. ಕ॥ ೩. ಮುಂತಿರ್ದ. ಕ॥
೪. ದೆ. ಗ॥ ೫. ಮನ್ನು. ಕ॥ಗ॥

ಉಡಿಸಿಯುಮಾಡಿಯುಂ ನಡಬಿಡಾಳ್ದನಗಲ್ಕೆಯು[೧]ನೋವೆ ಚಿತ್ತ
ದೊ। ಳ್ಮಡಗಿದ ಕೆಂಡದಂತೆ ಕನಲುತ್ತಿರೆ ಕಾಸಿದಯಶ್ಶಲಾಕೆಯಂ ॥
ತೊಡನೆ ಕುಮಾರನಟ್ಟೆಯು ಸರಂ ಕಿವಿಯಂ ಪುಗೆ ಕಣ್ಣನೀರ್ಗಳಂ ।
ಸಿಡಿಸಿಡಿದಂದು ಶೋಕರಸಭಾಜನವಾದುದು ತತ್ಸಭಾಜನಂ ॥೨೮

ಆಗಳಂತಃಪುರಕಾಂತೆಯರುಂ ಪೆಂಡವಾಸದೆಳವೆಂಡಿರುಮರಸನ ತ
ಪ್ಪೋಗಮನದೊಳೊದವಿದ ವಿಷಾದಮಂ ಸೈರಿಸದೆ ॥೨೯

ನೋಡುವೆನೆಂದು ಪೋಗಿ ಪಡೆಯಂ ಸಿಡಿಲಿಂ ಕೆಡೆದಾಲಮಂ ನೃಪಂ ॥
ನೋಡುವುದೆತ್ತ[೩]ಲೊಲ್ದಲಿಸಿ ಮನ್ನಿಸಿ[೪]ಮೆಚ್ಚಿಸಿ ನಮ್ಮನೀಗಳೀ ।
ಡಾಡಿ ತಪಕ್ಕೆ ಪೋಪ ಬಗೆಯೆತ್ತಲಿ[೫]ದಾರಡಿಯೆಂದು ಮೆಯ್ಯನೀ ॥
ಡಾಡಿ [೬]ಬೆಳತುರ್ಗದಲ್ತುದಲಿಂದವರೊಧಪಥೂಕದಂಬಕಂ ॥೩೦

ಬಿಡುತರೆ ತೋಱಕಣ್ಬನಿ ಪದಾಂಬುರುಹಕ್ಕೆಱಗಿರ್ದು ಲಲ್ಲೆಗೆ।
ಯ್ದೊಡವಿಱಕೆಯ್ದು ಪೋಪನರಸಂ ಪುರುಡಿಂದಳವಾತಿನೇವಮಂ ॥
ಪಿಡಿದು ತಪೋವನಕ್ಕೆ ನಡೆವಲ್ಲಿ[೭]ಗಡೆಮ್ಮಳಲಲ್ಲೆಗಿನ್ನೊಡಂ ।
ಬಡುವನೆ ಪೇಱಮೆಂದು ದೆಸೆಗಾಣರೆ ಕಣ್ಬನಿಯಿಂ ಲತಾಂಗಿಯರ್ ॥೩೧

ಪುರುಡಿನ ಮಾತನೋತವಳ ಲಲ್ಲೆಯ ಮೆಲ್ನುಡಿಯಂ ವಿಪಂಚಿಯಿಂ।
ಚರಮನೆರಲ್ಕಲಂಗಳೊಳವೊತ್ತುವ ಬಣ್ಣದ ನುಣ್ಬರಂಗಳೊಳ್ ।
ಬೆರಸಿದ ಗಾಯಿನೀರಸದ ಗಾನಮನಾಲಿಸುವೀನ್ನೃಪಂಗೆ ನಿ ।
ಬ್ಬರಿಸುವ ಕಾಡ ಸೀಱುಡುವಿನಬ್ಬರಮಾಲಿಸುವಂತುಟಾದುದೇ ॥೩೨

ಘನಕುಚಯುಗಳವು ತಲೆಗಿ ।
ಬೆನೆ ರತ್ಯಂತವ್ಯಸುಪ್ತಿಯಂ ಮೆಱವೆಮ್ಮೀ ॥

೧. ನೋವೊ. ಕ॥, ನೋವ. ಗ॥ ೨. ಳಾದ. ಕ॥ ೩. ವೊಲ್ದೊಲಿಸಿ. ಗ॥
೪. ಮೆಚ್ಚೆ. ಗ॥ ೫. ವಿದಾರಡಿ. ಕ॥ ೬. ಬಿಮುತ್ತೆರ್ಗ. ಗ॥ ೭. ಗಡೆ. ಗ॥

ಮನದಾಣ್ಮಂ ನಿರ್ಜಂತುಕ।
ಮೆನಿಸಿದ ಪಾಸಱೆಯ ಮೇಲೆ ಪಡಲಾರ್ತಪನೇ॥ ೩೩
ಇವು ಪಱೆದೀಡಾಡಲ್ತು ।
ಕ್ಕುವೆ ತುಂಬಿಯ ಬಂಬಲೆಂಬ ಪಂಬಲನಾರ್ಗಂ॥
ಬವರಿಸುವ ನೃಪನ ಕುಂತಳ।
ನಿವಹಂಗಳ್ ಬಹಳಮೃಗಮದಾವೆಡೆದುಗಳ್? ॥೩೪

ಪೂವಲಿಗೆಯ್ದ ಪೂವಿನ ತೊಂಬೆಯ ನಿಬ್ಬರಮಪ್ಪ ನೋಂಕಿನೊಳ್। ನೋವುವೆನಿಪ್ಪ ಮೆಲ್ಲಡಿಯನೆಂತಿಡುವಂ ಮಹಿಪಂ ತಪೋವನ॥ ಗ್ರಾವವಿಕೀರ್ಣಮಪ್ಪೆಡೆಯೊಳೆಂದಳವಲ್ಲದ ಕಣ್ಣ ನೀರ್ಗಳಂ। ತೀವಿದುದೆಂದು ಗಗ್ಗರಿಕೆ ಕೈಮಿಗೆ ವಾರವಿಳಾಸಿನೀಜನಂ॥೩೫

ಅಂತು ನಿಜಸಭಾಜನಮನಸ್ಸರೋವರಂ ಶೋಕರಸಪ್ರವಾಹಭರದಿಂ ಕಲಂಕೆಯುಂ ಕಣ್ಣೀಲರ ತೀಟದಿಂ ಕಿರ್ಜುಕೋಡಿ ಸೇಡುಗೊಳ್ಳದುದ್ದಮುರಿವಂತವರ ಶೋಕವಿಕಳತೆಯ ತನಗೆ ವೈರಾಗ್ಯಮಂ ಪೆರ್ಚಿಸೆಯುಂ ವೈಶ್ರವಣವಲ್ಲಭಂ ಚರಣಸರಸೀರುಹದೊಳೆಱಗಿರಳ್ವ ಮಗನಂ ನೆಗಪಿ ವಿಶಾಳಕಮಳದಳಕಳಿತತುಷಾರಬಿಂದುವನರವಿಂದಬಾಂಧವನೆಳವಿಸಿಲಿಂ ತೊಡೆವಂತೆ ಕರಕಿಸಲಯಂಗಳಿಂ ಕಣ್ಬನಿಯಂ ತೊಡೆದು॥

ಗುಣವಱಿಯೆ ನೋವುದೇವುದೊ ।
ಗುಣದಭ್ಯುದಯಕ್ಕೆ ನೋವು ಚೋದ್ಯಮೆ ದಿವಿಜಾ॥
ಗ್ರಣಿಗಳನೆಱಗಿಪ ತಪವಿದ।
ನೆಣಿಸದೆ ಜಪನುತೆ ಮೋಹಮೂರ್ಛಿತನಪ್ಪೈ ॥೩೬

೩೬. ಕೋಡಿ- ಧಾ.ಕೋಡು- ಶೈತ್ಯೇ. ಸೇಡುಗೊಳ್ಳದೆ- ಕಡಮೆಯಾಗದೆ.

ಅಱಿಯಮೆಯಿಂ ಪೆಣ್ಬುಡೆ ಬಾ ।
ಯ್ದಱಿದುಮ್ಮಳಿಸುವ್ರೊಡಮವರ ದುಷ್ಪರಿಣತಿಯಂ ।
ಮಱೆಯಿಪುದುಗೆಟ್ಟು ನೀಂ ಮೆ ।
ಯ್ಮಱೆವೊಡೆ ಸುರಹಿತಮನಹಿತಮಂ ನೆನೆಯಿಪರಾರ್ ॥ ೩೮

ತನಗಂ ಪೆಱಂಗವಾಕ್ಯಂ ।
ದನವಧಪರಿದೇವನಂಗಳಂ ಜನಿಯಿಪುದುಂ ।
ಜನಿಯಿಸುಗುಂ ದುರ್ಗತಿಯಂ ।
ಧನಮೆಂಬೀದಿವ್ಯಭಾಷೆ ನಿನಗಶ್ರುತಮೇ ? ॥ ೩೯

ಎಂದು ಮಗನ ವಿಷಾದವಹ್ನಿಯಂ ಸುಭಾಷಿತಾಮೃತದಿಂ ನಂದಿಸಿ ಪರಿಜನಮಂ ಪ್ರತ್ಯೇಕಸಮರ್ಪಣಂಮಾಳ್ಪ ಸಮಯದೊಳ್ ॥ ೪೦

ಪೊರೆದಂ ತನ್ನೊಳಭೇದಮಾಗೆ ಪಿರಿದುಂ ಕೊಂಡಾಡಿದಂ ನಮ್ಮನೀ ।
ಧರಣೀಶಂ ಧರಣೀಶನಿಂ ನಮಗೆ ಮುನ್ನಂ ದೃಷ್ಟಸೌಖ್ಯಂ ನಿರಂ ।
ತರಮಾಯ್ತೀಗಳದೃಷ್ಟಸೌಖ್ಯದೆಡೆಗಂ ಸಂದೇಹಮೇಂ ತಾನೆ ದಲ್ ।
ಗುರುವಾದಂ ವಲಮೆಂದು ಪೊಣ್ದಿದೊಡವೋಗಲ್ ಮಾನ್ಯರಾಜನ್ಯಕಂ ॥

ಅಂತು ತನ್ನೊಡನೆ ತಪಕ್ಕೆ ತೆಱಸಂದ ಮೂನೂರ್ವರರಸುಮಕ್ಕಳ್ಪರಸರಮನೆಯಂ ಪೊಱಮಟ್ಟು ರಾಜಮಾರ್ಗಂಬಿಡಿದು[3] ನಡೆವೆಡೆಯೊಳೆಡೆಗಿಱಿದು ನೆರೆದು ನಿಂದು ನೋೞ್ಪ ಪುರಜನದೊಳಖಿಳವಿದ್ಯಾಪರಿ[4]ಣತರಪ್ಪ ವಯಃಪರಿಣತರ್ ತಮ್ಮೊಳಂತೆಂಬರ್ ॥ ೪೧

೩೮. ಅಱಿಯಮೆ- ಅಜ್ಞಾನ.

೧. ತಮ್ಮೊಳ್. ಕ॥ ೨. ಬಲ. ಕ॥ಗ॥
೩. ಮಾರ್ಗವಿಡಿದು. ಕ॥ ೪. ಪರಿ. ಕ॥

ಸುರರಾಜಂ ಬಯಸಲ್ಕೆ ತಕ್ಕ ಸಿರಿಯಂ ಪುಲ್ಲಿಂ[೧]ಗಡಂ ನೊಚ್ಚಿತಾ।
ಗಿರೆ ಕಂಡಂ ಲಲಿತಾಂಗಮಂ ತಪದಲಂಪಿಂ ಕಲ್ಲ ಕಂಬಕ್ಕೆ[೨] ವೆ ।
ಯ್ಸರಿಗಂಡಂ ಪ್ರಿಯದಾರದಾರಕಧೃತವ್ಯಾಮೋಹಮಂ ವಜ್ರವ।
ಲ್ಲರಿಯಂ ಬಾಳಮೃಣಾಳತಂತುಗೆಣೆಗಂಡಂ ಗಂಡನೇಂ ಧೀರನೋ ! ।

ಮತ್ತಮಲ್ಲಿ ಕೆಲರಳೀಕವಿವಗ್ಧರಪ್ಪ ಕುಹೇತುಕುಶಲರಿಂತೆಂಬರ್ ।

ಅರಸಂ ಬೇಪೆಸಱ್ಂದನಿಟ್ಟು ಕಿಱುಗೂಸಿಂಗಾವಗಂ ನುಂಗಲೀ ।
ಧರೆಯಂ ಪಣ್ಣಿದರೀ[೩]ಪ್ರಧಾನಪುರುಷವರ್ಗಾಯಾನಟೀಲಾಸ್ಯಜ ।
ರ್ಜರಹಸ್ತಬಱುಗರ್ಜನಮಂ ಖಳರ ಮಾತಂ ನಂಬಿ ಮೇಗಿಲ್ಲದೀ ।
ಸಿರಿಯಂ ಬಿಟ್ಟು ತಪೋವನಕ್ಕೆ ನಡೆವಂ ಭೂಪಾಳನೇಂ ವ್ಯಾಳನೋ ।

ಮತ್ತಮಲ್ಲಿ ಕೆಲರ್ವಿಷಯರಸವಿಲೀಯಮಾನಮಾನಸರಪ್ಪ ಸುಕುಮಾರಮತಿಗಳಂತೆಂಬರ್ ॥೪೬

ಪಿರಿದಪ್ಪ ಪುಣ್ಯದಿಂದಂ ।
ದೊರೆಕೊಂಡೀರಾಜ್ಯಲಕ್ಷ್ಮಿಯಂ [೪]ಬಿಟ್ಟಂ ನ ।
ಮ್ಮರಸಂ ಜಡಮತಿ ಪೊಕ್ಕಪ ।
ನರಣ್ಯಮಂ ಕಳಿವರಾರೊ ವಿಧಿವಿಳಸನಮಂ ॥೪೭

೪೩. ನೊಚ್ಚಿತು- ಪ್ರ. ಪಂ.ರಾ. ದಶಮಾಶ್ವಾಸ. ೧೫೩.
" ಲಂಕೆಯನನ್ವಯಾಗತಮನೆನ್ನ ಪಿತಾಮಹನಪ್ಪ ಮಾಲಿಯುಂ ।
ಮುಂ ಕಡುಕೆಯ್ದು ಕೊಂಡೆಱದುಕೊಂಡನನಿಕ್ಕದೊಡೆನ್ನ ಬಾಹುವೀ ॥
ರ್ಯಂ ಕಡುನೊಚ್ಚಿತಕ್ಕುಮೆನುತುಂ ಮನದುಮ್ಮಳದಿಂ ಕನಲ್ದು ಷೀ ।
ತಾಂಕುಶನೆತ್ತಿದಂ ಮುನಿದು ಲಂಕೆಗನೂನಬಲಂ ದಶಾನನಂ ॥ "
೪೫. ಬಱುಗರ್ಜನಮಂ- (?)

೧. ಕೆರಂ. ಕ॥ ೨. ವೆ । ಯ್ಸರಿ. ಗ॥ ೩. ಗಜ್ಜರಂ. ಕ॥
೪. ಬಿಟ್ಟಂ. ಗ॥

ಎಂದು ತಂತಮ್ಮ [1]ಮತಿಗನುರೂಪಮಾಗೆ ಬಹುಜನವಿಕಲ್ಪಜಲ್ಪಂ ನೆಗೞೆ ಪುರಮಂ ಪೊಱಮಟ್ಟು ಕಿಱಿದಂತರಮಂ ನಡೆದೊಂದು ಕನಕ ಕಮಳವನಸಮೀಪದೊಳ್ನಿಂದು ಕುಮಾರಂಬೆರಸು ಪರಿಜನಮನೆಂತಾನುಂ ಬೀಳ್ಕೊಳಿಸಿ ಜಿನಾಗಮಪ್ರಧಾನರಪ್ಪ ಶ್ರೀನಾಗದತ್ತಭಟ್ಟಾರಕರಿರ್ದ ಶ್ರೀಪರ್ವತಕ್ಕಭಿಮುಖನಾಗಿ ಪಯಣಂಬೋಗೆವೋಗೆ ॥೪೮

ತನಗಿ[2]ದಿರ್ದಂದು ವಾಜಿಗಳನಾನೆಗಳಂ ಬಿಡುವ್ರೊಂಗಳಂ ವಿಳಾ ।
ಸಿನಿಯರನಾರಮಂ ತಿಸರಮಂ ಚೆಳಿಯಂ ಪಱಿಯಂ ದುಕೂಲಮಂ ॥
ತನತನಗಿತ್ತು ಮೆಚ್ಚಿಸಲೊಡರ್ಚೆ ದರಸ್ಮಿತನೊಲ್ಲದಿರ್ದವೋಂ ।
ಜನಪದಮುಖ್ಯರಂ ತಣಿಪಿದಂ ಜನನು ಪ್ರಿಯವಾಕ್ಪ್ರಸಾದದಿಂ ॥೪೯

ಅರಸಿಯರುಂ ವಿಳಾಸಿನಿಯರುಂ ಪೆಱಗಿರ್ದರದೇಕೆ ಗಂಧಸಿಂ ।
ಧುರಘುಟಿ ವಾಜಿರಾಜಿ ರಥಸಂಕುಳಮೆಲ್ಲಿಗೆ ಪೋದುವೆಲ್ಲಿ ನಿಂ ॥
ದಱೊ ಧವಳಾತಪತ್ರವಿವಿಧಧ್ವಜಚಾಮರಹಸ್ತರಂಗರ ।
ಕ್ಕರ ನೆರಮಿಲ್ಲದಿತ್ತಲವನೀಶ್ವರನೊರ್ಬನೆ ಬರ್ಪು[3]ದಾವುದೋ ॥೫೦

ಎಂದು ತಮ್ಮೊಳುಮ್ಮಳದಿಂ ನುಡಿವ ಜನಪದಜನ[4]ವ್ಯಾಮೋಹವಚನಮನಾಲಿಸುತ್ತುಂ ಶುಚಿಪ್ರದೇಶವೆ ಬಿಡುವಾಣಮಾಗೆ ಕತಿಪಯಪ್ರಯಾಣಂಗಳಂ ನಡೆಯೆನಡೆಯೆ ॥೫೧

[5]ಸರಳಲತಾಲಾಸ್ಯನಟಂ ।
ಹರಿಣೀರೋಮಂಥಮಂಥರಂ ಲವಲೀಮ ॥
ಮರ್ಮರಮುಖರಂ ಕರಿಕರಶೀ ।
ಕರಶೀತಳಮೆಸಗಿದತ್ತರಣ್ಯಸಮೀರಂ ॥೫೨

ಅನಂತರಂ ॥೫೩

೧. ಗತಿ. ಕ॥ ೨. ದಿರ್ದಲ. ಕ॥ಗ॥ ೩. ದೇವುದೊ. ಕ॥ ೪. ಜನ್ಮ. ಕ॥ ೫. ಸರಸ. ಗ॥

ರೌದ್ರವನಚರವಿಕೀರ್ಣಂ।
ವಿದ್ರುಮಶೋಭಾವಹಂ ವಿಷೋರಗವಿಷಮಂ ॥
ಮುದ್ರಿಸಿ ದೆಸೆಯಂ ಲವಣಸ।
ಮುದ್ರಮನನುಕರಿಸಿದತ್ತಗಣ್ಯಾರಣ್ಯಂ ॥೫೪
ತಾಂಗಿದುದು ಗಾಳಿಯಂ ದೆಸೆ।
ಯಂ ಗವಸಣಿಸಿದುದು ಮೇಗು ಮೊಗೆದಾಗಸಮಂ ॥
ನುಂಗಿದುದೆನೆ ಕಟ್ಟಲಿಸಿ ಕ।
ರಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ ॥೫೫
ವಸುಧಾವಿಶ್ರುತರಾಜವಂಶತಿಳಕಂ ದುರ್ಗಾಧಿಪಂ ಕೊಂಬುಗೊ।
ಟ್ಟ ಶರಣ್ಬೊಕ್ಕ ಕಮಕ್ಕೆ ಕಟ್ಟರೆ ಮಧುಚ್ಛತ್ರಾತಪತ್ರಂಗಳ ।
ರ್ವಿಸೆ ನಿರ್ಮೋಕಪತಾಕೆಗಳ್ ಮೊಳಗೆ ಚೀರೀಭೇರಿಗಳ್ ಬಯ್ದ್ದ ಪಾ।
ಡಿಸುವಂ ಕೀಚಕಗಾಯಕಪ್ರಕರದಿಂ ಚಂದ್ರಾರ್ಕತೇಜಂಗಳಂ ॥೫೬
ಅನ್ತಗುರ್ಬುಪಡೆದು ಪರ್ಬಿ ಬೆಳೆದಡವಿಯೊಳಗೆ ನಡೆಯುತ್ತುಂ ॥
ಬಿರಿದಪ್ಪುನ್ನತಿವೆತ್ತುಮೇವುದೊ ಫಳಂ ಕೈಸಾರೆಯುಲ್ಲಂತೆ ನಿ।
ಷ್ಪುರವೇಷಂ ಮದಸಮ್ಮದಪ್ರಸವಮಂತಸ್ಸಾರಬಾಹ್ಯಂ ವೃಥಾ ॥
ಪರುಷವ್ಯಾಹರಣಂ ಪರಾರ್ಥಚರಿತಚ್ಛಾಯಾತಿದೂರಂ ದ್ವಿಜಾ।
ಪರಸೇವ್ಯಂ ತೃಣರಾಜನಿರ್ದದೆನುತುಂ ಭೂವಲ್ಲಭಂ ನೋಡಿದಂ ॥೫೮

೫೫. ಅಗುರ್ವು- ಆಧಿಕ್ಯ, ಭಯ.
೫೬. ದುರ್ಗಾಧಿಪಂ- ವನವೆಂಬ ಧೊರೆ. ಕೊಂಬು- ಆಶ್ರಯ.
೫೮. ತೃಣರಾಜ- ತಾಳೆಯ ಮರ. ತೃಣರಾಜಕ್ಕೂ ಕ್ಷುದ್ರರಾಜನಿಗೂ ಸಮಾನಾರ್ಥಕವಾದ ವಿಶೇಷಣಗಳು ಕೊಟ್ಟಿವೆ.

೧. ಸಿ. ಕ॥ ೨. ಮೇಗೆ. ಕ॥ ೩. ದಪೂರ್ವಂ. ಗ॥ ೪. ಕ್ಕ. ಕ॥ ೫. ಪೊಯ್ದು. ಕ॥ ೬. ೪೦. ಕ॥ ೭. ಕೈಯಾರೆ. ಕ॥

ಮತ್ತೊಂದೆಡೆಯೊಳ್ ॥೫೯

ಏಳಡಿಕೆ[ಯ] ಚೀರಿಗೆ ವಾ[1] ।
ಚಾಳಂ ವಕ್ಕಾಯ್ತು ಶೂನ್ಯಕೋಶನಿವಾಸಂ ॥
ಲೋಲಸ್ವಭಾವನವಗತ ।
ಮೂಲಬಲಂ ನಾಮಧಾರಕಂ ರಾಜಕುಜಂ ॥೬೦

ಸುಮನೋವಿಳಾಸವಿಭವಂ ।
ಸಮನಿಸದೆನೆ ಫಳಿತವಾಗಿ ಕಷ್ಟನ ಸಿರಿಯೊಳ್ ॥
ಸಮನಾಯ್ತೌದುಂಬರತರುವಾ ।
ರ್ಗಮಭೋಜ್ಯಂ ಕ್ಷುದ್ರಜಂತುಜನ್ಮಾವಾಸಂ ॥೬೧

ಎನುತುಂ ಬರ್ಪುದುಂ ॥೬೨

ವ್ಯೋಮಮನೆಯ್ದಿದ ತರುಶಾ ।
ಖಾಮುಖಮಳ್ಳಿಱಿಯೆ ತರಳತಾರಾಸ್ತೋಮಂ ॥
ಭೂಮಂಡಳಕ್ಕೆವಂದಂ[2] ।
ತಾಮಳಕಫಳಂಗಳೆಸೆದುವೋರೊಂದೆಡೆಯೊಳ್ ॥೬೩

ಅನ್ತನೇಕಾನೋಕಹಬಹಳಮಪ್ಪ ಗಹನಾಂತರಾಳದೊಳ್ ಚಂದನಲತೆಯ ಬಾಱಿಜ್ಜಂಪದ ಪ್ರುಳಲೊಳ್ನಂದು ॥೬೪

ಪರಭೃತಲೋಚನಚ್ಛವಿಯ ಗುಂಜೆಯ ಭೂಷಣಮಂ ತೊಡರ್ಚಿ[3]ಕೊಂ । ಜರಠನುಬಿಂದುಶೋಣರುಚಿಯಂ ಭುಜಪತ್ರಮನುಟ್ಟಳೇಂ ವನೇ । ಚರಿ ಜನತಾವಿಳೋಚನವಶೀಕರಣಾಂಜನದಿಂ ಮನೋಭವಂ । ವಿರಚಿಸಿ ಬಣ್ಣಮಂ ಬರೆದ ಚಿತ್ರದ ಪೆಣ್ಣೆನೆ ಕಣ್ಗೆವಂದಳೋ ॥೬೫

೧. ಎಳದಿಕೆಚೇರಿಬರೆವಾ।ಚಾಳಂ. ಕ॥, ಯೆಳದಿಕೆಗೆಚೆರಿವಾ।ಚಾಳಂ. ಗ॥
೨. ಮೊ. ಕ॥ ಗ॥ ೩. ಟ್ಟದೇಂ. ಕ॥

ಮತ್ತೊಂದೆಡೆಯೊಳ್ ‖೬೭

ತರುಣತಮಾಳವಲ್ಲರಿಯಶೋಕೆಯ ಪೂಗಳ ಗೊಂಚಲಾಂತುವ। ಚ್ಚರಿಯೆನೆ ತೊಟ್ಟುಕೊಂಡು ಗುರುಗುಂಜೆಯ ಪಚ್ಚುಮನುಟ್ಟು ಕೊಂಡು ತಾ ‖ ವರೆದಳರಂ ತಮಾಳವನಮಾಳೆಯ ತಣ್ಣೆಳಲೊಳ್ ಪು ಳಿಂದಸುಂ। ದರಿ ನೆಲಸಿರ್ದಳೇಱಿಸೆ ಮದಾಳಿಗಳಂ ಕುಟಿಲಾಳಕಾಳಿಗಳ್‖

ಮತ್ತೊರ್ವಳ್ ನಿಜನಿಕಟರಕ್ತಾಶೋಕತಳಸೈಕತಪ್ರದೇಶದೊಳ್ ಪುಳಿಂದವೃಂದಾರಕನ ಪರ್ಯಂಕತಳಮನಳಂಕರಿಸಿ ಪರಿಚಾರಕಿಯೆ ಬಾಜಿಸುವ ವಿಪಂಚಿಯಿಂಚರದೊಳೊಡಂಬಟ್ಟು ಶಬರಬಾಳಕಿಯರ ಕಾ ಕಲೀಧ್ವನಿಯೊಳುಪಾಶ್ರಯುಂಬಡೆದು ‖೬೮

ಆಱಿಡಿವಟ್ಟುದಾಱಿಡಿ ವಿಪಂಚಿಯ ಜೀವಿಗೆ ಜೀವಮಿಲ್ಲ ಮೆ।
ಯ್ದೋಱುದುವೀಗಳೇೞು ಸರಮುಂಗಭವಂಗೆನೆ ಪಾಡಿದಳ್ ನಯಂ‖
ಬೇಱ್ ತೆರಳ್ಕೆ ಬೇಱ್ ಜತಿ ಬೇಱ್ ನಿವರ್ತನೆ[3] ಬೇಱ್ ಬಿನ್ನಣಂ।
ಬೇಱ್ ಬೆಡಂಗು ಬೇಱೆನೆ ಪುಳಿಂದಿ ಜಗಜ್ಜನಕಾಮಧೇನುವಂ ‖೬೯

ಮತ್ತೊಂದೆಡೆಯೊಳೆಳವಸಲೆಯ ಬಾಸಣಿಗೆಯೆನಿಸುವೆಳವಿದಿರ ಪೊದಱ ತಣ್ಪಿನೊಳ್ ‖೭೦

ಇದು ಕಣ್ಮಲರೊಳ್ ಮಲೆದಿ।
ರ್ಪುದು ಗಡ ಸೆಱಗೆಯ್ವೆನೆಂಬಪ್ರೋಲೊರ್ವಳ್ ದೀ‖
ವದ ಪುಲ್ಲೆಯನತನುವ ದೀ।
ವದ ಪುಲ್ಲೆಯೆನಿಪ್ಪ ಶಬರವಧು ಪಿಡಿದಿರ್ದಳ್ ‖೭೧

ಅಲ್ಲಿಂದತ್ತಲೊಂದು ಕಾಸಾರತೀರದಿಱುಂಬಿನೊಳ್ ಪರ್ವಿ ಸುಪ್ಪು ಗೊಂಡು ‖೭೨

೧. ಪೆಳೆ. ಕ‖ ೨. ತೆರಳ್ಚೆ. ಕ‖ ೩. ವಿವರ್ತನೆ. ಕ‖

ಬಿದಿರ ಸಿಡುಂಬಿನೊಳ್ ಗಜಱಿ ಗರ್ಜಿಸಿ ಪೆರ್ವುಲಿ ಪಾಯೆ ಕಯ್ಯುಂ
ಕೆ। ಯ್ಯದೆ ಕೆಲಸಾರ್ದು [೧]ಮೆಯ್ಯೊಣರ್ದು ಬಂಚಿಸಿ ಗಂಟಲನೊತ್ತಿ ಕಿ
ಬ್ಱಸಿ ॥ ತಿಱದಿಯುಪ್ರೊಲಾಗೆ [೨]ಕಣ್ತುಮುಳೆ ಬಿರ್ದು ಮಸುಂಬಿ ಜವಂ
ಗೆ ಬಿರ್ದನಿ । ಕ್ಕಿದನುಸಿರಿಕ್ಕಲೀಯದುಸಿರಿಕ್ಕುವಪ್ರೋಲ್ ಶಬರಂ
ಮಹಾಬಳಂ ॥೨೩

ಅಲ್ಲಿಂ ಮುಂದೆ ಮಂದೈಸಿದ ಚಂದನಸಲ್ಲಕೀಸರಳತಮಾಳಸಾಲಲವ
ಲೀಲವಂಗಲತಾನಿಕುಂಜದೊಳ್ ॥೨೪

ನೃಪವನನಿಡಿಗೊರ್ಳ್ವಪ್ರೋಲ್ ಯೂ।
ಧಪತಿ ಮನಂಗೊಳಿಸಿದತ್ತು ಯೂಧಸನಾಥಂ ॥
ವಿಪ್ರುಳಾಗ್ರಪಲ್ಲವ್ರೋಲ್ಲಸಿ।
ತಪೂರ್ಣಕುಂಭಪ್ರಶಸ್ತನಕ್ಷತಹಸ್ತಂ ॥೨೫

ಮದಧಾರಾಜಳದಿಂ ವನಂ ಬೆಳೆಯೆ ಸೋಂಕಿಂ ಸೊಪ್ಪು ಸೊಪ್ಪಾ
ಗೆ [೩]ಮು। ತ್ತ್ರದಿನೆತ್ತಂ ಕೊಱಟಾಗೆ ಲಂಡದೊದವಿಂದಂ ತನ್ನದೀಕೂಲ
ಮಂ॥ ಕದಡುತ್ತಿರ್ದುದು ಪ್ರೋತ[೪]ಬೆಕ್ಕಕಳಭಾಕೀರ್ಣಂ ಗಜಾದ್ವೈತ
ಸೃ। ಷ್ಟಿದಲೆಂಬಂತಿರೆ ಭದ್ರಮಂದಮೃಗಸಂಕೀರ್ಣಂ ಕರೀಂದ್ರೋ
ತ್ಕರಂ ॥೨೬

ಅಲ್ಲಿ ॥೨೭

ಪಿಡಿ ಮೊಲೆಯೂಡಿ ಪಲ್ಲಮಱಿಯುಂ ಕರಪುಷ್ಕರದಿಂ ಕಪೋಳಮಂ
ತೊಡೆದು ಲವಂಗಪಲ್ಲವಮನಿತ್ತು ವಿಶಾಳತಮಾಳವೀಧಿಯೊಳ್ ॥

೨೬. ಮುತ್ತ್ರ- ಮೂತ್ರ (?) ಬೆಕ್ಕಕಳಭ- (?)

೧. ಮೆಯ್ಯೊಡ್ಡಣರ್ದು. ಕ॥ ೨. ಕಣ್ಮಗುಳೆ. ಕ॥ ೩. ಮೆತ್ತ್ರ. ಕ॥ ಗ॥
೪. ಬೆಕ್ಕ. ಗ॥

ನಡೆಯಿಸಿ ನಿರ್ಝರೋದಕಮನೂಡಿಸಿ ಚಿತ್ತದೊಳಾದ ಮೋಹಮ।
ಚ್ಚುಡಿದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದದೊಂದು ತಾಣದೊಳ್॥

ಮತ್ತೊಂದು ಪ್ರದೇಶದೊಳ್ ॥೭೯

ಸ್ಥಳಕಮಳಪಾಂಸುವಂ ಚೆ।
ನ್ನೊಳೊಟ್ಟಿಕೊಂಡೆತ್ತಿ ಹಸ್ತಮಂ ತದಿಕಿನ ಕೆಂ॥
ದಳಿರನರೆಗರ್ಚೆ ಪರಿದುದು।
ಕಳಭಂ ಕರಿಣಿಯ ಕಟಾಕ್ಷಮೊಡವರಿವಿನೆಗಂ ॥೮೦

ಮತ್ತೊಂದು ಕರಂಜಕುಂಜದೊಳ್ ॥೮೧

ವಿಸಟಂಬರಿದಾಟಂಗೊಂ।
ಡು ಸರಿತ್ತಟಮಂ ತರಂಗನಿರ್ಘೋಷಮನಾ॥
ಲಿಸಿ ಬೆರ್ಚಿ ಬಂದು ತಾಯ್ವಿಡಿ।
ಯ ಸೋಂಕಿಲಂ ಸೋಂಕಿ ನಿಂದುದೊಂದಿಭಕಳಭಂ ॥೮೨

ಅದಲ್ಲದೆಯುಂ ॥೮೩

ಪಿಡಿ ಮತ್ತೊಂದೆಡೆಯಾದೊಡಂ ಕಳಭಮೊಂದೆಯ್ತಂದೊಡಂ ಕಾ
ಯ್ದು ಮೆ। ಲ್ಪಿಡಿದೇಲಾಲವಲೀಲತಾಂಕುರಮನಿತ್ತೆಕ್ಕೆಕ್ಕೆಯಿಂ ಚಿ
ತ್ತಮುಂ॥ ಕಡೆಗಣ್ಣಿಂ ಪರಿದೆಯ್ದೆ ಪೇಚಕಮನಾರಯ್ದೊಂದು ಪೇ
ರಾಸೆ ಪೆ। ರ್ವಿಡಿಯುಂ ಕಾಮನ ಜಂತ್ರದಾನೆಯುವೋಲೇಂ ಕೊಂಡಾಟ
ದಿಂ ಕಾದುದೋ ॥೮೪

೭೯. ಅಚ್ಚುಡಿದಿರೆ- ಹೆಚ್ಚಾಗಲು. ಬಿಚ್ಚತಂ- ಯಾವ ನಿರ್ಬಂಧವೂ ಇಲ್ಲದೆ. ಕಡುಪು- ಆನೆಯ ಗುಂಪು. ೮೦. ತದಿಕು- ಸಲ್ಲಕಿ, ಆನೆಬೇಲ. ೮೨. ವಿಸಟಂಬರಿದು- ಇಷ್ಟಬಂದಂತೆ ಓಡಿ. ಪಿಡಿ- ಹೆಣ್ಣಾನೆ.

೧. ಪೇಚಕಮನಾಯ್ದೊಂದೊಂದು. ಕ॥ ೨. ಕೋದುದೋ. ಗ॥

ಒಂದೆಡೆಯೊಳ್ಮ್ರಗಿಲಂ ಮ।
ತೊಂದು ಗಜಂ ತೇನತೇನವಿಱಿದುದು ಧಾರಾ ॥
ಸಂದೋಹಂ ಮದಧಾರಾ।
ಸಂದೋಹದೊಳೊದವಿ ಕಾಱ್ಪುರಂ ಮಸಗುವಿನಂ ॥೮೫

ಅನವರತಗಂಡಕಂಡೂ।
ವಿನೋದದಿಂ ಚಂದ್ರನಾಲವಮಂ ಮುಱಿದತ್ತೆಂ ॥
ಬಿನಮಾಲದ ಕೊಂಬಿಂ ಕಟ।
ಮನುರ್ದುತಿರ್ದತ್ತುದಾತ್ತವೊಂದು ಮದೇಭಂ ॥೮೬

ಜರದಜಗರವೆರಡಂ ಕೊಂ।
ಡೆರಡುಂ ನಿಗ್ಗವದೊಳಱಿದು ಕೋದೆತ್ತಿ ಮದ॥
ದ್ವಿರದಂ ಬೇಱೊಂದು ಭಯಂ।
ಕರಮಾದುದು ಕಣ್ಗೆ ಮೂಱುಕಯ್ಯಾನೆಯವೋಲ್ ॥೮೭

ಬೆದಱಿ ಮನಂ ವನಸ್ಥಳಿಯೊಳೊಂದಿಭವಿರ್ದುದು ಮೂರ್ಧಪಿಂಡವ।
ಲ್ಲದು ಶಿಖರಸ್ಥಳಂ ನಿಟಿಳಮಲ್ಲದು ಪಾಸಱೆ ಕರ್ಣತಾಳವ॥
ಲ್ಲದು ಚಳಪಕ್ಷಸಂಹತಿ ಮದಪ್ಲವಮಲ್ಲದು ನಿರ್ಝರಪ್ಲವಂ।
ಮದಗಜಮಲ್ಲದಿಂದ್ರನೊಳದಿರ್ಚಿದ ನೀಳನಗೇಂದ್ರಮೆಂಬಿನಂ ॥೮೮

ಮತ್ತೊಂದು ಗಿರಿದರೀಪರಿಸರದೊಳ್ ॥೮೯
ಸೊವಡಿಂಗೇವಯ್ಸಿ ಪುಲ್ವಟ್ಟೆಯ ತಿವಳಿಯನಾರಯ್ದು ಘರ್ಮದ್ರ

೮೫. ತೇನತೇನಂ- ಮೇಲೆಮೇಲೆ.
೯೦. ಏವಯ್ಸಿ- ವ್ಯಥೆಪಟ್ಟು (?)
ತಿವಳಿ- ಹೆಜ್ಜೆಯ ಗುರುತು ; ಕಾವ್ಯಾವಲೋಕನ ಅರ್ಥಾಲಂಕಾರದಲ್ಲಿ—

೧. ಕೊಂಡೆತ್ತಿ. ಗ॥ ೨. ನಿಕಟ. ಕ॥ ೩. ತಿವಣಿ. ಗ॥

ಪಂ ಮೆ । ಯ್ನವಿರುಂ ಮೆಯ್ವೆರ್ಚೆ ಕಣ್ಬೇಡುರಿಯನುಗುಳೆ ಕಣ್ಮುಟ್ಟ ನೊಳ್ಕಂಡು ಕಾಯ್ಪಿಂ ॥ ಜವದಿಂ ಬೆಂಕೊಂಡು ಕೋಡೇಱಿನ ಮಸಕ ಮಗುರ್ವಾಗೆ ಕಾಡಾನೆಯೊಂದಂ । ತವೆ ಕೊಂದುಂ ತನ್ನ ಕೋಪಂ ತವದಿರೆ ಮರವಾಯ್ದತ್ತು ಮತ್ತದ್ವಿಪೇಂದ್ರಂ ॥೯೦

ಮತ್ತಮಲ್ಲಿ ॥೯೧

ಪರಿಮೂತ್ರಂ ಭಿನ್ನಲಂಡಂ ಸುರಿಯೆ ಮದಜಳಂ ಮೆಯ್ಯೊಳಳ್ಕಾಡೆ ಭೀತಾ । ತುರಚಿತ್ತಂ ಸುತ್ತಲುಂ ಪೆಳ್ಪೆಳಸಿ ನಯನಮುತ್ಕಂಪಿತಂ ಕುಂಚಿತಾಂಗಂ ॥ ಪರಿದೇಳಾಕುಂಜಮಂ ಪೊಕ್ಕುವೆ ಮಿಡುಕದೆ ನಿಂದತ್ತು ಮತ್ತೊಂದಿಭಂ ಸಾ । ರ್ತರೆ ಕರ್ಣಾಭ್ಯರ್ಣಮಂ ವನ್ಯಮೃಗವಿಳಯನಿಷ್ಪಾದಕಂ ಸಿಂಹನಾದಂ ॥೯೨

ಮತ್ತಮತ್ತಲೊಂದು ಕಲ್ತಲಿಪ ತಮಾಳವೀಥಿಯೊಳ್ ॥೯೩

ಖರನಖರಂಗಳಂದುಗಿದು ಕೋಪದೆ ಸೀಳ್ದು ಸಿಱುಂಬುಳಾಡೆ ಕುಂ।
ಜರಗುರುಕುಂಭಮಂಡಳದಿನಲ್ಲುಗುತಂದು ಕುಳುಂಪೆಗೊಂಡ ನೆ॥

---

ಪ್ರ. "ತಿವಳಿಯೊಳ್ಮಡುಕಾಱದ ಮಣ್ಣಿಂದಿಕ್ಕಿದಲಂಡದ ಬೆಂಕೆಯಿಂ ।
ಕವಿವ ಕಿಲ್ಮಿದದೊಳ್ಪೊನಲೊಳ್ ಸುಯ್ಯಾಱದ ಪೆರ್ನೊರೆಯಿಂ ತಗು ॥
ಬ್ದಿ ವಿಹತಾಂಬುವ ಬಲ್ಪೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪ ।
ಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ ॥"

ಕಣ್ಮುಟ್ಟ- ಕಣ್ಬೊಲ, ಎದುರಿಗೆ.

೯೨. ಅಳ್ಕಾಡೆ- ಧಾ. ಅಳ್ಕಾಡು- ನಿರವಶೇಷೇ, ನಿರವಶೇಷವೆಂದಿಲ್ಲವಾದುದು.
ಪೆಳ್ಪೆಳಸಿ- ಪೆಪ್ಪಳಿಸಿ.

೯೪. ಸಿಱುಂಬುಳಾಡೆ- "ಸೀಱುಂಬುಳೆಂದಕ್ಕು ಸೂಸಾಟಕ್ಕೆ" ಕೆ. ಶಬ್ದ. ೬೨
ಕುಳುಂಪೆಗೊಂಡ- (?)

---

೧. ನವಿರಿಂ. ಗ॥ ೨. ಪೊಕ್ಕಿಲೆ. ಕ॥, ಪೊಕ್ಕರೆ. ಗ॥

ತ್ತಱ ಪೊಸಪಜ್ಜೆಯೊಳ್ಕದಱ ಕಣ್ಗೆಸೆದಿರ್ದುವು ರಕ್ತರಕ್ತಕೇ।
ಸರಪರಿಶೋಭಿಕೇಸರಿಯ ಬೀರದ ಬಿತ್ತುಗಳಂತೆ ಮುತ್ತುಗಳ್॥

ತತ್ಸಮೀಪದೊಳ್ ॥೯೫

ಉಗಿಬಗಿಮಾಡುತ್ತುಮುದಾ।
ತ್ತಗಜಮನೆಸೆದತ್ತು ರಕ್ತಕೇಸರವಿಸರಂ॥
ನಗಮಸ್ತಕದೊಳ್ ಸಂಧ್ಯಾಂ।
ಶುಗಳಂ ರಂಜಿಸುವ ಚಂದ್ರನಂತೆ ಮೃಗೇಂದ್ರಂ ॥೯೬

ಅದರ್ಕನತಿದೂರದೊಳ್ ॥೯೭

ಭರದಿಂ ಲಂಘಿಸಿ ಗಂಧಸಿಂಧುರಶಿರೋಭಾಗಕ್ಕೆ ನಾಗಾರಿ ತ। ಚ್ಚರಣಂ ಮುಟ್ಟಿತು ಮುಟ್ಟದೆಂಬವಸರಕ್ಕಾಕಸ್ಮಿಕಂ ವಾಯ್ದು ಕೇ। ಸರಿಯಂ ಕೇಸುರಿಯಂತೆ ಪೊಯ್ದು ಶರಭಂ ಕೊಂಡಿರ್ಕೆ ಸಂಜೀವನಂ। ದೊರೆಕೊಂಡತ್ತು ಗಡಾ ಗಜಕ್ಕೆ ವಿಪರೀತಂ ಕರ್ಮನಿರ್ಮಾಪಣಂ ॥೯೮

ತತ್ಪ್ರದೇಶದೊಳ್ ॥೯೯

ಚಂಡಪವಿದಂಡದಿಂದಾ।
ಖಂಡಳನೆರಡೆಱಕೆವೆಟ್ಟುಮಂ ತೂಗುವವೊಲ್॥
ತುಂಡತುಳಾಮುಖದಿಂ ಭೇ।
ರುಂಡಂ ತೂಗಿದುದು ಶರಭವೆರಡಂ ನಭದೊಳ್ ॥೧೦೦

೯೬. ಉಗಬಗಿಮಾಡುತ್ತ- ಉಗುರಿನಿಂದ ಬಗಿದು ಸೀಳುವ, ಧ್ವಂಸಮಾಡುವ
ಪ್ರ. ಪಂ. ರಾ. ಆ. ೨. ೩೧; ೨. ೫೫ ಗದ್ಯ.

೧. ತತ್ಸಮಯದೊಳ್, ಕ॥ ೨. ತದಾ, ಕ॥

ಅಂತತಿಭಯಂಕರಾಕಾರಮಪ್ಪ ಕಾಂತಾರಮಂ ದಾಂಟಿ ತಿರ್ಯ
ಗ್ಜಾತಿಸ್ವಭಾವವ್ಯಾಮೋಹವೈರಸ್ಯಂಗಳಂ ನೋಡಿ ನೋಡಿ ನಿರ್ವೇ
ಗಪರನಾಗಿ ನಡೆವ ರಾಜಸರ್ವಜ್ಞಂಗೆ ತೊಟ್ಟನೆ ಕಟ್ಟೆದಿರೊಳ್॥೧೦೧

ಬಹುರತ್ನಚ್ಛಾಯೆಯಿಂ ಚಿತ್ರಿಸಿ ನಿಖಿಳದಿಶಾಭಿತ್ತಿಯಂ ಚೂಳಿಕಾ
ನೋ। ಕಹಶಾಖಾಹಸ್ತದಿಂ ಜಕ್ಕುಲಿಸಿ ರವಿರಥಾಶ್ವಂಗಳಂ ಗಂಡಶೈ
ಳಾ ॥ ಗ್ರಹಟತ್ಕೂಟಂಗಳಿಂದುದ್ಧರಿಸಿ ದಿವಮನೇಂ ಪೆಂಪುವೆತ್ತ
ತ್ತೊ ಭೂಭೃ । ನ್ಮಹಿತಂ ಶ್ರೀಪರ್ವತಂ ನಿರ್ಝರಜಳಲಹರೀಲಾ
ಸ್ಯಮಾಂಗಲ್ಯರಂಗಂ ॥೧೦೨

ಆನಗದ ನೆಗೆದ ಶಿಖರ।
ಸ್ಥಾನದ ಮೇಗೊಗೆದ ಮಣಿಮಯೂಖಲತಾಸಂ॥
ತಾನದ ಲತಾಂತಮಂಜರಿ।
ತಾನೆನೆ ರಂಜಿಪ್ಪುದು ತರಳತಾರಾಪುಂಜಂ ॥೧೦೩

ತುಡುಗೆಯ ಮಾಣಿಕದೆಳವಿಸಿ।
ಲಿಡೆಗಿಱಿದ ತಮಾಳವನದ ಕಡುಗಱ್ತಲೆಯಂ॥
ಕಿಡಿಸೆ ಫಣಿಕಾಂತೆಯರ್ ಸೊಡ।
ರ್ಗುಡಿಯೆನೆ ಜಲಜಲಿಪರಚಳಲೀಲಾವನದೊಳ್ ॥೧೦೪

ಯಕ್ಷವಧೂಜನಧವಳಕ।
ಟಾಕ್ಷಪ್ರಭೆಗಳ್ ದುಕೂಳನವಕಾಂಡಪಟೀ॥
ಪ್ರಕ್ಷೇಪಣಪರಿಶೋಭೆಯ।
ನಾಕ್ಷೇಪಂಗೆಯ್ವುವಲ್ಲಿ ವಲ್ಲೀಗೃಹದೊಳ್ ॥೧೦೫

೧. ತುಡಿಗೆ. ಕ॥ ೨ ಕಾಂತೆಯರ. ಕ॥

ಸುರಕಾಂತಾಮೃದುಪದನೂ।
ಪುರನಿನದಮುನಂಚೆಯಿಂಚರಂಗೆತ್ತು ನಿರು॥
ತರಮುಲಿವ ಸರಸ್ಸ್ವರಸ।
ವಿರುತಿಯಿನೇಕಾಂತಕಾಂತಮಚೆಳೋಪಾಂತಂ ॥೧೦೭

೧
[ಇರವುವಡೆದಿನ್ನೆಗಂ] ಚಿರ।
ಪರಿಚಯದಿಂದಿಂದವಜ್ಝೆಗೊಳಗಾಯ್ತೆಂಬಂ॥
ತಿರೆ ಸುರಮಿಥುನಂಗಳ್ಗಿರಿ।
ಪರಿಸರನಂದನಮನಗಲವಿರುಳುಂ ಪಗಲುಂ ॥೧೦೩

ಆಮಹೀಧರದೊಳೆಡೆಯಾಡುವ ವಿದ್ಯಾಧರವಧೂಜನದ ಸೋರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱೆಯ ತುಱುಗಲಿಂ ಸಿದ್ಧಕಾಮಿನಿಯರ ಕಪೋಳಪತ್ರದಿಂ ಮದನಕೇಳಿಯೊಳುದಿರ್ದ ಕನಕಕದಳೀದಳಪತ್ರಭಂಗಂಗಳಿಂ ಕಿಂಪುರುಷದಂಪತಿಯ ಸುರತಕೋಳಾಹಳದಿಂದನಂಗಸಂಗೀತಕಸದನಮೆನಿಸುವೆಳಲತೆಯ ಜೊಂಪಂಗಳಿಂ ಕಿನ್ನರನಿತಂಬಿನಿಯರ ಚೆಂಬೊನ್ನ ಶಿಲೆಯ ಮೇಲೆ ವಿರಚಿಸಿದ ಚೆನ್ನೆಯ್ದಿಲೆಸೂಱ ಪಸೆಗಳಿಂ ಗಂಧರ್ವಗಣಿಕೆಯರ ಬಹಳಪರಿಮಳಕ್ಕೆಳಸಿ ಬಳಸುವೆಳದುಂಬಿಗೆ ಬೆರ್ಚಿ ಬಿಸುಟ ಕರ್ಣಪೂರಪಾರಿಜಾತಸ್ತಬಕಂಗಳಿಂ ಮನಂಗೊಳಿಪ ವಿಶಾಳಸಾನುಪ್ರದೇಶಂಗಳನೊಳಕೊಂಡು ॥೧೦೮

ಸುರಮಿಥುನಂ ಸುರದ್ರುಮದ ತಣ್ಣೆಳಲೊಳ್ ಖಚರದ್ವಯಂ ಮನೋಹರಮಣಿಕೂಟದೊಳ್ ಭುಜಗದಂಪತಿ ಚಂದನಕುಂದಳಂಗಳೊಳ್॥

೧. ಯಿರಲಿವಡನೆನ್ನಾರಂಪರಿ। ಚರ್ಯದಿನಗ್ಗೆಗೊಳಗುಮಾಯ್ತೆಂಬಂ. ಕ॥, ಯಿರಿವಿವಡದೆನ್ನಕಂಚಿರ। ಗ॥ ೨. ಸೆಲೆ. ಕ॥ಗ॥
೩. ನಂದನಂ. ಗ॥

ಗರುಡಯುಗಂ ಲತಾಭವನದೊಳ್ ನಲಿದಂಗಜಕೇಳಿಲೀಲೆಯಿಂ ।
ಬಿರೆ ಗೆಲೆವರ್ಪುದಾವಿಪುಳಶೈಳಮನಂಗನ ಕೇಳಿಶೈಳಮಂ ॥೧೦೯

ತನು ವಸುವರ್ಣ್ಣದಿಂ ಮಱಸೆ ಪಚ್ಚೆಯ ಪಾಸಱೆಯೊಳ್ ವಿಯಚ್ಚ
ರಾಂ । ಗನೆ ನಿಲೆ ನೀರ ಮೇಲೆ ಜಳದೇವತೆ ನಿಂದಳೆಗೆತ್ತು ತತ್ಸಖೀ ॥
ಜನಮತಿಸಂಭ್ರಮಂಬೆರಸು ಶೈಮುಗಿದಾಗಿರಿರಾಜಸಾನುನಂ । ದನದ
ಲತಾಗೃಹಾಳಿಯ ಸಮೀಪದಲಾಳಗೆ ಸಾಲ್ವರಾಳಿಯಂ (?) ॥೧೧೦

ಅದಲ್ಲದೆಯುಂ ॥೧೧೧

(ಮಂದಾಕ್ರಾಂತಾವೃತ್ತಂ)

ಸಾನೂದ್ಯಾನಂ ಸುರತರುಸಮುತ್ಪನ್ನಮುತ್ತುಂಗಕೂಟಂ ।
ನಾನಾರತ್ನದ್ಯುತಿಜಟಳಿತಂ ಮೇಖಳಾಚಕ್ರವಾಳಂ ।
ಜೈನಾವಾಸಪ್ರಚಯನಿಚಿತಂ ಗರ್ವ್ವರಂ ಯೋಗಯೋಗ್ಯ ।
ಸ್ಥಾನಂ ತಾನೆಂಬನುಪಮವಿಳಾಸಾಸ್ಪದಂ ಶ್ರೀನಗೇಂದ್ರಂ ॥

ದಿವಿಜರ ಮಾಱ್ಪ ಪೂಜೆಗಳೆ ದೇವಕುಜಂಗಳ ಪುಷ್ಪಮಾಳಿಕಾ ।
ನಿವಹಮೆ ಬೀಣೆಯಂ ಮಿಡಿವ ಬಂಚಮನೊತ್ತುವ ಡಕ್ಕೆವಾಜಿಪಾ ।
ಡುವ ಬಗೆಮುಟ್ಟೆ ಪಾಡುವವರಗ್ಗದ ದೇವರೆ ತದ್ಗಿರೀಂದ್ರದಾ ।
ದಿವಿಜವಿಮಾನದಂತೆ ಬಳಸಿರ್ದ ವಿಶಾಳಜಿನಾಲಯಂಗಳೊಳ್ ॥೧೧೨

ಅಂತನಂತಜಿನಭವನಪಾವನಮಪ್ಪ ಗಿರಿದರೀಪ್ರದೇಶಮನೆಯ್ದುವ
ರ್ಪುದುಂ ॥೧೧೩

೧೧೨. ಬಂಚ- ದ್ಭ. ವಂಶ, ಕೊಳಲು.

೧. ದಿವಿಜರೆಮಾಱ್ಪಪೂಜೆಗಳ. ಕ॥ ೨. ಬಿಂಚರ. ಕ॥
೩. ಲಗೆಮುಟ್ಟುಲಾಡುವ. ಕ॥

ಜಿನಗಂಧೋದಕಶೀಕರಪ್ರಕರಮಂ ಜೈನಾರ್ಚನಾದಿವ್ಯಚಂ ।
ದನಕಾಶ್ಮೀರಪರಾಗಮಂ ಪಸರಿಸುತ್ತುಂ ಸೋಂಕಿ ಸಂಕೇತಕೇ ॥
ತನಹಸ್ತಾಭಿನಯೋಪದೇಶಕುಶಲಂ ರೋಮಾಂಚಮಂ ಪುಟ್ಟಿಸಿ ।
ತ್ತು ನರೇಂದ್ರಂಗೆ ಗಿರೀಂದ್ರಕಂದರಜಿನೇಂದ್ರಾವಾಸಮಂದಾನಿಳಂ ॥

(ಪೃಥ್ವೀವೃತ್ತಂ)

ಅನಂತರಮನಂತರತ್ನಮಯಕೂಟದಿಂ ಮಂದರ ।
ಕ್ಕನಂಗೆ ಪಗಲಂಧಕಾರಪಟಳಕ್ಕಿರುಳ್ಬ್ಬೆಳಕಾ ॥
ಕನತ್ಕಳಶಕಾಂತಿಯಿಂ ಬಯಲೊಳೊಡ್ಡಿದಂತಿರ್ದುದಂ ।
ಜಿನಾವಸಥನುಂ ಗುಣಾವಸಥನೆಯ್ದಿದಂ ಭೂಭುಜಂ ॥೧೧೪

ಅಂತೆಯ್ದಿವಂದು ನಿಶ್ರೇಯಸಶ್ರೀಯ ನಿತಂಬಸೂತ್ರಮೆನಿಸುವ ತತ್ಪರಿಸೂತ್ರದೆರಡುಂ ಕೆಲದೊಳಂ ವಸುಂಧರಾಶಿಖಂಡಮಂಡನದಂತಿರ್ದ ಕಮಳಷಂಡಮಂ ಮಂಡಳಿಸಿದಿಂದುಕಾಂತಶಿಳಾಮಯಮುಖಜಾಳದಂತೆ ನಿರ್ಮಳಮಾದ ಜಳಮಂ ಚರಣನಖಕಿರಣದಿಂ ದ್ವಿಗುಣಿಸಿ ವದನಕಮಳವಾಸನೆಯಿಂ ವಾಸಿತಂಮಾಡಿ ಜಿನಚಂದ್ರಮುಖಚಂದ್ರಿಕೆಯಿಂ ವಿಲೋಚನಚಕೋರಮಂ ತಣಿಪಲುತ್ಸುಕನಾಗಿ ಸಿರಿಗೆ ಕರುಮಾಡಮಾದ ಬಿಳಯತಾವರೆಯ ಮುಗುಳಂ ತಿಱಿದು ಕೊಂಡು ಕೆಂದಳದ ಕೆಂಪಿಂ ಕೆಂದಾವರೆಗಳೆಂಬ ಸಂದೆಗಮಂ ಪುಟ್ಟಸುತ್ತುಮಲ್ಲಿಂ ಪೊಱಮಟ್ಟು ॥೧೧೫

ಕ್ಷತ್ರಕುಳಪರಿವೃತಂ ನ ।
ಕ್ಷತ್ರಕುಳಂಬೆರಸು ಮೇರುಗಿರಿಯಂ ಬಲಗೊ ॥
ಳ್ವಾತ್ರಿತನೂಭವನಂತೆ ಪ ।
ವಿತ್ರಜಿನಾಲಯಮನವನಿಪತಿ ಬಲಗೊಂಡಂ ॥೧೧೬

೧. ಎರಜ್ಕೆಲ. ಕ॥

ಜನಪಂ ಪ್ರದಕ್ಷಿಣಂಗೆ ।
ಜುಮ್ಮಿ ನಿಟಿಳತಟಘಟಿತಕರಪುಟಂ ಭಕ್ತಿಭರಾ ॥
ವನತನಪವರ್ಗಲಕ್ಷ್ಮಿಯ ।
ಮನಮುಂ ಪುಗುವಂತೆ ಚೈತ್ಯಗೃಹಮುಂ ಪೊಕ್ಕಂ ॥೧೧೮

ಅಂತು ಪೊಕ್ಕು ಸಕಳ[೧]ಭುವನಪ್ರಭುವಿಗಭಿಮುಖನಾಗಿ ॥೧೧೯

ಜಯ ಜಿತವೃಜಿನ ಜಿನೇಶ್ವರ ।
ದಯಾನದೀಪುಳಿನರಾಜಹಂಸ ಭವಾಂಭೋಧೇ ॥
ಧಿಯ ತಡಿಯನೆಯ್ದಿಸೆನ್ನಂ ।
ನಯನಿಕ್ಷೇಪಪ್ರಮಾಣಪಾತ್ರದಿನರ್ಹಾ ॥೧೨೦

ನೇವಾಳಮೆಂದು ಕೆಲಬರ್ ।
ಪಾವಂ ಪಿಡಿವಂತೆ ದೇವ [೨]ನೀನಲ್ಲದರಂ ॥
ದೇವರಿವರೆಂದು ಪಿಡಿದಿ ।
[೩]ನ್ನೇವಿಧಿವಟ್ಟಪರೆ ಮೋಹಮೂರ್ಛೆಯಿನರ್ಹಾ ॥೧೨೧

ನಿನಗೆ ರಸವೊಂದೆ ಶಾಂತಮೆ ।
ಜಿನೇಂದ್ರ ಮನಪಾರಸಾಂಬುನಿಧಿಯೊಳಗವಗಾ ॥
ಹನಮಿರ್ದು ಮಿಕ್ಕ ರಸಮಂ ।
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ ॥೧೨೨

ಮಣಿಭೂಷಣಭರದಿಂ ತನು ।
ಕಿಣಮಪ್ಪುದದೇಕೆ ನಿನ್ನ ನಿರ್ಮಳಗುಣಭೂ ॥

೧೨೧. ನೇವಾಳ - ಹಾರ.

೧. ಭವನತ್ರಯಪ್ರಭು. ಗ॥ ೨. ನೀವ. ಗ॥ ೩. ನಾವಿಧಿ. ಗ ॥

ಷಣಮುಂ ದಯೆಗೆಯ್ ಪಡೆವೆಂ ।
ಪ್ರಣಯುಮನಪವರ್ಗಲಕ್ಷ್ಮಿಗದಱಿಂದರ್ಹಾ ॥೧೨೩
ಸಿಂಗದ ಮಾರ್ದನಿ ಮದಮಾ ।
ತಂಗಮನಳಱಿಸುವವೊಲ್ ನಿಜಪ್ರತಿಬಿಂಬಂ ।
ಬಿಂಗದೆ ಮನದೊಳ್ನಿಂದಿರೆ ।
ಬಿಂಗಿಸುವುದು ಜನನಮರಣದುಃಖಮನರ್ಹಾ ॥೧೨೪
ಮೆಚ್ಚ ಗಡ ಮುಳಿಯೆ ಗಡ ಬಗೆ ।
ಬೆಚ್ಚರೆ ಬೇಱೊಗೆ ನಿನ್ನ ಪದದೊಳ್ಮನುಜಂ ॥
ಗುಚ್ಚಗತಿ ನೀಚಗತಿವಡೆ ।
ವಚ್ಚರಿ ಕಣ್ದೆಱೆವ ತೆಱನನಱಿವೆನಗರ್ಹಾ ॥೧೨೫
ಜ್ಯಾಯುಂಗೆ ನೀನೆ ವಲಮಾ ।
ದೇಯುಂ ನೀನಲ್ಲದನ್ಯವಸ್ತುಗಳೆಲ್ಲಂ ॥
ಹೇಯುಂಗಳೆಂಬ ತತ್ತ್ವೋ ।
ಪಾಯುಮನೆನಗೀವುದೇವೆನುೞಿದುವನರ್ಹಾ ॥೧೨೬
ನಿತ್ಯಸುಖಮಾತ್ಮರೂಪಮ ।
ನಿತ್ಯಸಖಂ ಮೋಹರೂಪಮೆಂಬ ವಿವೇಕಂ ॥
ಸತ್ಯಸ್ವರೂಪಮುದಱೊಳ ।
ಗತ್ಯಂತಾನುಭವವಿಭವಮಕ್ಕೆನಗರ್ಹಾ ॥೧೨೭

೧೨೫. ಬೆಚ್ಚರೆ=ಬೆಚ್ಚ+ಇರೆ, ಬೆಸಿದಿರಲು.
೧೨೬. ಏವೆನುೞಿದುವಂ- ಉಳಿದ ವಸ್ತುಗಳನ್ನು ನಾನೇನು ಮಾಡಿಕೊಳ್ಳುತ್ತೇನೆ? ನನಗೆ ನಿಷ್ಫಲ.

೧. ದೇಂ । ಪಿಂಗಿಸುವುದೊ. ಗ॥ ೨. ೩. ಗರುಹಾ. ಗ॥

ಎಂದರ್ಹತ್ಪರಮೇಶ್ವರನಂ ನಿರ್ಭರಭಕ್ತಿಯಿಂ ಸ್ತುತಿಗೆಯ್ದು ಕೌಸ್ತುಭವಿಭೂಷಣವಸ್ತುನಾಯಕಮಂತೆ ಯೋಗಿಜನಪರಿವೃತನಾಗಿರ್ದ ಬಾಳಚಂದ್ರಪರನಾಮಧೇಯರಪ್ಪ ಶ್ರೀನಾಗಭಟ್ಟಾರಕರ ಪಾದಕಮಳಮನಮಳಕಮಳಂಗಳಿಂದರ್ಚಿಸಿ ಗುರುಭಕ್ತಿಪೂರ್ವಕಮಪ್ಪ ವಂದನಾನಂದಭರದಿಂ ವಿನಮಿತಶಿರಸ್ಸರೋಜನಾಗಿರ್ಪುದುಂ ॥೧೨೮

ಮದನಫಣಿನಿರ್ವಿಷೀಕರ।
ಣದಿವ್ಯಮಂತ್ರಸ್ವನಂ ಜರಾಹುರಣಶಿಳಾ॥
ವಿದಳನಟಂಕಧ್ವನಿ ಪೊ।
ಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿಧ್ವಾನಂ[1] ॥೧೨೯

ಕ್ಷುಭಿತದಯಾರ್ಣವಘೂರ್ಣಿತ।
ರಭಸಮೆನಲ್ ಪರಸಿದತ್ತನಂತರಮಾತ[2]॥
ತ್ಸಭೆ ವಿನತಮಕುಟಮಣಿರುಚಿ।
ವಿಭೂಸಿಯುಂ ನೃಪಪುರಸ್ಸರಂ ರಾಜಕಮುಂ ॥೧೩೦

ಅನ್ತು ಪರಸುವ ಪರಕೆಯೆ ಪಾರಿಜಾತಸ್ತಬಕಾವತಂಸಮಾಗೆ॥

ಇರೆ ನರಪತಿ ರಾಜಕುಲಂ।
ಚಿರಸಂಬುಜವನಮುರಲ್ದವೊಲ್ ವಿಖ್ಯಾತಂ[3]॥
ಚರಣಂ ಮುನಿಪದ್ಮಾಸನ।
ವಿರಾಜಿತಂ ರಾಜಹಂಸಲೀಲೆಯಿನಿರ್ದಂ[4] ॥೧೩೧

ಅರವಿಂದಸ್ಮೇರವಾಸ್ಯಂ ತಿಳಿಪೆ ಹೃದಯಸಂಶುದ್ಧಿಯುಂ ಮಾನಸಂ

೧. ನಿನಾದಂ. ಗ॥ ೨. ನಮಿತ. ಗ॥ ೩. ವಿಖ್ಯಾತಂ॥ ಭರಣಂ. ಗ॥
೪. ಯುಲಿರ್ದಂ. ಕ॥

ಶಾಂ। ತರಸಾಧೀನಂ ಸಮಾಧಾನಮನಱಿಪೆ ತಪಸ್ತಪ್ತಮುತ್ತಪ್ತ ಕಾರ್ತ॥ ಸ್ವರಶಾಖಾಲೀಲೆಯಂ ಪಾಳಿಸೆ ತನು ನಯನಂ ಕಾಟ್ಪುರಂ ಮಾಡೆ ಕಾರು। ಙ್ಯರಸಸ್ರೋತಂಗಳಂ ಲೋಕಮನೆಱಗಿಸಿದಂ ಬಾಳ ಚಂದ್ರವ್ರತೀಂದ್ರಂ॥೧೩೩

ಶ್ರಿತರತ್ನಪೀಠವಾಲಂ।
ಬಿತಲಂಬನಸಮಿತಿ ನಾಲ್ಕುಮನುಯೋಗದ ಸಂ॥
ಗತಿಯೆನೆ ಮಣಿಖಚಿತಮದೇ।
ನತಿಶಯಮಾದತ್ತೊ ರಮಣಿಕೋಲ್ ಯತಿಪತಿಯಾ॥೧೩೪

ಪ್ರತಿಲೇಖನದೊಳನಾಲೋ।
ಕಿತಮನುಚಿತಮೆಂದು ಪಲವು ಕಣ್ಬಡೆದವೊಲಾ॥
ಯತಿಪತಿಯ ದಯಾಧ್ವಜಮೇ।
ನತಿಶಯಮಾದತ್ತೊ ಮೇದುರಂ ಮಾಯೂರಂ॥೧೩೫

ಕೆಂಡರಿಸಿ ಪಳುಕಿನಿಂದಮ।
ಖಂಡಿತಶೌಚಗುಣಸುರನದೀಸಮುಪಚಿತಂ॥
ಡಿಂಡೀರಪಿಂಡಮೆನಿಸಿ ಕ।
ಮಂಡಲು ಸೊಗಯಿಪ್ಪುದು ಬಾಳಚಂದ್ರವ್ರತಿಯಾ॥೧೩೬

ಅನ್ತವಿಶ್ರಾಂತಶ್ರೀಘನಪ್ರಾಕೆಯ್ದು॥೧೩೭

೧೩೫. ಮೇದುರಂ- ಸ್ನಿಗ್ಧವಾದ. ಮಾಯೂರಂ- ನವಿಲುಗರಿಯಿಂದ ಮಾಡಿದ.

೧. ಮನಿಯೋ. ಕ॥ ೨. ಚಿರ. ಗ॥ ೩. ಶಾಂತ. ಗ॥

ಕ್ಷಮೆಯಂ ತಾಳ್ದದ ಜೈನಯೋಗಿ ಜಿನಪಾದಾಬ್ಜಾರ್ಚನಾಯಕ್ಷ
ಕ। ರ್ದಮಶಾಲ್ಯಕ್ಷತಪಾರಿಜಾತಸುಮನೋದಾಮಂಗಳಂ ಪಂಚರ॥
ತ್ನಮಯಾಮತ್ರದೊಳೀವುದುಂ ಮಣಿಕಿರೀಟಕ್ಕಾಗಳುಯ್ದಂ ಸಹ।
ರ್ಷಮುಹುರ್ಜಾತಮಹಾಪ್ರಸಾದನಿನದಂ ಸಾಹಿತ್ಯವಿದ್ಯಾಧರಂ॥೧೩೮

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ವೈಶ್ರವಣವೈರಾಗ್ಯವರ್ಣನಂ
ದಶಮಾಶ್ವಾಸಂ ಸಮಾಪ್ತಂ.



—ಏಕಾದಶಾಶ್ವಾಸಂ—

———o———

ಶ್ರೀಜಿನಪತಿಪದಕಮಳವಿ।
ರಾಜಿತಮಂ ಸಿದ್ಧಸೇಸೆಯಂ ತಳೆದನಿಳಾ॥
ಪ್ರೋಜಿತಚರಿತಂ ಸಕಳಕ।
ಳಾಜನ್ಮಾವಾಸನೆನಿಸಿದಭಿನವಪಂಪಂ॥೧

ಅಂತು ಸಿದ್ಧಸೇಸೆಯಂ ತಳೆದು॥೨

ಜನಪದಸುಖವಿಮುಖಂ ಮುನಿ।
ಜನಪದಸೇವಾಸುಖಾನುಭವಹರ್ಷರಸಂ॥
ಮನದಿಂ ಮಿಗೆ ಮುನಿವರ ಸ।
ಮ್ಮನದಿಂ ಮಿಗೆ ಮುಯ್ಯು[1] ಮಕುಟಮಂ ನೃಪನಿರ್ದಂ॥(?)

ಅನಂತರಮವನೀಶ್ವರಾಗಮನವೃತ್ತಾಂತಮಂ[2] ಮುನೀಶ್ವರಂ ಸವಿಸ್ತರಮಱಿದು॥೪

ಭಾವಿಜಿನನಪ್ಪ ಜೀವ।
ಕ್ಕಾವುದು ವಿಸ್ಮಯಮೊ ವಿಷಯವೈರಾಗ್ಯಮದೇ॥
ನೇವುದೊ ನಿರ್ವೃತಿಪದಸಾ।
ಖ್ಯಾವಾಪ್ತಿಯನಲ್ಲದುೞಿದಸಂಸೃತಿಸುಖಮಂ॥೫

ಎಂದು ಮನದೊಳ್[3] ಬಗೆದು॥೬

ಕಿಡುವಿಂದ್ರಿಯಸೌಖ್ಯಮನೇಂ।
ಪಿಡಿವರೆ ನಿಮ್ಮಂದಿಗಳ್[4] ವಿವೇಕಿಗಳೆಂದುಂ॥

೧. ಮುಯ್ಯು. ಗ॥ ೨. ಅನಂತರಗಮನ. ಕ॥ ೩. ಮನದಲೆ. ಗ॥
೪. ನಿಮ್ಮಂದಿರರ್. ಕ॥

ಕಿಡದ ಪರಮಾತ್ಮಸುಖಮನೆ।
ಪಿಡಿವರದೇನೊನಲಿಯಂತೆ ಪಿಡಿವರೆ ಕಸವಂ ‖೭

ಎಂಬುದುಮರಸಂ ಮುಕುಳಿತಕರಕಮಳನಾಗಿ ‖೮

ಪರುಸಂ [೧]ತಪ್ಪದು ಪೊರ್ದೆ ಹೇಮಪದಮಂ ಲೋಹಕ್ಕೆ ನಿಮ್ಮೀಪದಾಂ । ಬುರುಹಂ ತಪ್ಪದು ದೂರದಿಂ. ನೆನೆಯೆ ಮುಕ್ತಿಶ್ರೀಯು ನಾಮಾಂಗವಂ ‖ ತರವೇಂ ನೀಯೆರಡರ್ಕಮೊಂದೆಱಗಿದೆಂ ದೀಕ್ಷಾಪ್ರಸಾದಂ ಭವ । ಚ್ಚರಣಾಂಭೋಜಮದಕ್ಕೆ ಸಾಧಿಸುವೆನಾಂ ಕೈವಲ್ಯಮಾಂಗಲ್ಯಮಂ ‖೯

ಎಂದು ಬಿನ್ನವಿಸಿ ಮುಂನೂರ್ವರರಸುಮಕ್ಕಳ್ವೆರಸು ಪ್ರೋಜಾಪಟಹಪಟುನಿನದಬಧಿರಿತದಿಗ್ಗಜಶ್ರವಣಂ ವೈಶ್ರವಣನಾಚರಿತದೀಕ್ಷಾಪ್ರದಾನವಿಧಾನಂ ತತ್ಪ್ರೋನಿಧಿಯ ಸನ್ನಿಧಿಯೊಳುತ್ತರಾಭಿಮುಖನಾಗಿ‖ ಕ್ರಮದಿಂ ಪಂಚಪದಂಗಳಂ ಸ್ಮರಿಯಿಸುತ್ತುಂ ಮೋಹವಲ್ಲೀಪ್ರರೋ। ಹಮನುತ್ಪಾಟಿಸುವಂತೆ ಕುಂತಳಸಹಸ್ರೋತ್ಪಾಟನಂಗೆಯ್ದುಮು‖ ಖ್ಯಮನಾತ್ಯಂತಿಕಸೌಖ್ಯಮಂ ಪಡೆವಲಂಪಿಂದಾನೃಪಂ ಜಾತರೂ। ಪಮನುದ್ಧೂತವಿಳೇಪಮಂ ಜಿತಮನೋಜಾಟೋಪಮಂ ತಾಳ್ದಿದಂ ‖

ಮತ್ತಂ ‖೧೦

ಮೂಲಗುಣೋತ್ತರಗುಣಮಂ।
ಶೀಲಮನಳವಡಿಸಿ ಸಮಿತಿಯಿಂ ಗುಪ್ತಿಗಳಂ‖
ಪಾಲಿಸಿ ಪಂಚಮಹಾವ್ರತ।
ಲೀಲೆಯಿನೆಸೆದಂ ಪ್ರಮಾದಮಿಲ್ಲೆನೆ ಮುನಿಪಂ ‖೧೧

೭. ಬನಲಿ- ಬಂದರಿ.

೧. ತಪ್ಪದು. ಕ‖ ೨. ನಿಧಿಯೊಳುತ್ತ. ಶ‖

ಅನುಕೂಲಂ [೧]ಮುನಿಸಂ ಬಿಸುಟ್ಟು ಮುನಿಪಂ ಸತ್ಕಾರಸನ್ಮಾನಭಾ । ಜನೆಯಂ ಜೇೞ್ಪುದನೀವ ಕಲ್ಪಲತೆಯಂ ಸಂತಾಪಮೂರ್ಚ್ಛಾಪನೋ ॥ ಧನಿಯಂ ಶೀಳಗುಣಾವಳಂಬಿನಿಯನರ್ಹದ್ವಾಕ್ಯಮಾಣಿಕ್ಯಮಂ । [೨]ಡನೆಯಂ ನಲ್ಮೆಯಿನುತ್ತಮಕ್ಷಮೆಯನೇನಾಲಿಂಗಸಂಗೆಯ್ದನೋ ॥ ೧೪

ಚಿತ್ತದ ಮದಮಾನಮನುೞಿ ।
ದುತ್ತಮಮಾರ್ದವದಿನಮಳಕೀರ್ತಿಶ್ರೀಯಂ ॥
ಪತ್ತಿಸಿದಂ ಯ[೩]ತಿಪತಿಯರ ।
ಚಿತ್ತಮನೇನೊಂದು ಮಾರ್ದವಂ ಸೋಲಿಸದೇ ॥ ೧೫ ॥

ಗುಣಮಿರ್ಕಂಬುಜರೂಪಮಪ್ಪ[೪] ಮತಿಯೊಳ್ ಮಾಯಾಪ್ರಪಂಚಂಗಳೊಳ್ । ಗುಣಮೇನಿರ್ಕುಮೆ ನಂಬದಲ್ತೆ ಜನಮುಂ ಮಾಯಾವಿಯಾಗಿರ್ದನಿ ॥ ಗುರ್ಣಿನಂ ದುರ್ಗತಿಹೇತು ವಕ್ರಗುಣಮೆಂದಾನಂದಚಿತ್ತಂ ಗುಣ । ಪ್ರಣಯೋತ್ಸಾಹದಿನುತ್ತಮಾರ್ಜವಮನಾಯೋಗೀಶ್ವರಂ ತಾಳ್ದಿದಂ ॥ ೧೬

(ಅಕ್ಕರವೃತ್ತಂ)

ಎನಿತು ಗುಣ[೫]ವೊಳವನಿತುಮಂ ಲೋಭಮೆ ಕಿಡಿಸುಗುಂ ಲೋಭದಿನಸುಖಿಯಕ್ಕುಂ । ಮನುಜನಪಜಸಕ್ಕೆಡೆಯಕ್ಕುಂ ಕಡೆವರಂ ಸೂತಕಂ ಪಿಂಗದು ಲೋಭಿಗೆಂದುಂ ॥ ತನಗೆ ಜೀವಿತಾ[೬]ಂತ್ಯದೊಳಿಂದ್ರಿಯವಿಷಯೋಪಭೋಗದೊಳ್ಪಿಂಗೆ ಲೋಭಂ । ಮುನಿಪನುತ್ತಮಶೌಚಮಂ ತಳೆದು ಲೋಕೋತ್ತಮನುತ್ತಮಸ್ತುತ್ಯನಾದಂ ॥ ೧೭

೧. ಮುನಿಪಂ ಬಿಸುಟ್ಟು ಮುಳಿಸಂ. ಗ॥ ೨. ಡನಮಂ. ಕ॥
೩. ಸತಿ. ಗ॥ ೪. ನೆಂಬುದ. ಕ॥ ೫. ಮೊಲ. ಕ॥
೬. ತಾರೋಗ್ಯ. ಕ॥

ನೆಲೆ ಸತ್ಯಂ ಗುಣರತ್ನಮಾಲೆಗೆ ತಡಂಮಾತಾಡೆ ಕಾಯ್ದುಂ ಸು ಹೃ। ತ್ಕುಲವಿಷ್ವತ್ಕುಲಮಂತೆ ಸೈರಿಸವು ನಂಜುಂ ನೀರ್ಗಳುಂ ಕಿಚ್ಚುಮಾ॥ ಕುಲಮುಕ್ಕುಂ ಪುಸಿಯಿಂದವೆಂದು ದಶಭೇದಂಬೆತ್ತ ಸತ್ಯಕರ್ಕುಂ। ಡಲವಾದುತ್ತಮಸತ್ಯಮಂ ತಳೆದನಾಸ್ಯಾದ್ವಾದಯೋಗೀಶ್ವರಂ ॥೧೪

ದಂಡಕಷಾಯೇಂದ್ರಿಯಮಂ।
ದಂಡಿಸಿ ಸಮಿತಿವ್ರತಂಗಳಂ ಕ್ರಮದಿಂ ಕೈ॥
ಕೊಂಡುತ್ತಮಸಂಯಮಮಣಿ।
ಮಂಡನನಾದಂ ಮುನೀಂದ್ರಚೂಡಾರತ್ನಂ ॥೧೯

ಅಪವರ್ಗಾರ್ಥಂ ತನುವಂ।
ತಪಿಯಿಸಿ ಮಾರ್ಗವಿರೋಧನಾಗಿರೆ ಕೈಕೊಂ॥
ಡುಪಶಮಭಾವದಿನುತ್ತಮ।
ತಪಮಂ ಮುನಿಮುಖ್ಯನುತ್ತಮೋತ್ತಮನಾದಂ ॥೨೦

ಅಂತು ಬಾಹ್ಯಾಭ್ಯಂತರಭೇದದಿಂದೆರಡುಂ ಕ್ರಿಯಾಭೇದದಿಂ ಪನ್ನೆರಡುಮಾದ ತಪಮನೆತ್ತಿಕೊಂಡು ದೃಷ್ಟಫಳಮಂತ್ರಸಾಧನಾದಿಗಳನಪೇಕ್ಷಿಸದೆಯುಂ ರಾಗದ್ವೇಷಮಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರನಿವೃತ್ತಿಗೆಯ್ದು ॥೨೧

ಕರಣಮನುಪಶಮಿಸುವನಿ।
ರ್ಜರಿಸುವ ಕರ್ಮಂಗಳಂ ಶುಭಧ್ಯಾನಮನು॥
ದ್ಧರಿಸುವ ಬಗೆಯಿಂ ತಳೆದಂ।
ಗುರುವರಧೃತಿನಾಮಧೇಯಮಪ್ಪನಶನಮಂ ॥೨೨

೧. ಮುಂತೆ. ಗ॥ ೨. ಸೆ. ಗ॥ ೩. ಪಚಧೃತ. ಗ॥

ಮತ್ತಮಾಮುನೀಶ್ವರಂ ಸ್ವಾಧ್ಯಾಯಸಂಯಮಸಂರಕ್ಷಣಾರ್ಥಮಾಹಾರಚತುರ್ಥಾರ್ಧಭಾಗಕ್ರಮಹಾನಿನಿಯತಮಾತ್ರಪರಿತೃಪ್ತಿಯನಪ್ಪುಕೆಯ್ದು ‖ ೨೩

ನಿದ್ರಾಜಯಮಾಮಯದೋ ।
ಷೋದ್ರೇಕಜಯಂ ನಿರಶನನಿಯಮೋತ್ಪನ್ನಂ ‖
ಪದ್ಮವಜಯಮಾಯ್ತೆಂದು ।
ನ್ಮುದ್ರಿತಮೆನೆ ಪರಮಯೋಗಿಗವಮೋದರ್ಯಂ ‖ ೨೪

ಮುನಿಪತಿ ಗೃಹನಿಯಮಂ ಭಾ ।
ಜನಭೋಜನವಿಷಯನಿಯಮಮೆಂಬಿವೆಱಿನೆಣಂ ‖
ಮನದಳಿಪಂ ಪಿಂಗಿಸೆ ಪಾ ।
ವನತರಮಾದತ್ತು ವೃತ್ತಿಪರಿಸಂಖ್ಯಾನಂ ‖ ೨೫

ಮತ್ತಂ ‖ ೨೬

ಯೋಗಿ ಶರೀರೇಂದ್ರಿಯಬಳ ।
ರಾಗಪ್ರದಮಪ್ಪಸಿತಘೃತಕ್ಷೀರಾದಿ ‖
ತ್ಯಾಗದಿನಿಂದ್ರಿಯನಿಯಮೋ ।
ದ್ಯೋಗರಸತ್ಯಾಗನಿಯಮತತ್ಪರನಾದಂ ‖ ೨೭

ಮತ್ತಂ ಧ್ಯಾನಾಧ್ಯಯನಬ್ರಹ್ಮಚರ್ಯವಿಘ್ನಕರಣಸ್ತ್ರೀಪಶುಪಂಡಾದಿವರ್ಜಿತಮಪ್ಪ ‖ ೨೮

( ಪೃಥ್ವೀ ವೃತ್ತಂ )

ಸರಿತ್ತಟವನಂಗಳೊಳ್ ಗಿರಿದರೀಗುಹಾಗೇಹದೊಳ್ ।
ಪರೇತವನಶೂನ್ಯಸದ್ಮತರುಕೋಟರಸ್ಥಾನದೊಳ್ ‖

೧. ಪಂಡಾ. ಗ ‖

ನಿರಸ್ತಪರಪೀಡೆ ಕೂಡೆ ಶಯನಾಶನಂ ತಾಳ್ದಿದಂ ।
ನಿರಾಕುಳಮನಂ ವಿವಿಕ್ತಶಯನಾಶನೋಪಾಸ್ತಿಯಂ ॥ ೨೯

ಮತ್ತಂ ಧ್ಯಾನಸಮಯದೊಳ್ ವಿಷಯಸುಖಾನುಭವನಾಗದಂತು ಪರಿಸ್ಪಂದಾಧೀನಮಪ್ಪ ಸಮಾಧಾನಂ ಪೊರ್ದದಂತು ಜಿನಶಾಸನಪ್ರಕಾಶನಪರನಾಗಿ ॥ ೩೦

( ಹರಿಣೀವೃತ್ತಂ )

ಸುರಿವ ಮಳೆಯಿಂ ಮಂಜಿಂ ತರ್ಕೈಸಿ ತೀಡುವ ಗಾಳಿಯಿಂ ।
ಪುರಿವ ಬಿಸಿಲಿಂ ಮತ್ತಂ ಶಯ್ಯಾಶನಂಗಳ ನಿಟ್ಟೆಯಿಂ ।
ಕೊರಗದಿರೆಯುಂ ಚಿತ್ತಂ ಧ್ಯಾನೋಪಯೋಗದೊಳಿರ್ಪಿನಂ ।
ಸ್ಥಿರತೆ ನೆಱೆದಂ ಕಾಯಕ್ಲೇಶಪ್ರತರ್ಕ್ಕೆ ಮುನೀಶ್ವರಂ ॥ ೩೧

ಅಂತು ನೆಱೆದು ॥ ೩೨

ಯತಿಪತಿಗಾಳೋಚನವಿರ ।
ಹಿತಮೆನಿಸಿದ ಘೋರವೀರತಪಮುದು ಸಮ ॥
ನ್ವಿತದೇಹದೊಳಾತ್ಮಸಧ ।
ರ್ತಿಯಮೊಲಭಿಲಷಿತಫಳಮನೇನಿತ್ತಪುದೋ ॥ ೩೩

ಶ್ರೇಯೋಮಾರ್ಗದೊಳೊಂದಿದಾರ್ಯರೊಡನೊಲ್ದಾಳೋಚನಂಮಾಡಿಯುಂ । ಪ್ರಾಯಶ್ಚಿತ್ತಮನೊಲ್ಲದಿರ್ಪ ಮುನಿಪಂ ನೀತಿಜ್ಞರೊಳ್ ಕಾರ್ಯಪ ॥ ರ್ಯ್ಯಾಯಾಳೋಚನೆಮಾಡಿಯುಂ ನೆಗೞದುರ್ವೀಶಂಬೊಲೇಂ ಶಾಶ್ವತ । ಶ್ರೀಯಂ ತಾಳ್ದುಗುಮೋ ನಿರುದ್ಯಮದಿನಾರ್ಗಂ ಸೈಪ್ಪುಕೈಸಾರ್ಗುಮೋ ॥ ೩೪

೧. ೨. ೩. ಶಯನಾಸನ. ಗ॥ ೪. ತಪಮಾವನಮು. ಕ॥

ಎಂದು ಚತುರ್ವಿಧಾರಾಧನಾರ್ಥಮುಂ ಪ್ರಮಾದಪರಿಹಾರಾರ್ಥಮುಂ ಮಾಗಿ ತನ್ನೊಳ್ ಕಂಪಿತಾದಿದೋಷವರ್ಜಿತಮಪ್ಪಂತು ॥ ೩೫

( ಶಿಖರಿಣೀವೃತ್ತಂ )

ಶ್ರುತಖ್ಯಾತಾಚಾರ್ಯಪ್ರವರವಿನಯಾಲೋಚನಪರಂ ।
ಕೃತಪ್ರಾಯಶ್ಚಿತ್ತಂ ಮಣಿಮುಕುರಬಿಂಬಂಬೊಲೆಸೆದಂ ॥
ವ್ರತೀಂದ್ರಂ ನಿಶ್ಶಲ್ಯಂ ನಿಯಮಿತಮನೋವೃತ್ತಿಸುಭಗಂ ।
ಮಿತತ್ಯಾಗೋದ್ಯೋಗಂ ದೃಢತರಮಹಾಸಂಯಮಸುಖಂ ॥ ೩೬

ಮತ್ತಂ ಮಂತ್ರೌಷಧೋಪಕರಣಕೀರ್ತಿಸತ್ಕಾರಲಾಭನಿರಪೇಕ್ಷನಾಗಿ ಕರ್ಮಕ್ಷಯಕಾಂಕ್ಷೆಯಿಂ ಚಾರಿತ್ರಶುದ್ಧಿಯುಮನಪೇಕ್ಷಿಸಿ ದರ್ಶನಜ್ಞಾನಚಾರಿತ್ರೋಪಚಾರ ಚತುರ್ವಿಧವಿಕಲ್ಪವಿನಯದೊಳಂ ನೆಱೆದು ॥ ೩೭

ಅಳವಡಿಸಿ ಕಷಾಯೇಂದ್ರಿಯ ।
ಕುಳಮಂ ರತ್ನತ್ರಯಂಗಳೊಳಮಾಗುಣಮಂ ॥
ತಳೆದನಣಂ ನಮ್ರತೆಯಂ ।
ತಳೆದಾಮುನಿ ವಿನಯಮೆಂಬ ತಪಮಂ ತಳೆದಂ ॥ ೩೮

ಮತ್ತಂ ಸಮಾಧಿಸಾಧನೋಪಾಯನಿಪುಣನೆನಿಸಲುಂ ನಿರ್ವಿಚಿಕಿತ್ಸತಾಗುಣರಕ್ಷಣಕ್ಷಮೆಯನಂಗೀಕೃತಂಮಾಡಲುಂ ಪ್ರವಚನವತ್ಸಳತ್ವಮಂ ಪ್ರಕಟಿಸಲುಂ ಪ್ರತ್ಯುಪಕಾರನಿರಪೇಕ್ಷನಾಗಿ ತನಂದುಪದೇಶದಿಂ ಪ್ರಾಶುಕದ್ರವ್ಯಂಗಳಿಂದಾಚಾರ್ಯಾದಿದಶಪುರುಷರೊಳಂ ॥ ೩೯

ಅತಿಶುದ್ಧಮಾಗಿ ನೆಗಳ್ದಪ ।
ಕೃತಿಯಿಂ ಪರಮಾಗಮೋಪದಿಷ್ಟಕ್ರಮದಿಂ ॥

೧. ನಿಶ್ಶಲ್ಯಾ. ಕ॥ ೨. ಮಹಮಾಸ. ಕ॥ ೩. ತಳೆದಂ. ಕ॥ ೪. ಕ್ಷಣಾ. ಕ॥ ೫. ತನ್ನಿಂದು. ಗ॥ ೬. ಪ್ರಾಸುಕ. ಗ॥

ಯತಿಪತಿ ಚರ್ಯಾವೃತ್ತಿ ।
ವ್ರತಮಂ ಪರಿಪೂರ್ಣಮಪ್ಪಿನಂ ಪಾಲಿಸಿದಂ ॥೪೧

ಮತ್ತಂ ಪ್ರಜ್ಞಾತಿಶಯಮಂ ಪ್ರಕಟಿಸಲುಂ ಪ್ರವಚನಸ್ಥಿತಿಯನತಿಶಯಿಸಲುಂ ಸಂಶಯಧ್ವಂಸನಂಮಾಡಲುಂ ಪ್ರಭಾವನಾಭಿರುಚಿಯಂ ತೋಱಲುಂ ಧರ್ಮಾನುರಾಗಮಂ ನೂರ್ಮಡಿಸಲುಂ ಕಷಾಯೇಂದ್ರಿಯಜಯೋಪಾಯಮನಳವಡಿಸಲುಂ ತಪೋವೃದ್ಧಿಯುಮನಾಚಾರಶುದ್ಧಿಯುಮನಪ್ಪುಕೆಯ್ಯಲುಮನುರಕ್ತನಾಗಿ ॥೪೧

ಮೋಕ್ಷಪ್ರಾಸಾದಸೋಪಾನಮನಮಳಗುಣಸ್ಥಾನಮಂ ನಿರ್ಜಿತಾಶೇ । ಷಾಕ್ಷಂ ಸ್ವಾಧ್ಯಾಯಮೆಂಬಗ್ಗಳಿಕೆಯ ತಪಮಂ ವಾಚನಾ[೧]ಪೃಚ್ಛನಾನು । ಪ್ರೇಕ್ಷಾವಾಮ್ನಾಯೋಪದೇಶಕ್ರಮಪರಿಗಣನಾವ್ಯಕ್ತಪಂಚಾಂಗಮಂ ಪೂ । ರ್ಣಾಕ್ಷೂಣಂ ನಿಟ್ಟೆ ನೇರ್ಪಟ್ಟರೆ ನಡೆಯಿಸಿದಂ ಸೂಕ್ತಿಮುಕ್ತಾವತಂಸಂ ॥೪೨

ಮತ್ತಂ ಅವ್ಯಕ್ತಪ್ರಾಣಾಪಾನಪ್ರಚಾರನುಂ[೨] ಗಾತ್ರನೇತ್ರಪರಿಸ್ಪಂದಾದಿವಿಕಾರವಿರಹಿತನುಂ ಆಧ್ಯಾತ್ಮಿಕಸಕಳಸಾಮಗ್ರೀಸಮಗ್ರನುಂ ಸ್ವರ್ಗಾಪವರ್ಗಸಾಧನೋಪಾಯನಿಪುಣನುಮೆನಿಸಿ ॥೪೩

ಪರಿಹರಿಸಿ ಚಿತ್ತದಿಂದಾ ।
ರ್ತರೌದ್ರಮಂ ಧರ್ಮಶುಕ್ಲಮೆಂಬೀಯೆರಡುಂ ॥
ಸ್ಥಿರಮಾಗೆ ದಿವ್ಯಮುನಿಪಂ ।
ನಿರಂತರಧ್ಯಾನಯೋಗತತ್ಪರನಾದಂ ॥೪೪
ಭುವನತ್ರಯಮೆಱಪ್ಪುದು ಸಂ ।
ಭವಿಪ್ಪುದು ಸಪ್ತರ್ಧಿಮೋಕ್ಷಲಕ್ಷ್ಮೀಪರಿರಂ ॥

೧. ವಾಕ್ಯ. ಕ॥ ೨. ಪ್ರಚುರನುಂ. ಕ॥

ಭವಿಳಾಸಂ ಸಮನಿಪ್ರದೆನ।
ಲವಾರ್ಯಮಹಿಮೋದಯಂ ತಪಸ್ಸಾಮರ್ಥ್ಯಂ ॥೪೫

ಅಂತೆನಿಸಿ ಪನ್ನೆರಡುಂ ತೆಱದ ತಪದೊಳ್ನೆಱೆದು ಮತ್ತಂ ॥೪೬

ಉಪಧಿತ್ಯಾಗಮೆ ಪುರುಷಂ।
ಗೆ ಪರಮಹಿತಮೆಂದು ಸಕಳಭೇದಂಗಳನಂ॥
ದುಪಶಮಿಸಲುತ್ತಮತ್ಯಾ।
ಗಪವಿತ್ರಚರಿತ್ರನೆನಿಸಿದಂ ಮುನಿಮುಖ್ಯಂ ॥೪೭

ದೇಹಸುಖಹೇತುಗಳುಮಂ।
ದೇಹಮುಮಂ ತನ್ನವೆಂದು ಪಂಬಲಿಸದೆ ನಿ।
ರ್ಮೋಹದಿನಿರೆ ಯತಿಪತಿಗ।
ವ್ಯಾಹತಮುಳಪಟ್ಟುದುತ್ತಮಾಕಿಂಚನ್ಯಂ ॥೪೮

ಆವುದುಮನೆನಿತು ಕಾಲಂ।
ತೀವಿದೊಡಂ ತೀವದಾವಗಂ ತೋಱಯುಲೊಡಂ॥
ತೀವ್ರವುಡಿದೇಂ ವಿಚಿತ್ರಮೊ।
ಜೀವನ ವಿಪರೀತಮೆನಿಸಿದಾಶಾಗರ್ತಂ ॥೪೯

( ತರಳವೃತ್ತಂ )

ಪೋಗದೇತೆಱೊಳಪ್ಪೊಡಂ ಪಿರಿದಾಗಿ ದೇಹಿಗೆ ದುಃಖಸಂ।
ಯೋಗಮಂ ಪಡೆಗುಂ ನಿರಂತರಮಾಸೆಯೆಂಬ ಮಹಾಜ್ವರಂ॥
ಯೋಗಮಂ ಜಿನವೈದ್ಯನಾತನದರ್ಕೆ ಮಾಡಿದನುತ್ತಮ।
ತ್ಯಾಗಮೆಂಬ ಕಷಾಯಮಂ ನಿಮಿಷಕ್ಕೆ ಮೋಕ್ಷಮನೀವುದಂ ॥೫೦

ಮತ್ತಂ ॥೫೧

೧. ದುಃಪಮೆನಿ. ಗ॥

ಮನದೊಳ್ ಪೂರ್ವಾನುಭುಕ್ತ[1]ಪ್ರಿಯಲಲನೆಯ ಲಾವಣ್ಯಮಂ ರೂ
ಪಮಂ ಯೌ। ವನಮಂ ಸ್ರಕ್ಚಂದನಾಲೇಪನಪರಿಮಳಸಂಸಕ್ತಸಂ
ಭೋಗಶಯ್ಯಾ॥ ಸನಮಂ ನಿರ್ವ್ಯಾಕುಳಂ ನೆಂಬಲಿಸದೆ ಮದನವ್ಯಾಳ
ಶುಂಡಾಳದಂತಾ। ಶನಿಯಂ ಕಿೞ್ತಿಕ್ಕೆ ತತ್ಸಂಯಮಿಗೆ ಸಮನಿಸಿತ್ತು[2]
ತ್ತಮಬ್ರಹ್ಮಚರ್ಯಂ ॥೫೨

ಅನ್ತವಿಶ್ರಾಂತನಿಯಮನಿಷ್ಠಾಪರನಾಗಿ ॥೫೩

ಮೂಲಗುಣಂಗಳಿಂದೆ ದಶಧರ್ಮಮನೇಱಿಸಿ ಕೊಂಡಮೋಘಬಾ।
ಣಾಳಿಯನಲ್ಲಿ ತೊಟ್ಟು ನಿಲಲೀಯದೆ ತೂಳ್ದು ಪರೀಷಹಂಗಳಂ ॥
ಮೇಳಿಸಿದಂ ಜಯಾಂಗನೆಯನೇಕವಿಹಾರದೊಳಾಮುನೀಶ್ವರಂ।
ಮೇಳಿಸೆ ಕೀರ್ತಿ ಕೀರ್ತಿಮುಖದಂತೆ ದಿಶಾರದನೀರದಂಗಳಂ ॥೫೪

ಅಸದೃಶಮಂ ವಿಭೂತಿಯನೊಡರ್ಚುವಮಾನುಷಮಂ ಪ್ರಭಾವ
ಮಂ। ಪಸರಿಪಚಿಂತ್ಯಮಂ ಪರಮತೀರ್ಥಕರೋಚಿತನಾಮಗೋತ್ರ
ಮಂ॥ ಪೊಸಯಿಪಜೇಯಮಂ ಜಯಮನೀವುದನೇಂ ದೃಢಚಿತ್ತನಾ
ಗಿ ಭಾ। ವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಂ ಮುನೀ
ಶ್ವರಂ ॥೫೫

ಮತ್ತಂ ॥೫೬

ಕ್ರಮದಿಂ ಸಪ್ತರ್ಧಿವೆತ್ತು ಶ್ರಮದಿನುಪಶಮಶ್ರೇಣಿಯಂ ಸಾಧರ್ಮ
ನಿಶ್ರೇ। ಷಮಶೇಷಂ ಮೋಹನೀಯಂ ಪ್ರಶಮಿಸೆ ಮುನಿಮುಖ್ಯಂ ಯ
ಥಾಖ್ಯಾತಚಾರಿ। ತ್ರಮನವ್ಯಾಬಾಧಮಂ ದ್ವಾದಶವಿಧಮನನುಪ್ರೇಕ್ಷೆ[3]

೧. ಭುಕ್ತಿ. ಕ॥ ೨. ಕಿರ್ತಿಕ್ಕೆತತ್ಸಂಯಮಿಸಮನಿಸದತ್ತು. ಗ॥
೩. ಪ್ರೇಕ್ಷಿತಂ. ಕ॥

ಯಂ ತಾಳ್ದ ಲೋಕೋ । ತ್ತಮನಾದಂ ಸ್ತುತ್ಯನಾದಂ ಚತುರಕವಿ ಜನಾಸ್ಥಾನರತ್ನಪ್ರದೀಪಂ ॥೫೭

ಅಂತು ಯಥಾಖ್ಯಾತಚಾರಿತ್ರಸಂಪತ್ತಿವೆತ್ತರಡನೆಯೊಳವುಪಶಮಶ್ರೇಣಿಯನೇಱಿ ಚತುರ್ವಿಧಶುಕ್ಲಧ್ಯಾನಸವಾಹಿತನುಪಶಾಂತಗುಣಸ್ಥಾನದೊಳ್ ನಿಂದೊಂದು ತಿಂಗಳ್ಗೆ ॥೫೮

ಅನಶನದಿಂ ಸಮಾಧಿ ಬಗೆದಂತಿರೆ ಕೂಡೆ ಶರೀರಭಾರಮಂ ।
ಮುನಿಪತಿ ಬಿಟ್ಟು ರತ್ನಸದೃಶಂ ಮಱುಮೆಯ್ಪುಳುಕಿಂ ಪಳಚ್ಚನ ॥
ಪ್ಪಿನಮುಹಮಿಂದ್ರನಾದನಪರಾಜಿತನಾಮವಿಮಾನರತ್ನದೊಳ್ ।
ತನಗಳವಟ್ಟು ತೋಱೆ ಸಹಜಾಭರಣಾಂಬರಪುಷ್ಪಮಾಲಿಗಳ್ ॥೫೯

ಅಮರಪಟಲಂಗಳಱುವ ।
ತ್ತಮೂಱುಮಂ ಸುಖದೊಳಂ ವಿಳಾಸದೊಳಮತಿ ॥
ಕ್ರಮಿಸಿದುದೆನಲಪರಾಜಿತ ।
ವಿಮಾನಮಂ ನಿರುಪಮಾನಮಂ ಪೊಗೞದರಾರ್ ॥೬೦

ಶುದ್ಧಸ್ಫಾಟಿಕಮಣಿಭವ ।
ನೋದ್ಧತಕಳಧೌತಕಳಶಕರಕಿಸಲಯದಿಂ ॥
ಸಿದ್ಧಾಲಯಮಂ ಲೀಲೆಯಿ ।
ನುದ್ಧರಿಸಿದುದಾವಿರಾಜಮಾನವಿಮಾನಂ ॥೬೧

ಅಲ್ಲಿ ॥೬೨

ಸುಪ್ತಂ ಪ್ರಬುದ್ಧನೆನೆ ಪ ।
ರ್ಯಾಪ್ತಿಯನಂತರ್ಮುಹೂರ್ತದಿಂ ಪಡೆದು ಸುಖಾ ॥

೧. ಬಗೆವಂತಿ. ಗ॥ ೨. ರತ್ನಿ. ಕ॥ ೩. ಪಟಹಂ. ಗ॥

ವಾಪ್ತಿಯಿನಹಮಿಂದ್ರಂ ಪರಿ।
ತೃಪ್ತಿಯನುಪ[೧]ಪಾತತಲ್ಪತಳದೊಳ್ತಳೆದಂ ॥೬೩

ಮುನ್ನಿನ ಶುಕ್ಲಧ್ಯಾನಮೆ ।
ಸನ್ನಿದಮಾದಂತೆ ದೇಹರುಚಿ ಪಸರಿಪುದುಂ ॥
ರನ್ನದ ಕೇರ್ಗಳ್ ದುಗುಲದ ।
[೨]ಕನ್ನಡಂಗಟ್ಟಿದಂತೆ ತೋಱುದುಮಾಗಳ್ ॥೬೪

ಹಿಮಕರಬಿಂಬದಿಂ ಕಡೆದುದೋ ಪಳುಕಿಂ ಪಡೆದತ್ತೊ ಪೊಗಳಂ। ಸಮೆದುದೊ ಚಂದ್ರಕಾಂತಮಣಿಯಿಂ ಬೆಸಕೆಯ್ದುದೊ ಮೌಕ್ತಿಕಂಗಳಿಂ । ಸಮನಿಸಿದತ್ತೊ ಕೋಮಳಮೃಣಾಳಿಕೆಯಿಂ ಪರಿಪೂರ್ಣಮಾಯ್ತೊ ಪೇ। ೞಿಮಿದೆನೆ ಚೆಲ್ವುವೆತ್ತುದಹಮಿಂದ್ರನ ಪಾಂಡುರದೇಹಮಂಡಳಂ ॥೬೫

ಹರಿನೀಳಭೂಮಿಯೊಳ್ ಕ।
ಪ್ಪುರವಳುಕಿನ ಲೆಪ್ಪದಂತೆ ತನು ನಯನಮನೋ॥
ಹರಮಾಗೆ ಜಗುನೆಯೊಳ್ ಸಂ।
ಚರಿಸುವ ಹಂಸಂಬೊಲೆಸೆದನಮರೋತ್ತಂಸು ॥೬೬

ಅರುಣಮಣಿಭೂಷಣಪ್ರಭೆ।
[೩]ಪರಿಕಲಿಸಿರೆ ದಿವಿಜಪತಿಯ ದಿವ್ಯಶರೀರಂ ॥
ಪರಿಭವಿಸಿದುದೆಳವಿಸಿಲಾ।
ವರಿಸಿದ ಕಮನೀಯಪುಂಡರೀಕಶ್ರೀಯಂ ॥೬೭

೧. ಪಾದ. ಕ॥ ೨. ಕನ್ನಡಮಂ. ಕ॥ ೩. ಪರ. ಕ॥ಗ॥

ನೆನೆವಂ ಮೂವತ್ತುಮೂಸಾಸಿರಬರಿಸದೊಳಾಹಾರಮಂ ನಿಷ್ಪ್ರವೀಚಾ| ರನವಾರಂ ತನ್ನೊಳಾದಭ್ಯುದಯಸಕಳಸೌಖ್ಯಂ ತ್ರಯಸ್ತ್ರಿಂಶದಂಭೋ | ಧಿ ನಿಜಾಯುಸ್ಸಂಖ್ಯೆ ಪಕ್ಷಾಧಿಕಮೆನೆ ಪದಿನಾಱಾದ ಮಾಸಕ್ಕುಸಿರ್ವ | ತ್ತಿನೆ ಮೋನಂಗೊಳ್ಗದೇನಂ ಪೊಗೞ್ದಪೆನಹಮಿಂದ್ರಂಗೆ ಕೈಸಾರ್ದ ಸ್ತೈಪಂ ||೭೮

ಪೊಸದ ಸೌರಭಂ ತವದ ಮೆಯ್ಸಿರಿ ಬಾಡದ ದಾಮಮುಟ್ಟೊಡಂ |
ಮಾಸದ ಸೀರೆ ಧಾತುಮಳಮಿಲ್ಲದೊಡಲ್ ಪರಿಪೂರ್ಣಯೌವನಂ ||
ಲೇಸೆನಿಸಿರ್ದ ರೂಪು ಶುಭಲಕ್ಷಣಮೆಂಬಿವನಪ್ಪುಕೆಯ್ದುನಾ |
ಯಾಸದಿನೀಸಿದಂ ಕಡೆವರಂ ದಿವಿಜಂ ಪರಮಾಯುರಬ್ಧಿಯಂ ||೭೯

ಅನ್ನೆಗಮಿತ್ತಲ್ ||೮೦

ದಿವದಿಂದಾದಿವಿಜಂ ಪೈ |
ಶ್ರವಣಚರಂ ಚರಮದೇಹಮಂ ಕೈಕೊಳಲಿಂ ||
ದವತರಿಸಿದಪಂ ಧರೆಗೆಂ |
ದವಧಿಯಿನಱಿದೊಸೆದನಂದು ಸೌಧರ್ಮೇಂದ್ರಂ ||೮೧

ಅಂತವಧಿವಿಧಾನದಿಂ ಸುರಪ್ರಧಾನನಱಿದು ಧನಪ್ರಧಾನನುಮನಮರಗಣಿಕಾಪ್ರಧಾನೆಯರುಮಂ ಬರಿಸಿ ರೈವೃಷ್ಟಿಯಂ ಮಾಡಿಮೆಂದು ಬೇಱವೇಱ ನಿಯಮಿಸುವುದುಮಂಗವಿಷಯವಲ್ಲಭನುಂ ಮಿಥಿಳಾಪುರಂಧ್ರೀವಿಳೋಚನಚಕೋರತಾರಾವಲ್ಲಭನುಮಿಕ್ಷ್ವಾಕುಕುಲಕಮಳನೀಕಳಹಂಸನುಂ ಚಿತ್ತಭವನೋತ್ತಂಭಿತಪ್ರಭಾವತೀಮಹಾದೇವೀಕುಚಕುಂಭನುಮಪ್ಪ ಕುಂಭಮಹಾರಾಜಭವನದೊಳ್ ಗರ್ಭಾವತರಣಕಲ್ಯಾಣಮುಱಿಂಗಳೆನೆ ||೮೨

ಒದವಿದ ಭಕ್ತಿಯುಂ ದಿವಿಜನಾಯಕನಾಜ್ಞೆಯುಮೊಂದನೊಂದು
ವಿೞ । ಱದುವೆನೆ ಮೂಱು ಕೋಟಿವರೆ ರನ್ನದ ಬಲ್ಸರಿ ಪೊನ್ನ ಸೋನೆ
ವಾ ॥ ೞದೆ ಸುರಿತಂದುದಂದು ಧನದಾಂಬುದದಿಂ ಮಿಥಿಳಾಪುರಾಂತ
ರಾ । ಳದೊಳನರಶ್ಮಿಗಳ್ ಮಸುಳ್ವಿನಂ ದೆಸೆ ಚಿತ್ರಿಸಿದಂದಮಪ್ಪಿನಂ ॥

ವಸುಧಾರೆ ಕಱೆಯೆ ಧರಣಿಗೆ ।
ವಸುಮತಿವೆಸಱಾಯ್ತು ರತ್ನವೃಷ್ಟಿಗಳಿಂ ಚಿ ॥
ತ್ರಿಸೆ ಚಿತ್ರವಾದುದೆನೆ ಬ ।
ಣ್ಣಿಸರಾರ್ ಗರ್ಭಾವತರಣಮಂ ಜಿನಪತಿಯಾ ॥೨೪

ಅಂತು ಕಱೆವ ಕನಕವರ್ಷದೊಡನೆ ಮನಸಿಜವಶೀಕರಣಶರವರ್ಷಮೆನಿಸಿ ॥೨೫

ಒದವಿದ ನೂಲ ತೋಂಗಲುಲಿ ನೇವುರದಿಂಚರಮುಣ್ಮೆ ಪೊಣ್ಮೆ ರಾ ।
ಗದ ತೊಱೆ ಮೇಱೆದಪ್ಪಿ ಕವಿದತ್ತೆನೆ ಭೂಷಣಕಾಂತಿಯುಂ ಕಟಾ ॥
ಕ್ಷದ ಪೊಳೆಪುಂ ತನುಪ್ರಭೆಯುಮಾವರಿಪನ್ನೆವರಂ ಪ್ರಭಾವತೀ ।
ಸುದತಿಯ ರಾಜಮಂದಿರಮನೇಂ ಪುಗುತಂದರೊ ದೇವಕಾಂತೆಯರ್ ॥

ಕುಲವತಿಯುಂ ಪ್ರಭಾವತಿಯನೋಲಗಿಸಲ್ ಸುರರಾಜನಾಜ್ಞೆಯಿಂ ।
ಕುಲನಗಪದ್ಮಸದ್ಮದಮರೀಕುಲಮುಂ ರುಚಕಾದ್ರಿಕೂಟದಿ ॥
ಗ್ವಲಯದ ದಿಗ್ವಧೂಕುಲಮುಮೊರ್ಮೆಯೆ ತತ್ಪರಿವಾರದೇವತಾ ।
ಕುಲಮುಮನಂಗನಾಜ್ಞೆಯೆನೆ ಬಂದುದು ರಾಜಕುಲಕ್ಕನಾಕುಲಂ ॥

ಅಂತು ಬಂದು ಮಣಿಕುಟ್ಟಿಮತಳಮನಳಕವಲ್ಲರಿಗಡರ್ಪುಮಾಱ್ಪುದುಂ ॥೨೮

೧. ಗಳ್ಸುಳಿವಿನಂ, ಗ॥ ೨. ಚಿತ್ರೆಯಾದುದು, ಕ॥ಗ॥

ಆನತಸುರಕಾಂತಾಸಂ ।
ತಾನದ ಕುಂತಳದ ಚಿನ್ನ ಪೂಗಳ ಪೊಳೆಪಂ ‖
ದೇನೆಸೆದುದೊ ವೇದಿಕೆ ತಾ ।
ರಾ[1]ನಿಕರಂ ಪುದಿಯೆ ಪೊಳೆವ ಗಗನಸ್ಥಳವೋಲ್ ‖೭೯

ಅನಂತರಂ ‖೮೦

ಲಾವಣ್ಯರಸಂ ತೆಕ್ಕನೆ ।
ತೀವೆ ಘನಸ್ತನರಥಾಂಗದಿಂ ಸ್ಮಿತನಯನೇಂ ‖
ದೀವರದಿಂದಾಸ್ಥಾನಸ ।
ರೋವರಮೇನಪ್ಸರೋವರಂ ಸೊಗಯಿಸಿತೋ ‖೮೧

ಪೊಣ*ರ್ವಕ್ಕಿಯ ಮೇಗಿಕ್ಕಿದ ।
ಮೃಣಾಳದಂತೆಸೆಯೆ ಮೊಲೆಯ ಮೇಲಣ ಮುಕ್ತಾ ‖
ಮಣಿಮಾಲೆ ಲೀಲೆಯಿಂ ಸುರ ।
ಗಣಿಕೆಯರೋಲಗಿಸುತಿರ್ದರಾ ನೃಪವಧುವಂ ‖೮೨

ತೊಳಗುವ ವತಂಸಮುಕ್ತಾ ।
ಫಳಕಿರಣದೊಳಮರಕಾಮಿನೀ[2]ಸ್ಮಿತನಯನಂ ‖
ಪೊಳೆದುವು ಪೊಸವೆಳ್ದಿಂಗಳ ।
ಬಳಸಿಂಗೊಳಗಾದ ಚೆಳಚಕೋರಂಗಳವೋಲ್ ‖೮೩

ಬಗೆಗೊಳಸಲ್ ಜಿನಾಂಬಿಕೆಯನೀತೆಱದಿಂ ನೆಱೆದತ್ತು ಮಜ್ಜನಂ ।
ಬುಗಿಸುವ ದೇವಪೂಜೆಗೆಡೆಮಾಡುವ ಸಗ್ಗದಲುಳ್ಳ ಬಣ್ಣವ ‖
ಣ್ಣಿಗೆಗಳ ವಸ್ತ್ರಮುಂ ಕುಡುವ ಕಲ್ಪಕುಜಂಗಳ ಮಾಲೆವೂವನೋ ।
ಲಗಿಸುವ ಜೋನವೆತ್ತುವಗಲೆತ್ತುವ ದೇವವಿಳಾಸಿನೀಜನಂ ‖೮೪

೧. ನೀಕಂ. ಕ‖ ೨. ಸಿತ. ಗ‖

ಅಂತು ಸುರಸುಂದರೀಸಂದೋಹಂ ಪ್ರಭಾವತೀದೇವಿಯಂ [೧]ದಿವಸವಳವೋಲಗಿಸುವಲ್ಲಿ ಕೆಲರ್ಕೆಂದಾವರೆಯನೆಳವಿಸಿಲೆಳಸುವಂದವಾಗೆ ಲಾಕ್ಷಾರಸದಿನಡಿಯನೂಡಿಯುಂ ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಳನೂಪುರಮಂ ತುಡಿಸಿಯುಂ ಪ್ರಳನವಲಯಮಂ ಪೊಂದಾವರೆಯ ಬಳ್ಳಿ ಬಳಸಿದಂತೆ ನಿತಂಬವಲಯದೊಳ್ ಮಣಿಮೇಖಳೆಯಂ ತೊಡರ್ಚಿಯುಂ ಮದನಮದರದನೀರದನದೊಳ್ ಕೀರ್ತಿಮುಖಮಂ ಕೀಲಿಸುವಂತೆ ಶತಪತ್ರಭಂಗಮಂ ತುಂಗಸ್ತನಭಾಗದೊಳ್ ಸಂಗಳಿಸಿಯುಂ [೩]ಪೀವರಪಯೋಧರಮಂಡಳಕ್ಕೆ ಪರಿವೇಷಮಂ ಪಡೆವಂತೆ ಪಂಚರತ್ನದ ಬಣ್ಣಸರಮಂ ಕೊರಲೊಳಕ್ಕಿಯುಂ [೪]ಬಾಹಾಲತೆಯ ಬಿಳಲಂತೆ ರತ್ನಕಾಂತಿ ಕವಲ್ವರಿವಿನಮಂಗದಮನಳವಡಿಸಿಯುಂ ಸಿರಿಸದ ಬಾಸಿಗಮಂ ಭೃಂಗಮಾಲೆ ಬಳಸಿದಂತೆ ನಳತೋಳೊಳ್ ನೀಲದ ಪಿಂಡುಗಂಕಣಮನೇಱಿಸಿಯುಂ ನನೆಗಣೆಗೆ [೫]ಗಱಿಗಟ್ಟುವಂತಂ[೬]ಗುಳಿಯಂ ರತ್ನಮುದ್ರಿಕೆಯಿಂ ಮುದ್ರಿಸಿಯುಂ ಸ್ಮರವಶೀಕರಣಯಂತ್ರ[೭]ಮಂ ಬರೆವಂತೆ ಕಪೋ[೮]ಳಫಳಕದೊಳ್ ಮಕರಿಕಾಪತ್ರಮಂ ಬರೆದು ಪೊಸಮಸೆಯ ಪೂಗಣೆಗೆ ಪೊಗರಂ ಪಡೆವಂತೆ ನಗೆಗಣ್ಗೊಳಂಜನಮನ[೯]ಣ್ಕೆಗೆಯ್ದುಂ ಕರ್ಣಾಂತವಿಶ್ರಾಂತವಿಳೋಚನದೊಳ್ಪಡಿಯಿಟ್ಟ[೧೦]ನೋಟ್ಟಂತೆ ಕಿವಿಯೊಳವತಂಸೋತ್ಪಳಮಂ ತೊಡರ್ಚಿಯುಂ ॥೮೫

೧. ದಿವಸ. ಕ॥ ೨. ಭಾರ. ಕ॥ ೩. ಪೀನಪೀವರ. ಗ॥
೪. ಬಾಹುಲತೆ. ಕ॥ ೫. ಗಣೆ. ಗ॥ ೬. ಅಂಗುಳಿಯರತ್ನಮುದ್ರಿಕೆಯಂ. ಕ॥
೭. ಮಂತ್ರ. ಕ॥ ೮. ತಳ. ಕ॥ ೯. ನಂತೆಗೆಯ್ದು. ಕ॥
೧೦. ನೋಡುವಂತೆ. ಗ॥

ಉಗುರ್*ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳವಂತೆ ಮೆಲ್ಲಮೆ । ಲ್ಲಗೆ ತಲೆವಿಕ್ಕಿ ಚಂದ್ರಕಿರಣಂಗಳನಾಗಳೆ ರಾಹು ನುಂಗಿ ಮು ॥ ತ್ತುಗುಳ್*ದಪುದೆಂಬಿನಂ ಮುಡಿಸಿ ಮಾಲೆಯ ಸೋರ್ಮುಡಿಯಂ ಲಲಾಟದೊಳ್ । ಮೃಗಮದಬಿಂದುವಂ ಪೆಱಗೆ ನುಣ್ಗಱಿಯುಂ[1] ಪಡೆವಂತೆ ತಿರ್ದಿದಳ್[2] ॥೮೬

ಆಗಳಾಪ್ರಭಾವತೀಪ್ರಮುಖದೊಳ್ ॥೮೭

ಜನನಯನಪುತ್ರಿಕಾನ ।
ರ್ತನರಂಗಂ ಮುಖವಿಳಾಸರಸಮಣಿಮಯಭಾ ॥
ಜನಮೆಸೆದುದು ಕನ್ನಡಿ ಸುರ ।
ವನಿತಾಯತಭುಜಲತಾಲತಾಂತಸ್ತಬಕಂ ॥೮೮

ಬನ್ನಮೆನಗಾದುದೀಮುಖ ।
ಸನ್ನಿಧಿಯಿಂದೆಂದು ಕರಗುವಂತೆವೊಲಾಯ್ತಾ ॥
ಚೆನ್ನೆಯ ಲೋಚನಚಂದ್ರಿಕೆ ।
ಯಿಂ ನಟ್ಟೊಸರ್*ವಿಂದುಕಾಂತಮಣಿಮಯಮುಕುರಂ ॥೮೯

ನೃಪಸತಿಯ ಕೆಲದ ಚಮರರು ।
ಹಪಾಣಿಪಲ್ಲವೆ ಲತಾಂಗಿ ಗೆಲೆವಂದಳ್ ದು ॥
ಗ್ಧಪಯೋಧಿಮಥನದೊಳ್ ಫೇ ।
ನಪಟಳಮಂ ಪಿಡಿದು ನೆಗೆವ ಲಕ್ಷ್ಮೀವಧುವಂ ॥೯೦

ಯುವತಿಗೆ ಚಮರರುಹಮನಿ ।
ಕ್ಕುವಮರಿ ತಣ್ಗದಿರನುಗುಳ್*ವ ಶಶಿಲೇಖೆಯಿನೊ ॥

---

೧. ನುಣ್ಗಱಿಯುಂ. ಗ॥ ೨. ತಿರ್ದಿದರ್. ಗ॥

ಪ್ಪುವ ಗಗನಲಕ್ಷ್ಮಿಯೆನೆ ಕಾಂ ।
ತಿವೆತ್ತ ನಕ್ಷತ್ರಮಾಲೆಯಿಂ ಕಣ್ಗೆಸೆದಳ್ ॥೯೧
ಮುಡಿಯಲುತ್ತ ರಾಹುಬಿಂಬಂ ।
ಕೊಡೆಯಲ್ಲಿದು ಚಂದ್ರಬಿಂಬಮೆನೆ ದೇವಿಗೆ ಬೆ ॥
ಳ್ಗೊಡೆವಿಡಿದಮರಾಂಗನೆ ಕೀ ।
ಳ್ಪಡಿಸಿದಳುಪರಾಗಯಾಮಿನೀಕಾಮಿನಿಯಂ ॥೯೨
ಮರಕತಮುದ್ರಾರುಚಿಯಿಂ ।
ಪರಭಾಗಂಬಡೆದು ಭುಜಲತಾಪಲ್ಲವದಂ ॥
ತಿರೆ ತಂಬುಲವಂ ಕೊಟ್ಟಳ್ ।
ನರೇಂದ್ರವಧುವಿಂಗೆ ದಿವಿಜವಧು ಮತ್ತೊರ್ವಳ್ ॥೯೩
ಅರಸಿಯ ಕೆಲದೊಳ್ ಸುರಸುಂ ।
ದರಿಯೊರ್ವಳ್ ಪಡೆಯೆ ಗಾಡಿ ನಾಡೆ ಬೆಡಂಗಂ ॥
ಸಿರಿ ಪಿಡಿದಿರ್ದಳ್ ಪೊಂದಾ ।
ವರೆವೂವೆನೆನಲ್ಕೆ ಡವಕೆಯಂ ಪಿಡಿದಿರ್ದಳ್ ॥೯೪
ದೆಸೆಬಿದ್ದಂ ಮದನಾಮೃತ ।
ರಸವರ್ಷಂ ಕಱೆದುದೆಂಬಿನಂ ಗೇಯರಸಂ ॥
ಪಸರಿಸೆ ನುಣ್ಗೊರಲಿಂ ಮೆ ।
ಚ್ಚಿಸಿದಳ್ ಗಂಧರ್ವಗಣಿಕೆ ನೃಪಸುಂದರಿಯಂ ॥೯೫
ಕುಡುಪಿನೊಡನೊಡನೆ ಮನಮಂ ।
ಕುಡುವುರ್ವಿನ ಜವ್ವನ ಡಕ್ಕೆವಾಜಿಸೆ ಜತಿ ನೇ ।

೧. ಬಡೆದ. ಗ॥ ೨. ಮೆನಿಸಲ್ಕೆ. ಗ॥

ರ್ಪಡೆ ಮೋಹನಮಂತ್ರಮನು ।
ಗ್ಘಡಿಪಂತಿರೆ ಖಚರಿ ಡಕ್ಕೆಯಂ ಬಾಜಿಸಿದಳ್ ॥೯೬
ಎಳಮಿಂಚು ಪೊಳೆದಡಂಗದೆ ।
ಪೊಳೆದಪ್ಪುದೆಂಬಂತೆ ವೇಗನರ್ತನದೊಳ್ ಕ ।
ಣ್ಗೊಳಿಸೆ ಕರಣಾಂಗಹಾರಂ ।
ವಿಳಾಸವತಿ ಸತಿಗೆ ಪುಳಕಮಂ ಪುಟ್ಟಿಸಿದಳ್ ॥೯೭

ಅಂತಚ್ಚರಸಿಯರಿಚ್ಚೆಯಿಂದೋಲಗಿಸುತಿರ್ಪಿನಮೊಂದು ದಿವಸ[1]
ಮಾಪ್ರಭಾವತೀಮಹಾದೇವಿ ಚತುರ್ಥಸ್ನಾನಾನಂತರಂ ॥೯೮

ಮಂಗಳವಸ್ತ್ರಗಳಿಂ ದೇ ।
ವಾಂಗನೆಯರ್ಮಾಡೆ ಗರ್ಭಶೋಧನಮಂ ಭೂ ॥
ಪಾಂಗನೆ ಕಾಳಿಂದೀನಿ ।
ಮ್ನಗೆಯುಮಾಕಾಶಗಂಗೆಯುಂ ಗೆಲೆವಂದಳ್ ॥೯೯

ಸೊಗಯಿಸೆ ಕೊಂಡ ಬೆಳ್ಪಸದನಂ[2] ಸುಲಿಪಲ್ಗಳ ಕಾಂತಿಯುಂ ಮು
ಗು । ಳ್ನಗೆಯ ವಿಳಾಸಮುಂ ತೊಡೆದ ಚಂದನಮುಂ ಕಡೆಗಣ್ಣ ಬಣ್ಣ
ಮುಂ । ದುಗುಲಮುಮಿಕ್ಕಿದಯ್ಸರದ ತಣ್ಬೆಳಗುಂ[3] ತಡವಾದುವೆಂದ
ವಂ । ನಗುವವೊಲಾದುದಾಸತಿಯ ಸೂಡಿದ ಮಲ್ಲಿಗೆಯುಚ್ಚವಾಸಿಗಂ ॥

ಅಂತು ಬೆಳ್ಪಸದನಂಗೆಯ್ದು ॥೧೦೧

ಅಂಚೆಯ ತುಪ್ಪುಳಂಚೆಯ ದುಕೂಳಪರಿಚ್ಛದಚಾರುತಲ್ಪದಿಂ ॥
ಕಾಂಚನಮಂಚದಿಂ ಮರಕತಪ್ರತಿಪಾದುಕದಿಂ ಮದಾಳಿಮಾ ।
ಳಾಂಚಿತಧೂಪಧೂಮಲತೆಯಿಂ ಘನಸಾರಸುಗಂಧಶುಕ್ತಿಕಾ ॥
ಸಂಚಯದಿಂ ಮನಂಗೊಳಿಪ ಸೆಜ್ಜೆಗೆವಂದಳದೊಂದು ಲೀಲೆಯಿಂ ॥

೧. ದೆವಸ. ಗ॥ ೨. ಬೆಳ್ವಸದನ. ಕ॥ ಗ॥ ೩. ತಣ್ವೆಳಗು. ಕ॥ಗ॥

ಅಂತು ಬಂದು ॥೧೦೩

ತಿಳಗೊಳದೊಳಗಣ ನೀಳೋ।
ತ್ಪಳದಂತಿರೆ ನಯನಕಾಂತಿ ಶಶಿಕಾಂತಶಿಳಾ ॥
ತಳಭಿತ್ತಿಗಳೊಳ್ ಲಕ್ಷ್ಮೀ।
ವಿಳಾಸಮಂ ತಳೆದು ತಳ್ಪದೊಳ್ ಕುಳ್ಳಿರ್ದಳ್ ॥೧೦೪

ಆಗಳಾಸೆಜ್ಜೆವನೆಯೊಳಗೆ ॥೧೦೫

( ತ್ರಿಪದಿ )

[೧]ಪರಿದುದಿಲ್ಲರಸಿಯ ಕುರುಳ ಕತ್ತಲೆ ಬೇಱ।
ಪರಿಭವಮುಧರಮಣಿಯಿಂದಮಾಯ್ತೆಂದು ॥
ಮರವಟ್ಟಂತಾಯ್ತು ಮಣಿದೀಪ ॥೧೦೬

ಅದಲ್ಲದೆಯುಮಾಕೆಯ ಸುಯ್ಯ ಸೊವಡಿಂಗೆ ಸೋಲ್ತು ಕಂದಿದಂತಿರ್ದ ಮರಕತಶುಕ್ತಿಕೆಯ ಕತ್ತುರಿಯ ಕದಡುಮಾಕೆಯ ಕಟಾಕ್ಷಚಂದ್ರಿಕೆಯ ತಣ್ಪಿನೊಳ್ ನಣ್ಪಿನಾಸೆಗೆಯ್ದಾಲಿಸುವಂತಿರ್ದ ಚಂದನಕರ್ದಮುಮುಮಾಕೆಯ ಸೋರ್ಮುಡಿಯ ವಿಳಾಸಕ್ಕೆ ಸುಗಿದಱಗಂಡಿಯ ನುಗುಳ್ವಂತೆ ಗವಾಕ್ಷಜಾಳದಿಂ ನುಗುಳ್ವಗರುವಿನ ಪೊಗೆಯುಮಾಕೆಯ ಸೌಕುಮಾರ್ಯದೊಡನೆ ಮೆಯ್ವೆತ್ತಿ ಕೆಡೆದಂತಿರ್ದುಪಹಾರಕುಸುಮಂಗಳುಮಾಕೆಯ ಕಳರವದೊಡನೆ ಮಚ್ಚರಿಸಿ ಸೆಱಗೆ ವಂದಂತಿರ್ದ ಪಂಜರಶುಕಶಾರಿಕೆಗಳುಮಾಕೆಯೊಳ್ ಕಲ್ತ ಪದಗತಿಯಂ ಪದನೊಪ್ಪಿಸುವಂತೆ ಸುೞವ ಬಾಳಮರಾಳಂಗಳುಮಾಕೆಯ ಪೊಸಮುತ್ತಿನ ಪೊನ್ನ ತುಡುಗೆಯ ಮರೀಚಿ [೨]ತೆರೆಸುತ್ತೆ ನಿಜಮ

೧. ಪರಿ. ಗ॥ ೨. ತೆರೆಸುತ್ತಿ ನಿಜಮನೋವಿಕಾರ. ಕ॥

ನೋಜವಿಕಾರಕ್ಕೆ ಲಜ್ಜಿಸಿ ಮುಸುಕಿದಂತಿರ್ದ ಭಿತ್ತಿಭಾಗವಿಲಿಖಿತ ಚಿತ್ರದಂಪತಿಗಳುಮತಿರಮಣೀಯಮಾಗೆ ॥೧೦೭

ಆವುದು ಪಲ್ಲವಮಾವುದು ।
ತಾವರೆಯೆಂದಱಿಯಲಾಗದೆನಲೊತ್ತಿದಳಾ ॥
ದೇವಿಯ ಮೃದುಪದತಳಮಂ ।
ದೇವಾಂಗನೆ ಕೆಂಪುವೆತ್ತ ನಿಜಕರತಳದಿಂ ॥೧೦೮

ಆಗಳೊರ್ವಳಮರರಮಣಿ ॥೧೦೯

ಮುಕ್ಕುಳಿಸಿದಮರ್ದನುಗುಳ್ದವ ।
ಳಕ್ಕುಮಿವಳ್ ವಂಶಮುಖದಿನೆನೆ ಕಳರುತಿ ಕೈ ॥
ಮಿಕ್ಕು ಕಿವಿವೊಕ್ಕು ಬಗೆಯಂ ।
ಜಕ್ಕುಲಿಸೆ ಲತಾಂಗಿ ವಂಶಮಂ ಬಾಜಿಸಿದಳ್ ॥೧೧೦

ಸರಸಿಜಸೂತ್ರಸಂಜನಿತಸಿಂಜಿನಿಯೇ ಮದಭೃಂಗಮಾಳಿಕಾ ।
ವಿರುತಿಯೆ ಕಲ್ತಕೊಳ್ಳಮಿವಳಂಗೊರಲೊಳ್ ನಿಮಗಿಂಪನೆಂದವಂ ॥
ಸ್ಮರನಿಱಕೆಯ್ವಿನಂ ರತಿಯ ಮೆಲ್ಲುಲಿ ನಿಬ್ಬರಮೆಂದೊನಲ್ವಿನಂ ।
ಸುರವಧುವಿರ್ಜನಾಂಬಿಕೆಯ ಚಿತ್ತಮನಿರ್ಕುಳಗೊಂಡು ಪಾಡುವರ್ ॥

ಪೊಂಪುಳವೋಗೆ ರಾಗವೆರಡುಂ ಕೆಲದೊಳ್ ಮದನಾನುರಾಗಮಂ ।
ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್ ಪಳಂಚಿ ಗೀ ॥
ತಂ ಪರಿಪುಷ್ಟಮಾಗೆ ದಿವಿಜಾಂಗನೆ ಪಾಡುವುದುಂ ಲತಾಂಗಿ ಮೆ ।
ಯ್ಯಂ ಪುಳಕಾಂಕುರಂ ಪುದಿಯೆ ಲೀಲೆಯಿನಿರ್ದಳನಲ್ಪತಲ್ಪದೊಳ್ ॥

ಅಂತಿರ್ಪುದುಂ ಕುಂಭಮಹಾರಾಜನುಪಚರಿತಗರ್ಭಾಧಾನಮಂಗ

೧. ವಧುವರ್. ಕ॥ ಗ॥ ೨. ನಿಳ್ಕುಳಿಗೊಂಡು ಪಾಡಿದರ್. ಕ॥
೩. ಗರ್ಭಾವದಾನ. ಗ॥

ಳವಿಧಾನಂ ನವೀನಚೀನವರಿಧಾನೋತ್ತರೀಯನುಂ ಮಣಿಮಯಾಭರಣಭೂಷಿತನುಂ ವಿಚಿತ್ರವೇತ್ರಧರಪುರಸ್ಸರನುಂ ಕತಿಪಯಾಂಗರಕ್ಷಕಪರಿವೃತನುಮಂತಃಪುರಪ್ರವೇಶಯೋಗ್ಯಪರಿಮಿತಪರಿಜನನುಮಾಗಿ ಸೆಜ್ಜೆವನೆಗೆ ಬಿಜಯಂಗೆಯ್ದು ಬೆಳ್ಪಸದನದ ಪೊಸದೇಸೆಯಿಂ ಕಪ್ಪುರದ ಲೆಪ್ಪದ ಪೆಣ್ಣನನುಕರಿಸಿ ಸಂಭ್ರಮದಿನಿದಿರೇೞ್ವ ನಲ್ಲಳ ನಗೆಮೊಗದಿನೊಸರ್ವ ಲಜ್ಜಾರಸದಿಂ ನಿಜಮನೋರಾಗಲತೆಯನಂಕುರಿತಂಮಾಡಿ ಪಾಲ್ಗಡಲ ಮಡುವಿನಂತಿರ್ದ ತಳ್ಪಮಂ ರಾಕಾಶಶಾಂಕನಂತಳಂಕರಿಸಿ ಚತುರಪರಿಹಾಸವಚನಚಂದ್ರಿಕೆಯಿಂ ದೇವಿಯ ಮನಃಕುಮುದಿನಿಯನಲರ್ಚಿ ರತ್ನವೇಳಾವಿಳಸಿತಕ್ಷೀರನೀರಾಕರದಂತೆ ಕಾಂತಾಸಮನ್ವಿತಂ ನಿರಂತರೋತ್ಸವಮನಪ್ಪುಕೆಯ್ದಿರೆ ॥೧೧೩

ತೇಂಕಿದುವೆಳಸುವ ಕಣ್ಮಲ[3]।
ರಿಂ ಕರೆಗಣ್ಮುವ ವಿಳಾಸರಸದೊಳ್ ತನುಗಳ್ ॥
ಸೋಂಕಿನೊಳುಬ್ಬರಿಸುವ ಪುಳ।
ಕಾಂಕುರದಿಂ ಕಠಿನವಾದುವಾದಂಪತಿಯಾ ॥೧೧೪

ಅಂತು ಸೊಕ್ಕಿವಂದು ॥೧೧೫

ಬೆಳಗಪ್ಪ ಜಾವದೊಳ್ ಸತಿ।
ವಿಳಾಸವತಿ ತೀರ್ಥನಾಥಜನ್ಮೋತ್ಸವಮಂ ॥
ಗಳಕಾರಣಮಂ ಸ್ವಪ್ನಾ।
ವಳಿಯಂ ಪದಿನಾಱುಮಂ ಪ್ರಭಾವತಿ ಕಂಡಳ್ ॥೧೧೬

ತದನಂತರಂ ॥೧೧೭

ಸಾರಸನಾದದಿಂದುಲಿದು ಚಂಚಳ! ಕಾಂಚನಜಾಳಮಾರ್ಗದಿಂ।

ವಿಧಾನನವೀನ. ಕ॥ ೨. ಮದಿದಿರೆೞ್ವ. ಗ॥ ೩. ಕಣ್ಣಲರಿಂ. ಕ॥

ಭೋರೆನೆ ಬಂದು ಸೋಂಕಿ ಸುಖನಿದ್ರೆಯನೆಬ್ಬಿಡಿರೆಂದು ಸನ್ನೆಯಿಂ ॥
ಬಾರಿಸುವಂತೆ ತೂಗೆ ತಲೆಯಂ ಸೊಡರ್ಗಳ್ ಸತಿಗಿಂ ಗೃಹಾಬ್ಜಿನೀ।
ಸ್ಮೇರಸಖಂ ಪ್ರಭಾತಪವನಂ ಪಡೆದತ್ತು ಸುಖಪ್ರಬೋಧಮಂ॥೧೧೮

ಅನ್ತುಪ್ಪವಡಿಸಿ ನಿತ್ಯನಿಯಮಂಗಳಂ ನಿರ್ವರ್ತಿಸಿ ತನ್ನ ಕಂಡ ಕನಸುಗಳನನುಕ್ರಮಂದಪ್ಪದೆ ನಿಜಮನೋವಲ್ಲಭಂಗಱಿಪೆ ॥೧೧೯

ಧವಳಸ್ತಂಬೇರಮಂ ಗೋಪತಿ ಹರಿ ಸಿರಿ ಪೂಮಾಲೆ ಪೂರ್ಣೇಂದುಬಿಂಬಂ। ರವಿ ಮೀನಂ ಕುಂಭಮಂಭೋರುಹವನಮಮೃತಾಂಭೋಧಿ ಸಿಂಹಾಸನಂ ದೇ ॥ ವವಿಮಾನಂ ನಾಗಸದ್ಮಂ ಸ್ಫುರಿತಮಣಿಗಣಂ ಪ್ರಜ್ವಳಜ್ವಾಳೆಯೆಂದಿಂ[2] । ತಿವನಾರ್ನಿನ್ನಂದದಿಂ ಸುಂದರಿ ಕನಸುಗಳಂ ಕಾಣ್ಬ ಸೈಪಿಂಗೆ ನೋಂತರ್ ॥೧೨೦

ನೀನಲ್ಲದರೀಕನಸಂ ।
ಮಾನಿನಿ ಕಂಡವರೆ ತೀರ್ಥಕರ ಜನನಿಯೆನಲ್ ॥
ನೀನೆ ದೊರೆವತ್ತೆಯೆನೆ ಧರ।
ಣೀನಾಥಂ ರಮಣಿಗಾಯ್ತು ಹರ್ಷೋತ್ಕರ್ಷಂ ॥೧೨೧

ಅಂತು ಸಂತೋಷಮನಪ್ಪುಕೆಯ್ದಿರ್ಪಿನಂ ವೈಶ್ರವಣಚರನಪ್ಪ ಅಪರಾಜಿತವಿಮಾನದಹಮಿಂದ್ರಂ ಚೈತ್ರಶುದ್ಧಪ್ರತಿಪದಶ್ವಿನೀನಕ್ಷತ್ರದೊಳ್ ॥೧೨೨

ಕಮಳದೆಸಳ್ಬೊರೆಯಿಂ[3] ನುಸು ।
ಳ್ದು ಮೃಣಾಳೀಗರ್ಭದೊಳಗೆ ನೆಲಸುವ ಬಾಳಾ ॥
ರ್ಕಮಯೂಖಮೆಂಬಿನಂ ಮುಖ।
ಕಮಳದಿನಾತ್ಮೀಯಗರ್ಭದೊಳ್ ನೆಲಸುವುದುಂ ॥೧೨೩

೧. ಕಲಿ. ಗ॥ ೨. ಜ್ವಾಳೆ. ಕ॥ ೩. ಸಳ್ಬೊರೆಯಂ. ಗ॥

ದೇವಿ ಕರೆಗಣ್ಮೆ ಪೊಣ್ಮುವ ।
ಲಾವಣ್ಯರಸಪ್ರವಾಹದೊಳಗೆಸೆದಳ್ ಪೊಂ ॥
ದಾವರೆಯ ಬಳ್ಳಿ ತೆಕ್ಕನೆ ।
ತೀವಿದ ತಿಳಿಗೊಳದ [೧]ನಡುವೆ ನಳನಳಿಸುವವೊಲ್ ॥೧೨೪

ಈಂಗಡಲೊಳಗೋಲಾಡುವ ।
ಮೀಂಗಳ ಪೊಣರಂತೆ ಸತಿಯ ಚಳನಯನಂಗಳ್ ॥
ತಿಂಗಳ ಮಱಿಯಂತೆ ಕಪೋ ।
ಳಂಗಳ್ ಮೊಗರಸದೊಳೇಂ ಮಸಂಗೊಳಿಸಿದುವೋ ॥೧೨೫

ಲಾವಣ್ಯರಸಾಬ್ಧಿಯ ರ ।
ತ್ನಾವಳಿಯೆನಿಸಿದುವು ತೊಟ್ಟ ತೊಡವಿನ ಮಣಿ ಮಾ ॥
ದೇವಿಯ ಕಡೆಗಣ್ಕೆದಱುವ ।
ಪೂವಲಿಯೆನಿಸಿದುವು ಕರ್ಣಪೂರದ [೨]ನೆಯ್ದಿಲ್ ॥೧೨೬

ಆದರಹಾಸಚಂದ್ರಿಕೆಯಿನೊಪ್ಪುವ ಕಾಂತೆಯ ವಕ್ತ್ರಕಾಂತಿ ಮ ।
ರ್ಯಾದೆಯನೇನುಮುಂ ಬಗೆಯದಂಡಲೆಯುತ್ತಿರೆ ಹೇಡಿವಟ್ಟು ಪಾ ॥
ಱಾವುದು ಚಂದ್ರಮಂಡಳಮದಲ್ಲದೊಡಾಲಮರಕ್ಕದೇಕೆ ಪ ।
ಕ್ಕಾದುದದೇಕೆ ಪ್ರತ್ತಡರ್ಪಡಿರ್ಪುದೇಕದಱೊಳ್ ಮೊಲಂ ಮೃಗಂ ॥

ಅಂತಾಶ್ಚರ್ಯವಾದ ಸೌಂದರ್ಯದೊಡನೆ ಗರ್ಭಂ ಬಳೆಯೆ ॥

[೩]ಮೊಲೆಗೆ ಮೊಗಕ್ಕೆ [೪]ಬಾಸೆಗೆ ವಳಿತ್ರಿತಯಕ್ಕೆ ತನೂದರಕ್ಕೆ ಕೋ ।
ಮಳತನುವಿಂಗೆ ಮುನ್ನಿನ ವಿಳಾಸಮೆ ಬೇಱೆ ವಿಕಾರವೇಷಮು ॥

೧. ನಳಿನ. ಕ॥ ೨. ನೆಯ್ದಲ್. ಕ॥ಗ॥ ೩. ಮೊಲೆಯ. ಕ॥ಗ॥
೪. ಬಾಸೆಯ. ಕ॥ಗ॥

ಗ್ಗಲಿಸುವ ಗರ್ಭಚಿಹ್ನಮಿವು ತೋಱಿವು ಶಾಂತಮನಂ ಜಿನಾರ್ಭಕಂ ।
ನೆಲಸಿರೆ ಗರ್ಭಪಂಕಜದೊಳಂಗನೆಗಂಗವಿಕಾರಮುಕ್ಕುಮೇ ॥೧೨೯

ಇನಕಿರಣಂ ಪೊರ್ದಿ ಸರೋ ।
ಜನಿಗುಷ್ಣಮನೀಯದಂತೆ ತೇಜೋನಿಳಯಂ ॥
ಜನನಿಯ ಗರ್ಭದೊಳಿರ್ದುಂ ।
ಜಿನಾರ್ಭಕಂ ಪಡೆದನಿಲ್ಲ ಪೀಡಾಲವಮಂ ॥೧೩೦

ಗುರುಭರಮಂ ಪಡೆಯದವೋಲ್ ।
ಪರಿಮಳಮತಿಬಹಳಮಾಗಿ ಮಂಜರಿಗೆ ಜಗ ॥
ದ್ಗುರು ಗರ್ಭದೊಳಿರ್ದುಂ ಗುರು ।
ಭರಖೇದಮನಿತ್ತನಿಲ್ಲ ಗರ್ಭಿಣಿಗಿನಿಸಂ ॥೧೩೧

ಅಂತಪೂರ್ವಮೆನಿಪ ಗರ್ಭದೊಳ್ ॥೧೩೨

ಪೂಸಿ ಮುಖೇಂದುವಂ ಸುರಭಿಚಂದನದಿಂ ವಳಿ ರತ್ನಕಾಂತಿಯಿಂ ।
ದೋಸರಿಪಂತು ಕಾಂಚಿಯನಮರ್ಚೆ ಮೃಗೋದ್ಭವದಿಂ ಕುಚಾಗ್ರ
ಮಂ ॥ ಬಾಸೆಯನಣ್ಕೆಗೆಯ್ದು ಜಿನಗರ್ಭದೊಳಾಸತಿಗಾಗದಿರ್ದುದಂ ।
ದೇಸೆಗೆ ಸೋಂಕುವಾಸೆಗೆ ನೃಪಂ ಪಡೆದಂ ನವಗರ್ಭಚಿಹ್ನಮಂ ॥

ಅಮರಸ್ತ್ರೀಯರ ಗೆಯ್ವ ತೊಟ್ಟುವೆಸನುಂ ಕೊಂಡಾಟಮುಂ ಭ
ಕ್ತಿಯಿಂ । ದಮರಾಧೀಶ್ವರನಟ್ಟುವಾಭರಣಮುಂ ವಸ್ತ್ರಂಗಳುಂ ಬೇ
ಱೆ ಕುಂ ॥ ಭಮಹಾರಾಜನ ಮಾಳ್ಪ ಮನ್ನಣೆಗಳುಂ ವ್ಯಾವೇಹಮಂ
ನಾಡೆ ಮಾ । ಡೆ ಮನೋರಾಗಮನಾಳ್ದದಾಸತಿಗೆ ಸೌಖ್ಯಾಗ್ರೇಸರಂ
ವಾಸರಂ ॥೧೩೪

೧. ತೋಱಿವೆ. ಕ॥ ೨. ದೊರ್ದಂ. ಕ॥ ೩. ಹಮುಂ.ಕ॥

ಅಂತು ನವಮಾಸಂ ಪರಿಪೂರ್ಣಮಾಗೆ ॥ ೧೩೫

ಕುಸುಮಾಸಾರಪುರಸ್ಸರಂ ಸುರಸರಿದ್ವೀಚೀನಟಂ ತೆಣ್ಣೆಲರ್ ।
ಕುಸಿಯುತ್ತುಂ ಬರೆ ಪೊತ್ತು ದೇವಪಟಹಪ್ರಧ್ವಾನಮುಂ ಮಾರ್ಗಶೀ ॥
ರ್ಷಸಿತೈಕಾದಶಿಯಂದಿನಶ್ವಿನಿಯೊಳಾಸ್ತ್ರೀರತ್ನಮಾಚಾರಶೀ ।
ಲಸಿರಃಪದ್ಮಿನಿ ಮಲ್ಲಿನಾಥಜಿನನಂ ಪೆತ್ತಳ್ ಜಗನ್ನಾಥನಂ ॥ ೧೩೬

ಜನನೀನಿರ್ಮಳಗರ್ಭಶುಕ್ತಿಯಿನಮೂಲ್ಯಂ ಮೌಕ್ತಿಕಂ ಪುಟ್ಟಿದ ।
ತ್ತೆನೆ ಸದ್ವೃತ್ತಮನಪ್ಪುಕೆಯ್ದು ಗುಣಮುಂ ಕೈಕೊಂಡು ದೋ
ಷಂಗಳೆ ॥ ಳ್ಳನಿತುಂ ಪೊರ್ದವೆನಿಪ್ಪ ಪೆಂಪೆಸೆಯೆ ನೇತ್ರಾನಂದರೂಪಂ
ಜಗ|ಜ್ಜನಚೂಡಾಮಣಿ ಪುಟ್ಟಿದಂ ನಿರುಪಮಂ ಸಾಹಿತ್ಯವಿದ್ಯಾಧರಂ ॥

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ತೀರ್ಥಕುಮಾರೋದಯವರ್ಣನಂ
ಏಕಾದಶಾಶ್ವಾಸಂ ಸಂಪೂರ್ಣಂ.

---

೧. ಸರಿತ್ಪದ್ಮಿನಿ. ಕ॥ ೨. ಗರ್ಭಾವತರಣವರ್ಣನಂ. ಕ॥

## —ದ್ವಾದಶಾಶ್ವಾಸಂ—

ಶ್ರೀಗೆ ನೆಲೆಯೆನಿಸಿ ವಿದ್ಯಾ।
ಶ್ರೀಗಾಶ್ರಯಮೆನಿಸಿ ಪರಮಪದಮಂ ಪಡೆವ॥
ದ್ಯೋಗದಿನೊಗೆದಂ ಧರೆಗನು।
ರಾಗಂ ಕೈಗಣ್ಮುವನ್ನಮಭಿನವಪಂಪಂ ॥೧

ಆಸಮಯದೊಳ್ ॥೨

(ಅಕ್ಕರವೃತ್ತಂ)

ಸಿರಿಯ ನೆಲೆಯಂತೆ ವಸುಧೆ ನೀರಜವಾಯ್ತು ತಿಳಿದುದೆಂದನುನ ಯಂಬಡೆದರಂತೆ। ಸರಸಿಜಾಕರಂ ದಕ್ಷಿಣಾವರ್ತಮಾಗೆಸೆದುದು ಶಿಖಿ ಪಾಂಚಜನ್ಯದಂತೆ। ಸುರಭಿಯಾಯ್ತುಲರಿಂದ್ರನ ಪಯದಂತೆ ನಭಮ ಪಘನವಾಯ್ತು ತನುವಿನಂತೆ। ಪರಮಜಿನನುದಯದೊಳಂತು ತಳೆ ದುದಪೂರ್ವವಿಭೂತಿಯಂ ಪಂಚಭೂತಂ ॥೩

ವಿವಿಧಲಯಂಗಳಂ ಕುಣಿವ ಗೊಂದಣವೆಕ್ಕಣಮಾಗಳಂತೆ ಕ।
ಟ್ಟುವ ಗುಡಿ ಪ್ರೊಯ್ವ ಬದ್ದವಣಮಿಕ್ಕುವ ಮುತ್ತಿನ ರಂಗವಲ್ಲಿ ಸೂ॥
ಸುವ ಪಟವಾಸಚೂರ್ಣವೊಡನುಣ್ಮುವ ಮಂಗಳಗೀತಿಗಳ್ ತೊಡ।
ರ್ಚುವ ಮಣಿತೋರಣಂ ಮೆಱೆದುವುತ್ಸವಮಂ ಜಿನಜನ್ಮಗೇಹದೊಳ್॥

ಪುರಲಕ್ಷ್ಮೀಕಾಂತೆ ಜನ್ಮೋತ್ಸವಸಮುದಿತಲೀಲಾಸ್ಯಮಂ ಲಾಸ್ಯ ಮಂ ಬಿ। ತ್ತರಿಸುತ್ತಿರ್ದಪ್ಪಳೀತೋರ್ಪುದೆ ಕರತಳವಿನ್ಯಾಸಮಂ

೩. ಪಯ- ಹಸು.

೧. ಗೊಂದಳ. ಗ॥ ೨. ನಾಗದಂತೆ. ಕ॥ ೩. ವೆ. ಕ॥

ಬಂದದಿಂದಂ । ಬರವಮಂ ನೇತ್ರಧ್ವಜಂ ಚುಂಬಿಸಿದುವಿವೆ ನವಾಳೋಕ ಭೇದಂಗಳೆಂಬಂ । ತಿರೆ ಸೌಧಾಗ್ರಂಗಳೊಳ್ ಮೊಳಸಿದುವು ಸಿತಚಂಚತ್ಪತಾಕಾಂಚಳಂಗಳ್ ॥೫

ಬಿಳಿಯ ಮುಗಿಲ್ಗಳ ರಜತಾ ।
ಚಳದೊಳ್ಪೊಳೆವಂತೆ ಧವಳಹಾರಂಗಳೊಳೇಂ ॥
ಪೊಳೆದುವೊ ನವೀನಚೀನಾಂ ।
ಚಳಚಂಚಳವಾಳಕೇತನವ್ರಜಯಂಗಳ್ ॥೬

ಶೃಂಗಾರರಸದಿನೋಕುಳ ।
ಯಂ ಗೃಹದೇವತೆಯುರಾಡುವಂತಾಗೆ ನಭೋ ॥
ರಂಗದೊಳೆಸೆದುವು ಪಚ್ಚೆಯ ।
ಮಂಗಳಕೇತನವಶಂಗಳಾಲೋಲಂಗಳ್ ॥೭

ಒದವಿ ಕವಿತರ್ಪ ಸುರಕುಸು ।
ಮದ ಸವಿಯಂ ಪದಪಿನಿಂದಮಿದಿರ್ಗೊಳ್ವಳಮಾ ॥
ಳೆ ದಳೆನಿಸಿ ನೀಳಕೇತನ ।
ಕದಂಬಮುಳ್ಳುಱಿದುವಾಗಳಂಬರತಳಮಂ ॥೮

ಸುರರಾಜಪುರಶ್ರೀಗಾ ।
ಪುರಲಕ್ಷ್ಮೀಕಾಂತೆ ಸೆಣಸಿ ಕಿಸುಗಣ್ಚಿದ ಕೇ ॥
ಕರಕಾಂತಿಯಂತೆ ನೇತ್ರಾಂ ।
ಬರಕೇತನಮಾಳೆ ತುಱುಗಿದುವು ಮನೆಮನೆಯೊಳ್ ॥೯

ದೇಸೆ ವಿಳಾಸಮಂ ಪಡೆಯೆ ಗೊಂದಳವೆಕ್ಕಣವಾಗಳಾನೃಪಾ ।
ವಾಸದೊಳಾಡಿದಳ್ತೆಸೆಯೆ ಪಾಣಿತಳಂ ಪಡೆವಂತೆ ಕುಂಕುಮ ॥

ಸ್ಥಾಸಕಮುಂ ಕುರುಳ್ಕೆಡಱುವಂತೆ ಕಪೋಳವಿ[೧]ನಪ್ರವಾಳಮುಂ ।
ಕೇಸಡಿ ಪಾಸುವಂತೆ ತಳಿರಂ ನಗೆ[೨]ಗಣ್ಣುಗುಳ್ವಂತೆ ನೆಯ್ದಿಲಂ ॥೧೦

ಉದಯಿಪುದುಂ ತ್ರಿಲೋಕತಿಳಕಂ ಗೃಹದೇವತೆಯರ್ ಪ್ರಸನ್ನವೇ । ಷದಿನೊಸೆದಾಡುವಂತೆ ಮಣಿಭಿತ್ತಿಗಳಂ ಮಣಿಕುಟ್ಟಿಮಂಗಳಂ ॥ ಪುದಿದು ಮನಕ್ಕೆ ವಿಸ್ಮಯಮನಿತ್ತುವು[೩] ನೃತ್ಯರಸಾಪ್ಲುತಪ್ರವಾ । ಹದೊಳವಗಾಹಮಿರ್ದ ಗಣಿಕಾಪ್ರಭೆಯುಂ ಪ್ರತಿಬಿಂಬಲಕ್ಷ್ಮಿಗಳ್ ॥೧೧

ದೆಸೆಬಿದ್ದಂ ಕುಣಿವಂಗನಾಜನದ ಕಾಂಚೀಘಂಟಿಕಾಘೋಷಮೊಂ ।
ದೆಸೆಯೊಳ್ ಮಂಗಳಗೀತಮೊಂದೆಸೆಯೊಳಾಶೀರ್ವಾದನಾದಂಗಳೊಂ ॥
ದೆಸೆಯೊಳ್ ಮಂಗಳಪಾಠಕಸ್ತವನ ಮಾಂಗಲ್ಯಾನಕಧ್ವಾನಮೊಂ ।
ದೆಸೆಯೊಳ್ ಘೂರ್ಣಿಸೆ ಪೂರ್ಣಮಾಯ್ತು ಜಿನಜನ್ಮೋತ್ಸಾಹಕೋಲಾಹಳಂ ॥೧೨

ಜಿನಜನ್ಮೋತ್ಸಾಹಮುಂ ಪೇೞ್ದುವು ಭವನಮರುನ್ಮಂದಿರವ್ಯಂತರಾಧೀ । ಶನಿವಾಸಜ್ಯೋತಿರಿಂದ್ರಾವಸಥದಿವಿಜಕಲ್ಪಂಗಳೊಳ್ ದಿವ್ಯಶಂಖ ॥ ಧ್ವನಿ ಭೇರೀನಾದಕಂಠೀರವರುತಿ ಮಣಿಘಂಟಾರವಂ ತಚ್ಚತುರ್ದೇ । ವನಿಕಾಯಂ ನಮ್ರಕಾಯಂ ಜಯಜಯರವಮುಕ್ತೋಷ್ಟಮಪ್ಪನ್ನಮಾಗಳ್ ॥೧೩

ಎಱಗಿದೊಡಾದುದೀದಿವಿಜರಾಜಪದಂ ಜಿನವಲ್ಲಭಂಗದಂ ।
ಮಱೆಯೆ ಕೃತಘ್ನವೃತ್ತಿ ದೊರೆಕೊಂಡಪುದೆಂದು ಮರುತ್ಕಿರೀಟಮಂ ॥
ದೆಱಗುವ ಮಾಳ್ಕೆಯಿಂ ದಿವಸದೆಂದೆಱಗಿರ್ದುವು ಕಂದುಗುಂ ಪೆಱ ।
ತೆಱದೊಡಿವೆಂಬವೊಲ್ ಸಹಜದಿಂ ಸುರಿತಂದುವು ಪುಷ್ಪವೃಷ್ಟಿಗಳ್ ॥

೧. ಸವ. ಗ॥ ೨. ಗಣ್ಮಗುಳ್ವಂತೆ. ಕ॥ ೩. ಯುಂ. ಕ॥ಗ॥

ದಿವಿಜರ ಸೂಸದೆ ಕೊಳ್ವ ಪ್ರಾಮುಖಿಗೆ ದೇವಪ್ರೋರ್ಯ್ಯದೋರಂತೆ ಪೊ ! ಣ್ಮವ ಭೇರೀನಿನದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟ ತೂ || ಗುವಪ್ರೋಲ್ತನ್ನ ಕಿರೀಟಮಂ ನಡುಗೆ ತನ್ನಿರ್ದಾಸನಂ ವಾಸ ವಂ | ಗವಧಿಜ್ಞಾನಮನಂತರಂ ತಿಳಿಪಿದತ್ತೆತ್ತಂ ಜಿನೋತ್ಪತ್ತಿಯಂ ||

ಪತೊತ್ತಂಭತ್ತನೆಯ ಜಿನೋ |
ತ್ಪತ್ತಿಯನಱಿದಿರ್ದು ಮಣಿಮಯಾಸನದಿಂ ದೇ ||
ವ್ರೋತ್ತಂಸಂ ಕರಕಮಳಮು |
ನುತ್ತಂಸುಮಾಡಿ ಪಲವು ಸೂಳ್ ಪೊಡಮಟ್ಟಂ ||೧೬

ಅಂತು ಪೊಡಮಟ್ಟು ಜನ್ಮಾಭಿಷವಣಕಲ್ಯಾಣೋತ್ಸುಕಚಿತ್ತನಪ್ಪುದುಂ ||೧೭

ಭವನವನಜ್ಯೋತಿಷ್ಕ |
ಲ್ಪವಾಸದಮರಾಧಿನಾಯಕಮರ್ಣಿಮುಕುಟ ||
ಚ್ಛವಿ ಭುವನವಿವರಮಂ ತೀ |
ವ್ರವನ್ನವೆಟ್ಟಂದರಂದು ಮನದಿಂ ಮುನ್ನಂ ||೧೮

ಅವರೊಡನೆ ಸಾಮಾನಿಕತ್ರಯಸ್ತ್ರಿಂಶದಾತ್ಮರಕ್ಷಲೋಕಪಾಳಕಪ್ರಕೀರ್ಣಕಾಭಿಯೋಗ್ಯಕಿಲ್ಬಿಷಿತಪ್ರಮುಖಸಪ್ತಸೇನೆ ಸುದಣಿಸೆ ವಂದು ನಿಂದರನಂತರಂ ||೧೯

ಗಗನಂ ತೆಕ್ಕನೆ ತೀವೆ ಕಾಯಬಲದಿಂ ಶೇಷೋರಗಶ್ರೇಣಿ ಮೇ |
ಗೊಗೆದಂತದ್ಭುತಮಾಗೆ ತನ್ನ ಪಲವುಂ ಕೈಗಳ್ ಮಹಾಮೇಘದೊ ||
ಡ್ಡುಗಳೆಂಬಂತಿರೆ ಕರ್ಣತಾಳವಿಸರಂ ಕೋಟ್ಕೈಳ್ ಜಯಶ್ರೀವಿಳಾ |
ಸಗೃಹಸ್ತಂಭಶತಂಗಳಂತೊದವೆ ಬಂದತ್ತಭ್ರಮೂವಲ್ಲಭಂ ||೨೦

೧. ಸ್ಥಾಘಾಗಕೆ. ಗ||   ೨. ಕೋಡ್ಗಳ್. ಗ||

ದಿವಿಜೇಂದ್ರೇಭಕ್ಕೆ ಮೂವತ್ತೆರಡೆ ಮೊಗಮವೋರೊಂದಱೊಳ್ ಕೋಡ್ಕಳೆಂಟೆಂ । ಟವಱೊಳ್ ಚೆಲ್ವಾದುವೋರೊಂದಱಗೆ* ಕೊಳನವಱೊಳ್ ಪದ್ಮಿನೀಕಂದವೋರೊಂ ॥ ದವಱೊಳ್ ಪುಷ್ಪಾಳಿ ಮೂವತ್ತೆರಡವಱೆಸಱೊಂದಕ್ಕೆ ಮೂವತ್ತೆರಲ್ಕು । ಳ್ಳುವು ಮೂವತ್ತಿರ್ವರೊಂದೊಂದೆಸಲ್ಗಳೊಳಮರಸ್ತ್ರೀಯರಾಡುತ್ತುಮಿರ್ಪರ್ ॥ ೨೧

ಅಂತಗುರ್ವುವಡೆದು ವಿಗುರ್ವಿಸಿದ ದಿವಿಜಗಜಮನೇಱಿ ॥ ೨೨

ತನುಸೋಂಕಿಂ ಶಚಿ ಪಾರಿಹಾರ್ಯವಿಸರವ್ಯಾಹಾರದಿಂ ಪಾಳವೀ ।
ಜನದಿಂ ವೀಜನಮಂಗಹಾರಪದಸಂಚಾರಂಗಳಿಂ ನರ್ತಕೀ ॥
ಜನವೆಕ್ಕೆಕ್ಕೆಯಿನೆಲ್ಕಱಿಂ ಪಡೆಯೆ ಸೌಧರ್ಮೇಂದ್ರನುದ್ಬ್ಬಹುದಂ ।
ಡನಿಶಾತಾಂಕುಶನಿರ್ದನದ್ಭುತಮೆನಿಪ್ಪೈರಾವತಸ್ಕಂಧದೊಳ್ ॥ ೨೩

ಅಂತಿರ್ದು ॥ ೨೪

ಪಲವುಂ ರತ್ನಾತಪತ್ರಂ ಪುದಿಯೆ ಚಮರಜಶ್ರೇಣಿ ತೆಱೆವೊಯ್ಯೆ ಚಿತ್ರಾಂ । ಚಳಚಂಚತ್ಕೇತನಂ ಕಣ್ಗೊಳಿಸೆ ವಿವಿಧತೂರ್ಯಸ್ವನಂ ಪೊಣ್ಮೆ ತನ್ನ ॥ ಕೆಲದೊಳ್ ನಾನಾಮರೇಂದ್ರಸೋಗಯಿಸೆ ಗಗನಂ ಸಾಲದೆಂಬನ್ನಮೇಱುಂ । ಬಲವೇಱುಂ ವಾರ್ಧಿ ಬರ್ಪಂತೊಡವರೆ ನಡೆಗೊಂಡಂ ಶಚೀಜೀವಿತೇಶಂ ॥ ೨೫

ಅಂತು ಚತುರ್ನಿಕಾಯಾಮರೇಂದ್ರಪುರಸ್ಸರಂ ಸೌಧರ್ಮೇಂದ್ರಂ ತಳರ್ವುದುಂ ॥ ೨೬

ಎಳನೇಸಱ ಬಳಗಂಗಳ ।
ಬೆಳಗುಗಳೊಂದಾಗಿ ಗಗನಮಂ ಬೆಳಗುವವೊಲ್ ॥
ಬೆಳಗಿದುವು ದೇವಕೋಟಿಯ ।
ತಳತಳಪ ಕಿರೀಟಕೋಟಿಮಣಿಕಿರಣಂಗಳ್ ॥ ೨೭

ಉಪಮಾತೀತಂ ವಿಳಾಸು ತಮಗಮರ್ದಿ*ರೆ ದೇವೀಜನಂ ಸುತ್ತಿ ದೇವಾ । ಧಿಪನಂ ಬರ್ಪಲ್ಲಿ ತಾರಾಪಥದೊಳವರ ಮಾಣಿಕ್ಯಭೂಷಾಂ ಶುಜಾಳಂ ॥ ಚಪಳಾಪಾಂಗಪ್ರಭಾಮಂಜರಿ ಚಳದಳನೀಕುಂತಳಚ್ಛಾ ಯೆ ಬಾಳಾ । ತಪಮುಂ ಬೆಳ್ದಿಂಗಳುಂ ಕಟ್ಟಲೆಯುವೊಡನೆ ಮೆಯ್ದೋ ಱುವಂತಾದುವಾಗಳ್ ॥ ೨೪

ಅಮರಸ್ತ್ರೀಯರ ವಕ್ತ್ರದಿಂ ಶಶಿಮಯಂ ಧಮ್ಮಿಲ್ಲದಿಂ ಭೃಂಗಜಾ । ಳಮಯಂ ಲೋಚನದಿಂ ನವೋತ್ಪಳಮಯಂ ಭ್ರೂಲೇಖೆ ಯಿಂದಿಕ್ಷುಚಾ ॥ ಪಮಯಂ ಕೆಂದಳದಿಂ ಸರೋರುಹಮಯಂ ವಕ್ಷೋಜದಿಂ ಚಕ್ರವಾ । ಕಮಯಂ ವ್ಯೋಮಮೆನಲ್ ಸಮರ್ಪಿಸಿದುದಾದೇವಾಗಮಂ ರಾಗಮಂ ॥ ೨೯

ತೊನೆಯೆ ಕುರುಳ್ ಕದಕ್ಕಡಿಸೆ ತುಂಗಕುಚಂ ತೆರೆಸುತ್ತಿ ಲೋಳಲೋ । ಚನರುಚಿ ಜೋಲೆ ಮೇಲುದು ಸಡಿಲ್ತಿರೆ ನೂಲ್ ನಿಱಿ ಸೂಸೆ ಶಕ್ರಲೋ ॥ ಚನಮನಿತುಂ ಕೃತಾರ್ಥಮೆನೆ ಸಂಗಡದಿಂಗೆಡೆವಚ್ಚು ರಾಗಮ[3] । ರ್ಚಿನಮೆನೆ (?) ಬಾನ ಮೇಲೆ ಬಯಲಂಗಣಮಾಡಿದುದಪ್ಸರೋಗಣಂ ॥ ೩೦

ನಗೆಮೊಗಮಲ್ಲವು ಶೀತಾಂ ।
ಶುಗಳೆನೆ ತುಡುಗೆಗಳ ತೋಱುಮುತ್ತಲ್ಲವು ತಾ ॥
ರಗೆಗಳೆನೆ ನಯನಚಂದ್ರಿಕೆ ।
ದಿಗಂತಮಂ ಬಳಸೆ ಬಂದರಮರಾಂಗನೆಯರ್ ॥ ೩೧

ಕಳವೀಣಾವೇಣುನಾದಂ ಪುದಿಯೆ ಗಗನಮಂ ದೇವಿಯರ್ ವಿಭ್ರಮಂ ಕೆ । ಣ್ಗೊಳೆ ದಿವ್ಯಾಮೋದಮಾಶಾವಳಯಮನಿತುಮಂ ತೀವೆ

೧. ಕತ್ತಲೆ, ಗ ॥ ೨. ದುದಾಗಳ್, ಕ ॥ ೩. ಮರ್ಬಿನಮೆನೆ, ಕ ॥

ದೇವಾಂಗವಸ್ತ್ರಂ ॥ ಗಳ ಬಣ್ಣಂ ವ್ಯೋಮಮುಮಂ ಚಿತ್ರಿಸೆ ಮಣಿಮ
ಯಭೂಷಾಂಶುವಿಂದಂ ನಭೋಮಮಂ । ಡಳಮೆಲ್ಲಂ ಶಕ್ರಚಾಪಂಗಳ
ಬಳಗದೆ ಕೇರ್ಗಟ್ಟಿದಂತಾಗೆ ಬಂದರ್ ॥ ೩೦

ಅಂತು ಮಹಾಮಹಿಮೆಯಿಂ ಸೌಧರ್ಮೇಂದ್ರಂ ಪವನಪಥದಿಂ ಮಿಥಿ
ಳಾಪುರಕ್ಕವತರಿಸುವುದುಂ ॥ ೩೧

ನಂದನಮಿಂತು ಸುಂದರಮೆ ಪೇಱೆನುತುಂ ಸುರಸೇನೆ ಲೋಚನಾ
ನಂದಮನಾಪುರೋಪವನದೊಳ್ಪಡೆಯುತ್ತಿರೆ ಮದ್ವಿಮಾನಮೀ ।
ಮಂದಿರದಂತು ಕಣ್ಗೊಳಿಸವೆಂದು ನಿರೀಕ್ಷಿಸುತುಂ ಸುರಾಧಿಪರ್ ।
ಬಂದಿರೆ ತದ್ಗೃಹಾಂಗಣದೊಳೀಕ್ಷಣಮಂ ಸೆಱೆಗೆಯ್ದುದಾ ಕ್ಷಣಂ ॥

ಆಗಳಮರಪತಿಯ ಬೆಸದಿಂ ಶಚೀಮಹಾದೇವಿ ಕತಿಪಯಪರಿವಾರ
ದೇವೀಪರೀತೆಯಾಗಿ ॥ ೩೪

ಪುಗುತಂದಳ್ ಪೆರ್ದಡುಗೆಯ ।
ಸೊಗಯಿಪ ಮಾಣಿಕದ ಪೊಳೆಪು ಬಾಳಾತಪಮಂ ॥
ನಗುವಿನೆಗಂ ದಿವಸಶ್ರೀ ।
ಪುಗುತರ್ಪವೊಲಾಪ್ರಸೂತಿಕಾಮಂದಿರಮಂ ॥ ೩೫

ಅಂತು ಪೊಕ್ಕು ತನ್ನಿಕೇತನಮಂ ನಿದ್ರಾಮುದ್ರಿತಂಮಾಡಿ ॥ ೩೬

ಆಜಿನರಾಜನಂಬಿಕೆಯುಮಂ ಜಿನರಾಜನುಮಂ ಪರೀತದೇ ।
ವೀಜನಮೇಖಳಾಕ್ವಣಿತದಿಂ ಪರಸುತ್ತಮನರ್ಘಭೂಷಣಂ ॥
ರಾಜಿಸೆ ತನ್ನ ಚಂಪಕತನುಚ್ಛವಿಯಿಂ ಬಲಗೊಂಡಳಂದು ನೀ ।
ರಾಜನದೀಪಮಾಳಿಕೆಯವೋಲ್ ಶಚಿ ನಿರ್ಭರಮಪ್ಪ ಭಕ್ತಿಯಿಂ ॥ ೩೮

೧. ವೇಗದಿಂ. ಕ॥ ೨. ಸಾಂದರ. ಕ॥ ೩. ವಾಕ್ಷಣಂ. ಕ॥ಗ॥ ೪. ಮುದ್ರಿತಮಂ. ಕ॥

ಅಂತು ಮೂಱುಸೂೞ್ ಬಲಗೊಂಡು ಮನದೆಱಕದಿನೆಱಗಿ ಕಾಂಚನ ಮಂಚದೊಳ್ ಮಾಯಾಶಿಶುವನಿರಿಸಿ ॥೩೯

ಉದಯಾಚಳಮೇಖಳೆ ತಾ ।
ಳ್ದಿದವೋಲುದಿತೇಂದುಬಿಂಬಮಂ ಶಿಶುವಂ ತಾ ॥
ಳ್ದಿದಳಿಂದ್ರಾಣಿ ಮನೋರಾ ।
ಗದ ಪೆರ್ಚಿಂ[1] ಪೆರ್ಚೆ ಪುಳಕಕಳಿಕಾಜಾಳಂ ॥೪೦

ಅಂತು ನೆಲೆವೆರ್ಚಿದ ರಾಗರಸತರಂಗಿಣಿಯ ತೆರೆಯ ತಾಮುರ್ಬಟ್ಟೆ ನುಲಿಪವೆನಿಸುವಾಶೀರ್ವಾದವೊದವೆ[2] ರಾಜಸದನಮಂ ಪೊಱಮಟ್ಟು ।

ಜಂಗಮಲತೆಯೊಳ್ಮೆಯ್ಗೞ್ ।
ದಿಂಗೊರಲಂ ಮೆಱೆವ ಭೃಂಗಮಾಲೆಯ ವೋಲ್[3] ದೇ ।
ವಾಂಗನೆಯರ್ಪಾಡುವುದುಂ ।
ಮಂಗಳಮಂ ಮಂದಗಮನದಿಂ ಶಚಿ ಬಂದಳ್ ॥೪೨

ಅಂತು ಬಂದು ॥೪೩

ತೊಲಗುವಿನಮಂಚಳಂ ನೆಲೆ ।
ವೊಲೆಯೊತ್ತಿಂ ತೋಳ ವೊದಲ ನುಣ್ಬೊಗರಿನಿಸುಂ ॥
ತಲೆದೋಱುವಿನಂ ವಳಗಳ್ ।
ತಲೆಗರೆವಿನಮುಮರಿ ನೀಡಿದಳ್ ಬಾಳಕನಂ ॥೪೪

ಆಗಳ್ ॥೪೫

ದೇವೇಂದ್ರನುವೊಡನೆ ಶಚೀ ।
ದೇವಿಗೆ ನೀಡಿದ ಕರಂಗಳಂಗದಮಣಿಭೂ ।
ಷಾವಳಿಯಿಂ ಪೋಲ್ತುವು ಶೋ ।

೧. ಪೆರ್ಚಿನ. ಕ॥ ೨. ನುಲಿಪುವೆನಿ. ಕ॥ ೩. ಮಾಲೆವೊಲೇಂ. ಕ॥

ಭಾವಹವುಂ ಭೂಷಣಾಂಗತರುಶಾಖೆಗಳಂ ॥೪೬

ಅಂತು ನೀಡುವುದುಂ ೪೭

ಚಿಂತಿತಫಳದಾಯಕವುಂ ।
ಚಿಂತಾಮಣಿಯುಂ ಕುಳಾಧಿದೇವತೆ ತಂದೀ ॥
ವಂತೆ ಶುಚಿಸ್ವಾಂತೆ ಶಚೀ ।
ಕಾಂತೆ ಜಿನಾರ್ಭಕನನಿತ್ತಳಿಂದ್ರನ ಕೈಯೊಳ್ ॥೪೮

ಅಂತೀವುದುಂ ॥೪೯

ಪರಮಪ್ರೀತಿಯಿನತಿನಿ ।
ರ್ಭರಭಕ್ತಿಯಿನಾಜಿನಾರ್ಭಕಕ್ರಮಯುಗವುಂ ॥
ಶಿರದೊಳ್ತಾಳ್ದ ಶಚೀಪತಿ ।
ಕಿರೀಟಮಿತ್ತತ್ತು ಪಾದ್ಯಮಂ ನಿಜರುಚಿಯಿಂ ॥೫೦

ಅಂತು ವಿನಮಿತಮಸ್ತಕನಾಗಿ ಸೌಧರ್ಮೇಂದ್ರಂ ದಿವ್ಯವಸನಾಳಂಕೃತಂ ನಿಜೋತ್ಸಂಗದೊಳ್ಕುಳ್ಳಿರಿಸೆ ॥೫೧

ಇರೆ ಪರ್ಯಂಕದೊಳರ್ಭಕಂ ತರುಣತಿಗ್ಮಾಂಶುಪ್ರಭಂ ಪ್ರೀತಿಯಿಂ । ಪುರುಹೂತಂ ನಡೆ ನೋಡೆ[1] ಲೋಚನಸಹಸ್ರಚ್ಛಾಯೆ ಸರ್ವಾಂಗದೊ ॥ ಳ್ಪರಭಾಗಂಬಡೆದೊಪ್ಪೆ ದೇಹರುಚಿಯಿಂ ನಿಶ್ರೇಯಶಶ್ರೀಸ್ವಯಂ । ವರಹೇಮಾಂಬುಜಮಾಳೆಯಂತೆ ಪಡೆದತ್ತಾನಂದಸಂದೋಹಮಂ ॥೫೨

ಆಪ್ರಸ್ತಾವದೋಳ್ ॥೫೩

ಮದಮಾತಂಗಾಧಿರೂಢಂ ನಿಜಮಣಿಮಕುಟಚ್ಛಾಯೆಯುಂ ಮುಪ್ಪಿಕಾರ । ತ್ನದನಾನಾವರ್ಣಮುಂ ಮಂಡಳಿಸಿ[2] ಪಡೆಯೆ ಬೇಱೊಂದು

೧. ನೋಡಿ. ಗ॥ ೨. ಮಂಡಳಿಸೆ. ಗ॥

ಚಿತಾ್ರತಪತಾ್ರ । ಸ್ಪದಮಂ ಪೂರ್ಣೇಂದು ಬೇಱೊಂದವತರಿಸಿದುದು ಬನ್ನೆಗಂ ಪೆರ್ಚಿದುತ್ತಾ । ಹದಿನೀಶಾನೇಂದ್ರನಾಗಳ್ ಜಿನಶಿಶುಗೆ ಸಿತ ಚ್ಛತ್ರಮಂ ತಾಳ್ದಿ ನಿಂದಂ ॥೫೪

ಇಂದ್ರಕುಜದ್ವಯಂಗಳೆಳಗೊಂಬಿನ ಪೂಗುಡಿ ತುಂಗತಾರಶೈ ।
ಳೇಂದ್ರವಿಶಾಳಶೋಣಮಣಿಚೂಳಿಕೆಯೊಳ್ಪೊಳೆವಂತೆ ರುಂದ್ರನಾ ।
ಗೇಂದ್ರದ ಮೇಲೆ ಕಣ್ಗೆಸೆವ ತೀರ್ಥಕರಂಗೆ ಸನತ್ಕುಮಾರಮಾ ।
ಹೇಂದ್ರಕರೋಚ್ಚಳದ್ಧವಳಚಾಮರಮೇಂ ರಮಣೀಯಮಾದುವೋ ॥

ಅಮರೀಮಂಗಳಗೀತದೊಳ್ಪೊದಿದ ವೀಣಾವೇಣುನಾದಂಗಳಂ । ದಮರ್ದಂ ಸಿಂಪಿಸುವಂತೆ ನರ್ತಿಪ ಸುರಸ್ತ್ರೀಸಸ್ಮಿತಾಪಾಂಗದಿಂ ॥ ಕುಮುದಂಗಳ್ ನೆಲೆವೆರ್ಚುವಂತೆಸೆಯೆ ಸೌಧರ್ಮೇಂದ್ರನಿಂದ್ರಾಜ ಳೇಂ । ದ್ರಮುಖಂ ನೂಂಕಿದನದ್ಭುತಕ್ಕೆ ಮೊಗಮಿತ್ತೈರಾವತೇ ಭೇಂದ್ರಮಂ ॥೫೬

ಅಂತು ನೂಂಕುವುದುಂ ॥೫೭

ಮೊಗಮಿಕ್ಕಲ್ ಪೆಱಮಾವುದೊಂದು ಮೊಗದೊಡ್ಡಿಂದೆನ್ನನಾಂಪ ಗ್ಗದಾ । ನೆಗಳಲ್ಲೆನ್ನಳವಂ ಶಚೀಪತಿಗೆ ತೋರ್ಪೆಂ ಪಾರ್ವೆನಳ್ಕಾಡು ವ ॥ ನ್ನೆಗಮೀಮೇರುನಗೇಂದ್ರದೊಳ್ ಭರದಿನೆಂಬಂತಾಗೆ ಘಂಟಾರ ವಂ । ನೆಗಳ್ವನ್ನಂ ಮಗುಳ್ದತ್ತು ಮಂದರನಗೇಂದ್ರಕ್ಕಂದ್ರನೈರಾ ವತಂ ॥೫೮

ಅಂತು ಪುರಮಂ ಪೊಱಮಟ್ಟು ॥೫೯

ಗೋತ್ರನಗಂ ವಿಕಸಿತಶತ ।
ಪತ್ರವನಂಬೆರಸು ನೆಗೆವ ಪೋಲ್ ನೆಗೆದತ್ತು ॥

ಚಿತ್ರಗಜೇಂದ್ರಂ ಚಿತ್ರಿಸೆ ।
ಸುತ್ರಾಮಸಹಸ್ರಲೋಚನಪ್ರಭೆ ನಭಮಂ ॥೬೦
ಇವು ರಾಹುಮಂಡಳಂ ಕವಿ ।
ದುವೆಂದು ಚಂದ್ರಾರ್ಕಮಂಡಳಂ ನಡುಗುವಿನಂ ।
ದಿವಿಜವಿ[೧]ಮಾನಂಗಳ್ ನೆಗೆ ।
ದುವು ಗಗನಕ್ಕಿಂದ್ರನೀಳರತ್ನಮಯಂಗಳ್ ॥೬೧
ನಳನೀಲಲತೆಯಂ ತಾಳ್ದಿದ ।
ತಿಳಿಗೊಳದಂತಾಗೆ ದೇವಕಾಂತಾಕಾಂತಂ ॥
ಪಳಕಿನ ವಿಮಾನಮಂಬರ ।
ತಳಕ್ಕೆ ಪಾಱಿದುವು ಕೇತುಮತ್ಸ್ಯಶತಂಗಳ್ ॥೬೨
ಸಂದಣಿಸಿ ನೆಗೆದ ವಿದ್ಯಾ ।
ತ್ಸುಂದರಿಯರ ತೆಕ್ಕೆಗೊಂಡ ಸೋರ್ಮುಡಿ ನಭದೊಳ್ ॥
[೨]ಮಂದೈಸೆ ನೆಗೆದು ಸೋಗೆಗ ।
ಳಂದಮನೊದವಿಸಿ[೩]ದರೀಕ್ಷಣಾನಂದನಮಂ ॥೬೩
ಮಣಿಘಂಟಾರವದಿಂ ತಿಂ ।
ತಿಣಿಯೆನೆ ದೆಸೆ ಕೇತುಮಾಳೆಯಿಂ ಗಗನಂ ಸಂ ।
ದಣಿಯೆನೆ ಪೋಗೊಗೆದುವು ಸುರ ।
ಗಣಿಕಾಸಂತಾನಲಲಿತಯಾನವಿಮಾನಂ ॥೬೪

ಆಸಮಯದೊಳ್ ಚಮರವೈರೋಚನಪ್ರಮುಖಭವ[೪]ನಾಮರರುಂ ಸತ್ಪುರುಷಮಹಾಪುರುಷಪ್ರಮುಖವ್ಯಂತರಾಮರರುಂ ಚಂದ್ರಾದಿತ್ಯ

೧. ವಿಮಾನಂ ನೆಗೆ । ದುವು ಗಗನಕ್ಕೆನಲಿಂ. ಕ॥ ೨. ಮಂದಯಿಸೆ. ಕ॥
೩. ದುವೀಕ್ಷ. ಕ॥ ೪. ನಾಮರರ ಸಂಸತ್ಪುರುಷರ್ ಮಹಾ. ಕ॥

ಪ್ರಮುಖಜ್ಯೋತಿರಮರರುಂ ಸೌಧರ್ಮೇಶಾನಸನತ್ಕುಮಾರಮಾಹೇಂ
ದ್ರಪ್ರಮುಖಕಲ್ಪಾಮರರುಂ ನಿಜನಿಜಸಪ್ತಾನೀಕಿನೀಸಮೇತರ್ ಗಗ
ನತಳಮನಳಂಕರಿಸುವುದುಮನಂತರಂ ॥೬೫

ಸುರವನಿತಾವಿಳಾಸಗಮನಂ ಸುರಸುಂದರಮಂದಯಾನಮಂ ।
ಬರದೊಳುಪಾಶ್ರಯಂಬಡೆಯದೆಂದು ಮನಂದರೆ ಶಕ್ರವಿಕ್ರಿಯಾ ।
ವಿರಚಿತಚಂದ್ರಕಾಂತವಿಪುಳೋಪಳವೀಧಿ ನಭೋವಿಭಾಗದೊಳ್ ।
ಸುರನದಿ ಜೋಡೆಂದು ಪರಿವಂತೆವೊಲಾಯ್ತು ಸುರಾಚಳಂಬರಂ ॥

ಆಪಳಕಿನ ವೀಧಿಯ ವ್ರಾ ।
ವಾರ್ಪರದೊಳ್ ಮೂಱು ಮೂಱು ಹರಿನೀಳಶಿಲಾ ॥
ಸೋಪಾನಂ ನಿಮಿರ್ದುವು ದೇ ।
ವಾಪಗೆಯಂ ಬಳಸಿ ಪರಿವ ಯಮುನಾನದಿವೋಲ್ ॥೬೭

ಅಲ್ಲಿ ॥೬೮

ಬಂದೊಡ್ಡೊಂದೊಡ್ಡಾಗಿರೆ ।
ಬಂದುವು ಸಪ್ತಾಂಗಮವಱ ಮೊದಲೊಡ್ಡುಗಳೊಂ ॥
ದೊಂದೆ ಚತುಷ್ಷಷ್ಟಿಸಹ ।
ಸ್ರಂ ದುರ್ಧರಮುತ್ತರೋತ್ತರಂ ದ್ವಿಗುಣಮೆನಲ್ ॥೬೯

ಆಗಳ್ ॥೭೦

ಅವಿರಳಮಾಗಿ ಕಟ್ಟಲೆಯ ಪಿಂಡುಗಳೆಂಬಿನಮೊಡ್ಡುಗಟ್ಟಿ ಬಂ ।
ದುವು ರವಿರಾಜಿಗಳ್ ಬೆವಱ ಬೆಂಗುಡೆ ಹೇಮಕವರ್ದಕಂದರಂ ।
ಪವನಜವಂ ವಿಘೂರ್ಣಿಸೆ ವಿಷಾಣಪರಸ್ಪರಘಾತಘೋಷದಿಂ ।
ಭುವನಪಥಂ ಲುಲಾಯಬಲಮದ್ಭುತಕಾಯಬಲಂ ಮಹಾಬಲಂ ॥೭೧

ಬಿಡುತರೆ ಲೋಳೆ ಪೊಗುಡಿಗಳಂಬರಮಂ ಪುದಿದಂತೆ ಹೇಱುತ ।

ಕ್ಕಡೆಕಿಱಿದಾಗೆ ದಿಗ್ವಿತತಿ ಘೋಣ[೧]ಸಮೀರಣಘೂರ್ಣಿತಾನನಂ ।
ನುಡಿಯಿಸುತುಂ ಮಹಾಜವನಿವಾರಣದುಷ್ಕ್ರಳದಿಂ ಖಲೀನಮಂ ।
ನಡೆದುದು ದೇವವಾಹಿನಿಯ ತುಂಗತರಂಗಮೆನಲ್ ತುರಂಗಮಂ ॥೨೨

ತೀವಿದ ಕಯ್ದು ತೋಳ್ವಲದ ಮೆಯ್ಸಿರಿಯಂತಿರೆ ಚಕ್ರನೇಮಿಭಾ ।
ರಾವನತಂ ನಭಂ ತೆಱಿವಂತಿರೆ ಚೀತ್ಕರಣಂ ಸುರೇಂದ್ರನಾ ।
ಜ್ಞಾವರದಾವಿಚಿತ್ರಮಣಿಪಂಜರದಂತಿರೆ ಬಂದುದುತ್ಪತಾ ।
ಕಾವಳಿಚುಂಬಿತಾಂಬುದಪಥಂ ಸುರಸೈನ್ಯಮನೋರಥಂ ರಥಂ ॥೨೩

ಮಣಿಯೋಱಿಂಗಡೆಗೊಟ್ಟ ಕೀರ್ತಿಮುಖಹೇಮಶ್ಯಾಮದಿಂ ಮಿಂಚಿ
ನೊ । ಳ್ಪಣಿದಂತಾಗೆ ದಿಶಾಳಿ ದಾನಜಳಧಾರಾನಿರ್ಝರಂ ದಂತದಾ ।
ರುಣಶೃಂಗಂ ದೃಶಕುಂಭಕೂಟವಿಕಟಂ ಕರ್ಚಿಟ್ಟು[೨] ಮುಚ್ಚಿರ್ದವೋ ।
ಲೆಣಿಸಲ್ ಬಾರದೆ ಬಂದುದಪ್ರತಿಹತಂ ಮತ್ತೇಭಸೇನಾಶತಂ ॥೨೪

ಪತ್ತಿಶತಂಗಳ್ ಕದನೋ ।
ತ್ಪತ್ತಿಯ ಮಾತೆತ್ತಲೆಂಬಿನಂ ಗಜಘಟೆಯಂ ।
ಪತ್ತಿ ನಡೆತಂದುವೆನೆ ಸಂ ।
ಪತ್ತಿಗೆ ಕುಳಭವನಮೊಂದೆ ದಲ್ ಜಿನಸವನಂ ॥೨೫

ರಸಗೀತಕ್ಕೆಡೆಗೊಟ್ಟ ತಾಳಲಯದೊಳ್ ನೇರ್ಪಟ್ಟಳಂಕಾರದೊ
ಳ್ । ಪಸರಂಬೆತ್ತುಪವಾದ್ಯದೊಳ್[೩]ನೆಱಿದು ಸಂಯೋಗಪ್ರಚಾರಂ ವಿರಾ ।
ಜಿಸೆ ನಾನಾವಿಧವಾದ್ಯಮಂ ಗತಿಗಳಂ ಮಾರ್ಗಂಗಳಂ ಮೆಚ್ಚೆ ಬಾ ।
ಜಿಸುತುಂ ಬಂದುದನಾಕುಳಂ ಬಳಸಿಯುಂ ಗಂಧರ್ವಸೇನಾಕುಳಂ ॥

ಕುಡುಮಿಂಚಂ ಪಲವಂ ವಿಗುರ್ವಿಸಿದನಿಂದ್ರಂ ಪುಷ್ಪಬಾಣಂಗ
ಳಂ । ಪಡೆದಂ ಪೆಣ್ಬಡೆಯಂ[೪] ಮನೋಜನೆನೆ ನೈಪಥ್ಯಂ ಬೆಡಂಗಪ್ಪಿನಂ ।

೧. ಘೋಷ. ಕ॥ ೨. ಮುಬಿರ್ದ. ಕ॥ ೩. ಕ್ಕೆಱದು. ಕ॥ ೪. ಕಣ್ಬಡೆ. ಕ॥ಗ॥

ನಡೆಗೊಂಡತ್ತು ನಿಜಾಂಗಹಾರವದಸಂಚಾರಂ ಚಮತ್ಕಾರಮಂ ।
ಕುಡೆ ಹಸ್ತಾಭಿನಯಂ ನಯಂಬಡೆಯೆ ನಾನಾನರ್ತಕೀಸೈನಿಕಂ ॥೭೭

ಅಂತೆಡವಱಿಯದಮರವಾಹಿನಿಯಂತಮರವಾಹಿನಿ ಗಗನಮಾರ್ಗಂ ಬಿಡಿದು ನಡೆವೆಡೆಯೊಳ್ ॥೭೮

ಪಾಱಿ[1] ಪಣುಕುತ್ತುಮೋರೊಂ ।
ದಾಱಲನೋರೊರ್ವರ್ ಬಿದ್ದುಮಿಱುಯುತ್ತುಂ ನೀ ।
ರ್ವೇಱಿದ ಮುಗಿಲೊಂದೊಡ್ಡಂ ।
ಬೀಱಿದುದಿಂದ್ರಂಗೆ ಬಿನದಮಂ ನಾಗೇಂದ್ರಂ ॥೭೯

ಆಸಮಯದೊಳಮರಪತಿ[2] ಮಂದರಮಹೀಧರಮಂ ಭವನಾಮರಪತಿಗಳಪ್ಪ ಚಮರವೈರೋಚನರ್ಗೆ ತೋಱಿ ॥೮೦

ವಿದಳಚ್ಚಂಪಕವರ್ಣಮಾದ ಶಿಖಿಕಂಠಚ್ಛಾಯೆವೆತ್ತಿಂದ್ರಚಾ ।
ಪದ ರೂಪಂ ತಳೆದಭ್ರಕಭ್ರಮೆಯನಾಳ್ದತ್ಯುತ್ಪಟಳಪ್ರಾಂಶು ತ ।
ಳ್ತ ದಳತ್ಕಿಂಶುಕಶೋಣಮಪ್ಪ ಸಮಸದ್ವರ್ಣಪ್ರದೇಶಂಗಳಿಂ ।
ಡಿದೆ ಚೆಲ್ವಾದುದು ಮನ್ದರಾದ್ರಿ[3] ಮದನಂ ವರ್ಣಕ್ರಮಂ ಗೆಯ್ದವೊಲ್[4] ॥

ಷೋಡಶಕಲ್ಪವೆಂಬ ನೆಲೆಮಾಡಮನಾಂತಿರಲೊಂದೆ ಕಂಬಮಂ ।
ಮಾಡಿದನಬ್ಜಗರ್ಭನೆನಲುನ್ನತಿಯಿಂ ನಭಮಂ ತೆಱಂಬಿ[5] ಚೆ ॥ ಲ್ವೋ
ಡದ ನಾಲ್ಕು[6] ಮೇಖಳೆಯ ನಾಲ್ಕು ಬನಂಗಳ ನಾಲ್ಕು ಮೆಯ್ಯೊಳಂ ।
[7]ಮಾಡಿದ ನಾಲ್ಕೆ ನಾಲ್ಕೆ ಜಿನಮಂದಿರದಿಂದೆಸೆದತ್ತು ಮಂದರಂ ॥೮೨

೧. ಪಣುಗುತ್ತನೊರ್ಮೆ।ದಾ. ಕ॥ ೨. ಸಮಿತಿ. ಕ॥
೩. ಮಥನಂ. ಕ॥ ೪. ಗೆಯ್ವ. ಗ॥ ೫. ತುಱುಂಬಿ. ಕ॥
೬. ನಾಲ್ಕೆ. ಗ॥ ೭. ಮೋಡದ. ಕ॥

ಕಳಹಂಸೀಕೂಜನಂ ಸಂಚರದಮರವಧೂಮಂಜುಮಂಜೀರಕಾ
ಮಂ। ಜುಳನಾದಂ ಮತ್ತಪುಂಸ್ಕೋಕಿಳಕಳನಿನದಂ ಸಾರಸೋತ್ಕಾ
ರಕೋಳಾ । ಹಳಮುನ್ಮತ್ತಾಳಿಕೀರಂಗಳ ಕಳರುತಿಯಂ ಪೋಲ್ವಿ
ನಂ ತನ್ನಿತಂಬ। ಸ್ಥಳದೊಳ್ ತಾಳ್ದಿತ್ತು ಚಿತ್ರಾಂಬರವಿಳಸನಮಂ
ಭದ್ರಶಾಳಂ ವಿಶಾಳಂ ॥೮೨

ಅಲ್ಲಿಂ ಮೇಲೆ ॥೮೩

ಅಳಿನೀಸಿಂಜಿತ ಚಕ್ರಚೀತ್ಕರಣವಾಶಾಚಕ್ರಮಂ ತೀವೆ ಕೋ।
ಮಳಶಾಖಾಗ್ರಪರೀತಪಲ್ಲವಪತಾಕಾಳಂಬನಂ ಕೀರಶಾ ।
ಡ್ವಳವಾಹಂ ಗಗನಾವೃತೋದ್ಗಮರಜಂ ಸಮ್ಮೋಹಬಾಣಾಸನ।
ಸ್ಥಳವೀತೋರ್ಪುದೆ ಕಂತುದಿಗ್ವಿಜಯಯಾತ್ರಾಸ್ಯಂದನಂ ನಂದನಂ ॥

ಮತ್ತಮಲ್ಲಿಂದತ್ತ ॥೮೪

ಸುಮನೋಬಾಣಕ್ರೀಡೆಗೆ।
ಸುಮನೋಮಿಥುನಂಗಳೆಳಸಿ ರಮಿಯಿಪ ನಾನಾ ॥
ಸುಮನೋಲತಾಗೃಹಂಗಳ।
ಸುಮನಶ್ಶಯ್ಯೆಗಳನೊಪ್ಪುಗುಂ ಸೌಮನಸಂ ॥೮೬

ಮೇರು ಮೃಣಾಳದಂಡಮೆನೆ ದಿಗ್ವಿಳಯಂ [೧]ದಳವಾಗೆ ಕರ್ಣಿಕಾ।
ಕಾರದಿನೊಪ್ಪೆ ಕಲ್ಪಪಟಳಂ ಸ್ಥಳಪದ್ಮಮಪೂರ್ವಮಾಯ್ತು ತ।
ತ್ಸೌರಭಲೋಭದಿಂ ಪುದಿದ ತುಂಬಿಯ ಬಂಬಲೆನಲ್ ನಮೇರುಮು।
ದಾರವಿಳಾಸಪಾಂಡುಕವನಂ ಬಳಸಿತ್ತು ಚತುರ್ಥಸಾನುವಂ ॥೮೮

ಅಲ್ಲಿ ॥೮೯

೧. ಗಳು. ಕ॥, ಗಳ. ಗ॥

ಬಳಸಿ ವಿದಿಕ್ಚತುಷ್ಟಯಮನುತ್ತರಪೂರ್ವದಿನರ್ಧವೃತ್ತಮಾ |
ಪೊಳೆವುವೆ ಪಾಂಡುರಪ್ರಭೆಯ ಪಾಂಡುಕಮುಂ ಕವಿಲಾದ ರತ್ನಕಂ ||
ಬಳಮುಮಲಕ್ತಕಚ್ಛವಿಯ[೧]ಲಕ್ತಕಮುಂ ಕಿಸು[೨]ಗಲ್ಲ ರಕ್ತಕಂ |
ಬಳಮುಮೆನಿಪ್ಪ ಜೈನಸವನೋತ್ಸವಪೀಠಶಿಲಾಚತುಷ್ಟಯಂ ||೯೦

ಬಲವರುತಿರ್ಪ ಭಾನುಗೆ ತಮಃಪಟಳಂ ಸುಗಿದಭ್ರಮೇಖಳಾ |
ವಳಯಮನಾಸೆವಟ್ಟು ನೆಲಸಿರ್ದುದೊ ಪೇೞಿನೆ ಮಂದರಾಗ್ರದೊಳ್ ||
ನೆಲಸಿದ ನೀಲಚೂಳಿಕೆ ಜಿನಾಗಮನಕ್ಕಿದೆ ನಮ್ಮ[೩] ಮುಂದೆ ಪೂ |
ವಲಿಗೆವಱುತ್ತುಮಿರ್ದಪುದು ಮೆಯ್ವೊಳಗೆಂಬತಸೀಲತಾಂತಮಂ ||೯೧

ಎಂದು ಬೇೞ್ವೇೞ್ ಮೇಖಳಾವನಮಂ ಮಂದರಮಹೀಧರವಿಳಾಸಮಂ ಸಹಸ್ರಮುಖದಿಂ ಪೊಗೞ್ವ ಸುರಸೇನೆಯ ಕಳಕಳಮಂ ಕೇಳುತ್ತುಂ ಗಗನವೀಥಿಯಿಂ ತದ್ಗಿರಿದರೀಪ್ರದೇಶಕ್ಕವತರಿಸಿ ದಿವಿಜಪತಿ ಗಜಪತಿಯನಣೆದು ಬಿಟ್ಟಕ್ಕೆ |೯೨

ಕುಡೆ ವೈಡೂರ್ಯಮರೀಚಿಜಾಳಜಳದಿಂ ಪುಂ ಪಾದ್ಯಮಂ ಸೇಸೆಯಂ | ಕುಡೆ ಶೃಂಗಂ ನಡೆ ಮೇಘದಿಂ ಸುರಿವ ಮುಕ್ತಾಜಾಳದಿಂದರ್ಘ್ಯಮಂ | ಕುಡೆ ಕಲ್ಪದ್ರುಮಪಲ್ಲವೋಲ್ಲಸಿತಶಾಖಾಹಸ್ತದೊಳೆತ್ತಿರ್ಪ ಪೂ | ಗುಡಿಯಿಂ ಮಂದರಮಂದದೇನಡರ್ದುದೊ ದೇವೇಂದ್ರನೈರಾವತಂ |೯೩

ಅಡರ್ದುದು ಭದ್ರಶಾಳವನಸಾನುವನೆಂಬನಿತರ್ಕೆ ನಂದನ |
ಕ್ಕಡರ್ದುದು ಕೇೞ ನಂದನದಿನೊರ್ಮೆಯೆ ಸೌಮನಸಕ್ಕೆ ವಂದುದಾ ||
ಯೆಡೆಯುಣದೊಂದು ಭಾವಿಸದ ಮುನ್ನಮೆ ಪಾಂಡುಕಮೇಖಳಾವನ |
ಕ್ಕಡರ್ದುದಿದೇಂ ಮನಃಪವನವೇಗಿಯೊ ಶಕ್ರನವಿಕ್ರಿಯಾಗಜಂ ||೯೪

೧. ರಕ್ತ. ಗ|    ೨. ಕಲ್ಲ. ಗ|    ೩. ತಸಿಲತಾಂ. ಗ|

ಆಸಮಯದೊಳ್ ॥೯೫

ಕುಸುಮರಸಂಗಳಂ ವೊಗೆದು[1] ನೀರ್ದಳದಿಂ ಕುಸುಮೋಪಹಾರಮಂ । ಪಸರಿಸಿಯುಂ ಮದಾಳಿಕುಳಮಂಗಳಗೀತಪುರಸ್ಸರಂ ನಿಜಾ॥ ವಸಥಸಮಾಗಮೋಚಿತಮನೇಂ ಮೆಱೆದತ್ತೊ ಸರಃಪಯೋಲವ । ಪ್ರಸರಸಿತಾಕ್ಷತಂ ರದನಿಗಾವನಪಾವನಮಂದಮಾರುತಂ ॥೯೬

ಅಂತಮರಪತಿ ಸುರಸಮಿತಿವೆರಸು ನಾಲ್ಕನೆಯ ಮೇಖಳೆಗೇಱ್ದು ಪೂರ್ದುಮಾಮಹೀಧರದುತ್ತರಪೂರ್ವಭಾಗದೊಳ್ ॥೯೭

ಅರೆಯೋಜನದುನ್ನತಿ[3] ಶತ ।
ದರೆಯೋಜನದಗಲ[4]ಮಗಲಿರ್ದಡಿ ನೀಳಂ ॥
ದೊರೆಕೊಂಡಿರೆ ಹಿಮಪಾಂಡುರ ।
ವರೆದಿಂಗಳನಿೞಿಸಿ ಪಾಂಡುಕಂ ಸೊಗಯಿಸುಗುಂ ॥೯೮

[5][ ಅಗೆಯೊತ್ತುಗೊಂಡುದದು ] ತಾ ।
ರಗೆಗಳನರೆಮಾಡಿದತ್ತು ಬೆಳ್ದಾವರೆಯಂ ॥
ನಗುವುದು ಗಿರಿಜೇಶನ ಬೆ ।
ಳ್ನಗೆಯಂ ಪಾಂಡುಕಶಿಲಾತಳಂ ನಿಜರುಚಿಯಿಂ ॥೯೯

ಪೊಳೆವೆಳವಾೞಿಗಳಂ ಕ ।
ಣ್ಗೊಳಿಸುವ ಪಾಲ್ಗಡಲ ಮಡುವಿದೆನೆ ಸುೞಿವಮರೀ ॥
ಚಳನಯನಪ್ರತಿಬಿಂಬಾ ।
ವಳಿಯಿಂ ಪಾಂಡುಕಶಿಳಾತಳಂ ಸೊಗಯಿಸುಗುಂ ॥೧೦೦

ಆಸೞಿಯ ಮಧ್ಯದೊಳ್ ಸಿಂ ।
ಹಾಸನವಿಂಗಡಲ ನಡುವೆ ತಲೆದೋಱುವ ಭಾ ॥

೧. ತೆಗೆದು. ಗ॥ ೨. ಗೆಯ್ತುರ್ಪು. ಕ॥ ೩. ಅರೆಯೋಜನದಷೋಡಶಶತ. ಕ॥ ೪. ದಗಲ. ಕ॥ ೫. ಅಗೆಯೆತ್ತುಗೊಂಡುದದು. ಕ॥ಗ॥

ಭಾಸುರರತ್ನಾದ್ರಿಯುನಪ ।
ಹಾಸಂಮಾಡುವುದನರ್ಘರತ್ನಾಂಶುಗಳಿಂ ॥೧೦೧

ಅಭಿಷೇಕವೃಷ್ಟಿಸೂಚಕ ।
ಮುಭಯುಪ್ರತಿಸೂರ್ಯಬಿಂಬವೊಗೆದುವು ತಿಗ್ಮ ॥
ಪ್ರಭೆ ಪಾರ್ಶ್ವದೊಳೆಸೆದಿರ್ದುವು ।
ಶುಭಾಸನಂ ಸಿಂಹಪೀಠದೆರಡುಂ ಕೆಲದೊಳ್ ॥೧೦೨

ಮುತ್ತುವಾಶಿಲಾತಳಮೆ ತಳವಾಗೆ ॥೧೦೩

ರೂಢಿಯ ವಿಶ್ವಕರ್ಮನಿದಱಂದಮೆ ಚಂದಮೆನಲ್ಕೆ ಸೂತ್ರಮಂ ।
ಮಾಡಿದನಾವ ರತ್ನವಿಪುಳೋಪಳನುಲ್ಲಿಗೆ ತಕ್ಕುದಂತೆ ಕೈ ॥
ಗೂಡಿದುದಾಗಳಾಗಳುಳಮುಟ್ಟದೆ ತೀರ್ದುದೆನಲ್ಕೆ ಯೋಗ್ಯ ನಾ ।
ಡಾಡಿಗಳುಂಬಮೆಂದಿರದೆ ಬಣ್ಣಿಸುವಂತಭಿಷೇಕಮಂಡಪಂ ॥೧೦೪

ಮುತ್ತಿನ ಸೂಸಕಂ ಮರಕತಂಗಳ ತಿಂಗಣಿ ಪೊನ್ನ ಘಂಟೆ ತ ।
ಳ್ತೆತ್ತಿದ ಕೇತುಸಂತತಿ ತೊಡರ್ಚಿದ ಚಿತ್ರವಿತಾನವೋಳಿಯಿಂ ॥
ಸುತ್ತಿದ ತೋರಣಂ ಪುದಿದ ಪೂವಲಿ ರನ್ನದ ರಂಗವಲ್ಲಿ ಸಂ ॥
ಪತ್ತಿಯನರ್ಘ್ಯಮೆತ್ತಿ ಕುಡೆ ರಂಜಿಸಿದತ್ತಭಿಷೇಕಮಂಡಪಂ ॥೧೦೫

ಶಿಲ್ಪಿಗಳ[೧] ಕಲ್ಪಪತಿ ಸಂ ।
ಕಲ್ಪಂ ರತ್ನೋಪಳಂ ದಳಂ ಗಳ! ಶೋಭಾ ॥
ತಲ್ಪಮಿದೆನ್ನದೆ ಜೇಱ್ವಿ ।
ಕಲ್ಪಿಸುವುದೆ ಜೈನಸವನಮಣಿಮಂಡಪಮಂ ॥೧೦೬

ನೆಲೆವಡಲಗೆಗಳ ಜಾಗಂ ।
ಪಲವಾಗಿರೆ ತನ್ನ ನೆಗೆವ ವಸುರ್ಗದಿರಿಂದಂ[೨] ॥

೧. ಗಡ ಕಲ್ಪಪರಿ. ಗ॥ ೨. ವಡಲಿಗೆ, ಕ॥

ಪೊಲಗಿಡಿಸಿದುದಮರರ ಕ ।
ಣ್ಮಲರಂ ಜಿನಸವನಭವನಹರಿತಸ್ತಂಭಂ ॥೧೦೭

ಪರಮದಯಾನಿಧಿಯೆನಿಸಿದ ।
ಪರಮನ ಸನ್ನಿಧಿಯೊಳುಪ್ಪಮಂ ಪರಪೀಡಾ ॥
ಕರಮಂ ತೋಱದ ಬಾಲಾ ।
ರ್ಕರಶ್ಮಿಯೆನಿಸಿದುವು ರತ್ನದೀಪಪ್ರಭೆಗಳ್ ॥೧೦೮

ಪಳಕಿನ ಕಂಬಂಗಳ್ ಕ ।
ಣ್ಗೊಳಸುವ ಮಾಣಿಕದ ಸೊಡರ್ಗಳಿಂ ನಾಡೆ ಮನಂ ॥
ಗೊಳಸಿದುವು ಲಸಿತಭಸಿತೋ ।
ಜ್ಜ್ವಳಗಾತ್ರಂ ಸ್ಥಾಣು ನೊಸಲ ಕಣ್ದೋಱದವೋಲ್ ॥೧೦೯

ಇದು ಕಲ್ಪಲತಾಪಲ್ಲವ ।
ಮಿದು ಮೇಗೊಗೆದಂಶುಪಟಳಮೆಂಬ ವಿಕಲ್ಪಂ ॥
ಜೆದಱುವಿನಂ ಚೆಲ್ವಂ ಬೀ ।
ಱಿದುವು ಚತುಷ್ಕೋಣಶೋಣಮಣಿಕಳಶಂಗಳ್ ॥೧೧೦

ಅರುಣಮಣಿದೀಪರುಚಿಯಿಂ ।
ಪರಭಾಗಂಬಡೆದ ನೀಳರತ್ನಸ್ತಂಭಾಂ ॥
ತರದಮರೀಪ್ರತಿಬಿಂಬಂ ।
ಸಿರಿ ನೆಮ್ಮಿದಳೆನಿಸಿದತ್ತು ಪೀತಾಂಬರನಂ ॥೧೧೧

ಅಂತೆನತಿಶಯಮುಮುಪ್ಪಮುಂಗಳಪರಿವೇಷ್ಟಿತಮುಮಾದ ಮಣಿಮಂಡಪದ ನಡುವಣರ್ಚಿಸಿದ ಸಿಂಹಾಸನದೊಳ್ ಪೂರ್ವಾಭಿಮುಖನಾಗಿ ದೇವಾರ್ಭಕನನಿರಿಸುವುದುಂ ॥೧೧೨

ಹರಿಪೀಠಮುದಯಗಿರಿಯುಂ ।
ತಿರೆ ಬಾಳಂ ಬಾಳಭಾನುಮಂಡಳಮೆಂಬಂ ॥
ತಿರೆ ಬಾಳಾತಪಮೆಂಬಂ ।
ತಿರೆ ತನುರುಚಿ ಪುದಿದುದೊಗೆದು ಗಗನಾಂತರಮಂ ॥೧೧೩

ಆಗಳಾಸಿಂಹಾಸನದಿರ್ಕೆಲದ ಶುಭಾಸನಂಗಳೊಳ್ ಸೌಧರ್ಮೇಂದ್ರನುಮೀಶಾನೇಂದ್ರನುಮುತ್ತರದಕ್ಷಿಣಾಭಿಮುಖರಾಗಿ ಕುಳ್ಳಿರ್ದು ಸಕಳಕಲ್ಪಾಮರಪ್ರಮುಖಸುರಸಮಿತಿಯನುಚಿತಸ್ಥಾನದೊಳಿರಿಸಿ ಭವನವನರ್ಚರಸು ಜ್ಯೋತಿರಿಂದ್ರರುಂ ಪರಿಚಾರಕಪದವಿಯೊಳ್ ಯೋಜಿಸುವುದುಂ ॥೧೧೪

ಇರೆ ತಂತಮ್ಮ ದಿಶಾಪ್ರದೇಶಮುಮಾಶಾಧೀಶರಾತ್ಮಾಂಗನಾ।
ಪರಿವಾರಾಯುಧವಾಹನಂಬೆರಸು ಶೇಷಾಶೇಷದೇವರ್ಕಳುಂ ॥
ನೆರೆದಲ್ಲಲ್ಲಿರೆ ತಜ್ಜಿನಾಭಿಷವಧಾರಾವರ್ಷದೊಳ್ ತೋರ್ಪ ತ।
ತ್ಸುರಚಾಪಕ್ಕೆಣೆಯಾದುವಾಸುರಕಿರೀಟಾನರ್ಘರತ್ನಾಂಶುಗಳ್ ॥೧೧೫

ಆಸಮಯದೊಳಗರುಧೂಮಲತೆ ಗಗನಮಂಡಳಮನಮರಮಂಗಳಾನಕರವಂ ಬೆರಸು ಪುದಿಯೆ ॥೧೧೬

ಅಮರಾಧಿಪರರ್ಘ್ಯಮನೆ।
ತ್ತೆ ಮುತ್ತಿದುವು ನಭಮನಂದು ಸಲಿಲಾಕ್ಷತಮಿ ।
ಶ್ರಮೆನಿಪ್ಪ ಮೇರುನಂದನ।
ನಮೇರುಮಂದಾರಪಾರಿಜಾತಪ್ರಸವಂ ॥೧೧೭

ಅಲ್ಲಿಂಬಳಿಯಮುಚ್ಚರಿತಕಳಶೋದ್ಧರಣಮಂತ್ರಮುಖರಾಗಿ ।
ಅನಿಮಿಷನಾಯಕರಿರ್ವರು ।
ಮನುರಾಗದಿನೆತ್ತಿ ರತ್ನಸಂಚಯಮಂ ಶಾಂ ।

ಚನಪೂರ್ಣಕಳಶಯುಗಮಂ ।
ಜಿನಮಹಿಮೋನ್ನತಿಗೆ ಕಳಶಮಿಟ್ಟಂತಿರ್ದರ್ ॥೧೧೯

ತಳಿರಿಂ ಕನ್ನಡಿಯಿಂ ಮಂ ।
ಗಳಸೂತ್ರದಿನಕ್ಷತಂಗಳಿಂ ಮಾಲೆಗಳಿಂ ॥
ಮಳಯರುಹಚರ್ಚೆಯಿಂ ಪೊಂ ।
ಗಳಸಂ ರಂಜಿಸಿದುವಮರಪತಿಗಳ ಕೈಯೊಳ್ ॥೧೨೦

ಅನಂತರಂ ॥೧೨೧

ಜಯಜಯಘೋಷಣಂಬೆರಸು ಕೈಮುಗಿವಂತಮರರ್ ಸಹಸ್ರ ಕೋ । ಟಿಯಿನಮರೀಜನಂ ವರಸುವಂತಮರಾನಕಕೋಟ ತಮ್ಮೊಳೊ ॥ ರ್ಮೆಯೆ ಸಮಹಸ್ತದಿಂ ನೆಗುವಂತೆಱೆದರ್ಘನದುಗ್ಧವಾರಿಧಾ । ರೆಯನಮರಾಧಿಪರ್ ಪ್ರಣವಪೂರ್ವಕಮಂದು ಜಿನೋತ್ತಮಾಂಗದೊಳ್ ॥೧೨೨

ಕಳಶೋಧೋಮಂಡಳಮಂ ।
ಗುಳಸ್ತನಂ ಶಕ್ರಧೇನುವಭಿಷವವೃಷವ ॥
ತ್ಸಳಚಿತ್ತಂ ಕಱೆಯೆ ಮನಂ ।
ಗೊಳಿಸಿದುದಾಕ್ಷೀರಧಾರೆ ಜಿನಮಸ್ತಕದೊಳ್ ॥೧೨೩

ಆಗಳೇಕಯೋಜನವಿಸ್ತಾರಮುಮಷ್ಟಯೋಜನಾಯಾಮಮುಮೆನಿಸಿದಷ್ಟಪದಕಳಶಂಗಳಂ ತಳೆದುಕೊಂಡು ॥೧೨೪

ಎರಡುಂ ದೆಸೆಯೊಳಮಿರ್ದ ।
ಸುರಪತಿಗಳಮೃತಸಲಿಲಮಂ ಸಂದಿಸಲೆಂ ॥

೧. ಪ್ರಣಮ. ಕ॥ ಗ॥ ೨. ಘರ್ಷವ. ಕ॥, ಘರ್ಷನು. ಗ॥
೩. ಕಳಶಾ. ಕ॥ಗ॥

ದೆರಡೋೞಯುಮೇಂ ನಿಮಿರ್ದುವೊ ।
ಸುರರಿಂ ಕೇಗರ್ಟ್ಟದಂತೆ ದುಗ್ಧಾಬ್ಧಿವರಂ ॥೧೨೫

ಅಂತೆಯ್ದೆ ವರ್ಪುದುಂ ॥೧೨೬

ವೇಲೆಯ ತಮಾಳವನಮುಂ ।
ಕೊಳದ ಕಟ್ಟಲೆಯೊಗೆತ್ತು ಮುತ್ತಿದುವಕ್ಕುಂ ॥
ಬಾಳಾರ್ಕಬಿಂಬಶತಮುಂ ।
ಬಾಳೋಜಮನಿತ್ತುವರುಣಮಣಿಕಳಶಂಗಳ್ ॥೧೨೭

ಶಾರದನೀರದಂ ಮೊಗೆಯಲೀಕವಿತಂದುವೆ ಪಾಲನೆಂಬಿನಂ ।
ತಾರಘಟಾಳಿಗಳ್ಮೊಗಸಿ ಬಂದುವು ಚಂದ್ರನ ಪೆರ್ಚೆ ಪೆರ್ಚುದಲ್ ॥
ವೈರಿ ದಲೆಂದು ರಾಹುಗಳ್ ಮುತ್ತಿದುವೆಂಬಿನಮಿಂದ್ರನೀಳಭೃಂ ।
ಗಾರಮುಪಾರಮಾವರಿಸಿ ನಿಂದುವು ದುಗ್ಧಪಯೋಧಿತೀರಮಂ ॥೧೨೮

ಆಸಮಯದೊಳ್ ॥೧೨೯

ಭುವನದೊಳೆನ್ನ ಜೀವನಮೆ ಪಾವನಮೆನ್ನನಪೇಕ್ಷೆಗೆಯ್ದನೀ ।
ಸವನದೊಳಿಂದ್ರನೆಂದು ನೆಲೆವೆರ್ಚಿದ ರಾಗದ ಬಳ್ಳಿವಳ್ಳಿವೋಲ್ ॥
ಪವಳದ ಬಳ್ಳಿ ಕಣ್ಗೆಸೆಯೆ ಕೈನಿಱದಾಡುವ ಮಾೞ್ಕೆಯಿಂ ಸುಧಾ ।
ರ್ಣವಮೆಸೆದತ್ತು ರತ್ನವಳಯಾಂಚಿತತುಂಗತರಂಗಭುಗದಿಂ ॥೧೩೦

ಅದಲ್ಲದೆಯುಂ ॥೧೩೧

ಸುರಸೇನೋದ್ಧತಕುಂಭಸಂಭವಭಯಾಕ್ರಾಂತಂ ಸರಿದ್ವಲ್ಲಭಂ ।
ಹರಿನೀಳಚ್ಛವಿಯಂ ತೊವಲ್ವಿಡಿದು ವೀಚೀಹಸ್ತದೊಳ್ ಘೂರ್ಣಿತಾ ॥
ತುರನಿರ್ಘೋಷಣಮುಣ್ಮೆ ಪುಯ್ಯಲಿಡುವಂತಿರ್ದತ್ತು ನಿರ್ನೀರಗ ।
ಸ್ವರದೀನಾನನವಿದ್ರುಮಾಧರದಳಾಂತಶ್ಶುಕ್ತಿಕಾದಂತುರಂ ॥೧೩೨

೧. ಮಾಳ್ಕೆಯು. ಕ॥ ೨. ಪೆರ್ಚಿದಲ್ ॥ ವೈರಿದುವೆಂ. ಕ॥ ೩. ಬಳ್ಳಿವಳ್ಳಿ. ಕ॥

ಅಂಕೆಯ್ದುವೆಂದು ॥೧೩೩

ಎಮ್ಮ ಮಗನಲ್ಪತನು ಪೀ।
ರ್ದಮ್ಮನ್ನಮಗಸ್ತ್ಯನೆಮಗಿದೇಗಹನವೆನು ॥
ತ್ತುಮ್ಮುತ್ತಿದಂತನೇಕಳು।
ಟವ್ಮೊಗೆದುವು ಜಳಧಿಯಂ ಮಹಾಕಾಯಂಗಳ್ ॥೧೩೪

ಪೊಂಗೊಡದ ಕಪಿಳರುಚಿಯಿಂ।
ಪಿಂಗಡಲನುಕರಿಸೆ ಘೃತಸಮುದ್ರಮನಮರರ್ ॥
ಸಂಗಡದಿಂ ಪೊಗೆದೊಡದೊ।
ರ್ವಿಂಗಲ್ಲದೆ ನೆಱೆಯದೆಂದು ಬಗೆ ಬೆದಱುವಿನಂ ॥೧೩೫

ಅಂತು ಪೊಗೆವಾಗಳ್ ॥೧೩೬

ಮುನ್ನಂ ವೇಳಾವನಾಸ್ಫಾಳನಮನುಱಿದು ರೇಖಾಶತವ್ರಾಂತದೊಳೊ್ರ। ರ್ಪನ್ನಂ ಪಿಂಗಿತ್ತು ಮತ್ತಂ ಮಣಿವಸರವಿಧ್ವಂಬನ್ನೆಗಂ ತಾಯ್ಗುಡಲ್ಕಾ॥ ಜ್ಜನ್ನಂ ಬತ್ತಿತ್ತು ಮತ್ತಂ ಪೊಗೆಯೆ ಪೊಗೆಯೆ ದೇವಾಸುರವ್ರಾಲ ಮುನ್ನೀ। ರ್ಕಿನ್ನೀರ್ಗಂಡತ್ತಿಧೇನದ್ಭುತವೊ ಶತಮಖಂ ಮಾಳ್ಪ ಜನ್ಮಾಭಿಷೇಕಂ ॥೧೩೭

ಅನಂತರಂ ॥೧೩೮

ಪೊಗೆದು ಮಗುೞ್ದು ತಾಯ್ಗುಡಲ ವೇದಿಕೆಯಿಂದೆರಡೋಳಯಾಗೆ ತೆ। ನ್ನಗದ ಚತುರ್ಥಮೇಖಳೆವರಂ ನಿಮಿರ್ದಾರೆಯೆ ಮಾಲೆಗೋದವ್ರೋಲ್॥ ಸೊಗಯಿಪ ಪಂಚರತ್ನಘಟಮಾಲೆ ಪಳಂಚಲೆದತ್ತು ಶಕ್ರ

೧೩೭. ಕಿನ್ನೀರ್=ಕೆಳಗಣ ನೀರ್. ಶ.ದ. “ ಕೆಳಗಣ್ಗೆ ಕಿಱ್ಕೆನೆಂಬಾದೇಶಂ, ”

೧. ಸವ್ರೃತ. ಗ॥ ೨. ದರಿ. ಕ॥ಗ॥ ೩. ಪೂಲೆಗಳಂಚಲೆ. ಕ॥

ನಾ । ಜ್ಞೆಗೆ ಸವನೋತ್ಸವಪ್ರಿಯುತಮಂ ಪಡೆದಟ್ಟಿದ ರತ್ನವಾ
ಛೆಯಂ ॥೧೩೯

ದಿವಿಜಾಚಳವಂ ಪೊರ್ದುವ ।
ನವಗ್ರಹಂಗಳ ವಿಳಾಸಮಂ ಕೀಟ್ಪಡಿಸಲ್ ।
ನವರತ್ನಘಟಂಗಳ್ನಿಱ ।
ದುವು ನಯನಾನಂದಮೆನಿಪ ನಾನಾರುಚಿಯಿಂ ॥೧೪೦

ಅಂತೆಯ್ದಿವಂದು ॥೧೪೧

ದಿವಿಜರ ಪಡೆ ನೀಡುವ ಕುಂ ।
ಭವೆಲ್ಲಮಂ ತಳೆದು ವಿಕ್ರಿಯಾವಿಭವಸಮು ।
ದ್ಭವಭುಜಶಾಖಾಶತದಿಂ ।
ದಿವಿಜೇಂದ್ರಂ ಬರ್ಕೆವಲಸು ಕಾಯ್ತ್ತಿಂತಿರ್ದಂ ॥೧೪೨

ಗಂಡಶಿಳಾತಳದೊಳ್ ಘನ ।
ಮಂಡಳವೆಱಗಿರ್ದ ಗೋತ್ರನಗದಂದದಿನಾ ।
ಖಂಡಳನಿರ್ದಂ ನಿಜಭುಜ ।
ದಂಡಂಗಳೊಳೆಸೆಯೆ ಪೂರ್ಣಕುಂಭಶತಂಗಳ್ ॥೧೪೩

ಎನಿತಾನುಂ ಘಟಕೋಟಿಯುಂ ರಜತರತ್ನಸ್ವರ್ಣನಿಷ್ಪನ್ನಮಂ ।
ತನಗೆತ್ತಿಂ ಸುರಕೋಟಿ ತಂದು ಕುಡೆ ಕೋಟಾಕೋಟಿಹಸ್ತಂಗಳೊ
ಳ್ । ಜಿನಜನ್ಮಾಭಿಷವೋತ್ಸುಕಂ ತಳೆದು ತಾರಾಮಂಡಳಾಕೀರ್ಣ
ಮಾ । ದ ನಭೋಮಂಡಳದಂತೆ ತತ್ಸಮಯದೊಳ್ ಕಣ್ಗೊಂಡನಾ
ಖಂಡಳಂ ॥೧೪೪

ಅಂತು ॥೧೪೫

೧. ಪಡೆದ. ಕ॥ ೨. ನಿಃಪರ್ಣಮಂ. ಕ॥

( ಪೃಥ್ವೀವೃತ್ತಂ )

ಅನೇಕಕಳಶಂಗಳಿಂ ತಳೆದನೇಕಹಸ್ತಂಗಳಿಂ ।
ದನೇಕಮಣಿಭೂಷಣಚ್ಛುರುಚಿಪ್ರಭಾಶೋಭಿವೆ ॥
ತ್ತನೇಕಸುರದುಂದುಭಿಸ್ತನಿತಮುಣ್ಮೆ ಶರ್ವಾಂಬುದಂ ।
ಜಿನಾರ್ಭಕನ ಮೇಲದೇಂ ಕಱಿದುದೋ ಪಯೋಧಾರೆಯಂ ॥

ತ್ರಿದಶರ್ನಿಡುವ ಶಾತಕುಂಭಕಳಶವ್ರಾತಂಗಳಿಂ ಪರ್ವಿ ಕೊ । ರ್ವಿದ ವೈಕುವರ್ಣಹಸ್ತದೊಳ್ತಳೆದು ಪುಣ್ಯಕ್ಷೇತ್ರದೊಳ್ ಪುಣ್ಯಸಂ । ಪದಸಸ್ಯಂ ಬೆಳೆವಂತು ಪುಣ್ಯಜಳಮಂ ಶಕ್ರಂ ಘಟೀಯಂತ್ರದ । ಕ್ರದವೊಲ್ಪೊಯ್ಯೆ ಜಿನಂಗದೇನೆಸೆದುದೋ ಜನ್ಮಾಭಿಷೇಕೋತ್ಸವಂ ॥೧೪೩

ತತ್ಸಮಯದೊಳ್ ॥೧೪೪

ವಿಗಳದ್ಧಾರಾಪ್ರವಾಹಂ ಪ್ರಬಳವಬಳನೇನಾರ್ಪನೇ ತಾಳ್ದಲೀನಂ । ಬಗೆದಂ ದೇವೇಂದ್ರನೆಂಬೀದಿವಿಜರ ಮನದೊಂದುಮ್ಮಳಂ ಪಿಂಗುವನ್ನಂ । ಪುಗೆ ನಾಸಾಗರ್ಭದೊಳ್ ನೀರ್ವನಿ ನಸುದೆಱಸುಂದರ್ಭಕಂ ಸೀಂಪ್ರುದುಂ ಮೇ । ಗೊಗೆದತ್ತಾಕಾಶದೊಳ್ ಪೂವಲಿಗೆದಱಿವವೊಲ್ ದೇವಸೇನಾವಿಮಾನಂ ॥೧೪೫

ಕಡಲತ್ತಲ್ನಡೆಯುತ್ತುಮಿರ್ಪ ಕಡಲಿಂದೇೞ್ತರ್ಪ ಹೇಮಾದ್ರಿಯು । ತ್ತಡರ್ವಲ್ಲಿಂದಿೞಿತರ್ಪ ಪೂರ್ಣಘಟಮಂ ಕೈಕೈಯೊಳಿಂದ್ರಂಗೆ ಮುಂ । ಕುಡುವಿಂದ್ರಂ ಕುಡೆ ಕೊಳ್ವ ರಿಕ್ತಘಟಮಂ ಕೊಂಡೋಳಿಯಿಂ ಮತ್ತೆಯುಂ । ನಡೆವತ್ಯದ್ಭುತಮಪ್ಪ ದೇವಪಡೆ ಸಂಖ್ಯಾತೀತಮೇನಾದುದೋ ॥೧೪೬

೧. ಗಳಿಂ, ಕ॥ ೨. ಬಳೆವಂತು, ಕ॥ ೩. ಪಡೆ, ಗ॥

ಕಡಲೊಳವೆಡೆಯೊಳವಿಂದ್ರನ ।
ಕಡೆಯೊಳವೊವೋ೯ದಲೆ ಕಾಣ್ಬಿನಂ ತಮ್ಮಂ ತಾಂ ॥
ಕಡುವೇಗದಿಂದಮಮರರ ।
ಪಡೆ ಪಡೆದುದು ಮೇರುಗಿರಿಯ ಮೇಲಿಂಗಡಲಂ ॥೧೫೧

ಅಂತೆಡೆಮಡಗದೆ ಅಮರಸಮಿತಿ ನೀಡುವುದುಂ ನೀಳಕಳಶಂಗಳೊಳ್ ರಾಹುಮಂಡಳದಿಂ ಪೊಱಮಡುವ ಚಂದ್ರಕಳೆಯಂತೆಯುಂ ಸ್ಫಟಿಕಕಳಶಂಗಳೊಳಾಗಸಮೆ ಕರಗಿ ಸುರಿವಂತೆಯುಂ ಶೋಣಮಣಿಕಳಶಂಗಳೊಳ್ ತಳಿರ ತೊಂಗಲಿಂದುಗುವ ಕಸುಮದೆಸಱಂತೆಯುಂ ಚಂದ್ರಕಾಂತಕಳಶಂಗಳೊಳ್ ಚಂದ್ರಚೂಡನಟ್ಟಹಾಸದಂತೆಯುಂ ಹಿರಣ್ಯಕಳಶಂಗಳೊಳ್ ಹಿರಣ್ಯಗರ್ಭನಾನನದೊಳಿರ್ಪ ಸರಸ್ವತಿಯ ಕಣ್ಬೆಳಪಿನಂತೆಯುಂ ಮುಕ್ತಾಫಳಕಳಶಂಗಳೊಳ್ ಪರಮಜಿನಪತಿಯ ಚರಮಧ್ಯಾನದಂತೆಯುಂ ಅಮರವತಿಪೊಯ್ವಪಾರಕ್ಷೀರಧಾರಾಪೂರಂ ಮಂದರಮಹೀಧರದ ಪಾಂಡುಕವನಮನೊಳಕೊಂಡುಂ ಸೌಮನಸವನಮಂ ಸುತ್ತಿಯುಂ ನಂದನವನಮಂ ಮುತ್ತಿಯುಂ ಭದ್ರಶಾಳವನಮಂ ಮುದ್ರಿಸಿಯುಂ ಮುನ್ನೀರೆ ಮೇರೆದಪ್ಪಿದಂತೆ ಪ್ಪುದುಂ ॥೧೫೨

ಉದಧಿಯ ತೆಱೆಮುತ್ತೆನಿಸೆ ತಾರಗೆ ಶೀತಮರೀಚಿ ಶಂಖದಂ ।
ದದಿನಿರೆ ನೀರ ಮೇಲೆ ನಲಿವಚ್ಚರಿಯಜ್ಝಲಮಾನುಷೀಪ್ರಕಾ ॥
ರದಿನಿರೆ ಮಂದರಂ ಮುಳುಗೆವಂದ ಸುನಾಕನಗಂಬೊಲೊಪ್ಪೆ ತೀ ।
ವಿದುದು ಜಿನಾಭಿಷೇಕಸಲಿಲಂ ದೆಸೆಯುಂ ನಭಮುಂ ಧರಿತ್ರಿಯುಂ ॥೧೫೩

೧. ನಭಮುಂ ದೆಸೆಯುಂ, ಗ॥

ತ್ರಿದಶಾಧೀಶನಿನಾದ ಜನ್ಮಸವನಾಂಭಃಪೂರದೊಳ್ ನೀರನೂ ।
ಡಿದುದೋಲಾಡಿದುದರ್ದಿಕೊಂಡುದು ಪೊರಳ್ದೀಸಿತ್ತು ತೇಂಕಿತ್ತು
ಮು । ಳ್ಗಿದುದಾಳಂದಿರಿದತ್ತು ತೇನವಿಱಿದತ್ತುತ್ಫೇನಮಂ ಲೀಲೆ
ಯಿಂ । ದಿದು ನೀರಾನೆಯೊ ಪೇೞ್ವೆಂಬಿನೆಗಮಾದೇವೇಂದ್ರನೈರಾ
ವತಂ ॥೧೫೪

ನವರತ್ನಂ ಕರಿ ವಾಜಿ ಕಲ್ಪತರು ದೇವಸ್ತ್ರೀಜನಂ ಲಕ್ಷ್ಮಿಯೆಂ ।
ಬಿವಱುತ್ಪತ್ತಿಗೆ ಮುಖ್ಯಮಾದುದಮೃತಕ್ಕಾವಾಸಮಾದತ್ತೆನಲ್ ।
ದಿವಿಜೇಂದ್ರಾಚಳದೊಳ್ ಜಿನಾಭಿಷವಣವ್ಯಾಪಾರದೊಳ್ ದೇವದಾ ।
ನವರಿಂದಾದ ಮಹಾಸಮುದ್ರಮಥನಂ ಭದ್ರಂ ಶುಭಂ ಮಂಗಳಂ ॥

ತದನಂತರಮಮರಸಮಿತಿ ಗಂಗಾತರಂಗಿಣೀಪ್ರಮುಖಕುಳನದೀನಿರ್ಮಳಜಳಂಗಳಂ ದಿವ್ಯಸುರಭಿದ್ರವ್ಯಸಂಮಿಶ್ರಿತಂಗಳನಪಾರಕನಕಭೃಂಗಾರಶತಂಗಳೊಳ್ ತೀವಿ ತಂದು ಸಂಧಿಸುವುದುಂ ॥೧೫೬

ಕನಕಾಂಭೋಜಪರಾಗಪಿಂಜರಿತದಿಂ ಕರ್ಪೂರಕಾಶ್ಮೀರಜಂ ।
ದನಕಾಳಾಗುರುಯಕ್ಷಕರ್ದಮಸುಗಂಧದ್ರವ್ಯಸಂಮಿಶ್ರದಿಂ ॥
ವನಿಮೇಷಾಧಿಪನುಣ್ಮಿ ಪೊಣ್ಮೆ ವಿತತಾಂಶೋದ್ಯಸ್ವನಂ ಮಾಡಿದಂ ।
ಜಿನನಾಥಂಗೆ ಪವಿತ್ರತೀರ್ಥಜಳದಿಂ ಗಂಧೋದಕಸ್ನಾನಮಂ ॥೧೫೭

ಸುರಭಿದ್ರವ್ಯಲತಾಂತಸಂತತಿಗಳೆಲ್ಲಂ ತಮ್ಮೊಳೊಂದಾಗಿ ತ ।
ತ್ಪರಮೌದಾರಿಕದಿವ್ಯದೇಹಸಹಜಾಮೋದಕ್ಕೆ ಮಾಱಾಂತು ನಿ ॥
ತ್ತರಿಸಲ್ಪೋದಣಮೆಯ್ದದೋಡಿ ಜಳಮಂ ಪೊಕ್ಕಿರ್ದುವೆಂಬೀವಿವಾ ।
ದರಸಾಸ್ವಾದಮನಾರ್ಗವೇಂ ಪಡೆದುವೋ ಗಂಧೋದಕಸ್ನಾನದೊಳ್ ॥

ಉದವಾಸವ್ರತಮಂ ಜಿನೇಂದ್ರಸಹಜಾಮೋದಕ್ಕೆ ಸೋಲ್ತೀಪದಿಂ।
ತ್ರಿದಶಾವಾಸದೊಳುಳ್ಳ ದಿವ್ಯಸುರಭಿದ್ರವ್ಯಂಗಳುಂ ಪಾರಿಜಾ॥
ತದ ಮಂದಾರದ ಪೂಗಳುಂ ತಳೆದುವೆಂಬಂತಾಗೆ ತಳ್ಕಂಕುಗು।
ಳ್ತಿದುವಿಂದ್ರಂ ಜಿನನಾಥನಂ ಮಿಸಿಸೆ ತತ್ಪುಣ್ಯಾಂಬುಪೂರಂಗಳೊಳ್॥

ವಾಸವನಿರ್ಮಿತಮಮೃತಾ।
ವಾಸಮನೆಮಗೀಗೆ ಸುರಭಿಶುಚಿವಸ್ತುಶತಾ॥
ವಾಸಿತಮಸಿತಾಬ್ಜವ್ರಸ।
ವಾಸಿತಜಿನಸವನಗಂಧಸಲಿಲಮಕಲಿಲಂ॥೧೬೦

ಅವನತಮಸ್ತಕನಾಗಿ।
ರ್ದವನ ತಪಸ್ತಾಪನತಾಪಮಂ ತೊಲಗಿಸುಮೀ॥
ಸವನೋದ್ಗಮವಾರಿವಿಳಾ।
ಸವನೋದ್ಗಮಸುರಭಿಜೈನಮೀಗಭಿಮತಮಂ॥೧೬೧

ಆಸಮಯದೊಳ್॥೧೬೨

ಏಂ ಬಗೆಗೊಂಡುವೊ ರನ್ನದ।
ಕಂಬಂಗಳ ಕೆಲದ ಪೊನ್ನ ಪುತ್ತಳಿಗೆಯ ಕೈ॥
ದುಂಬಿದ ಸಿತಶೇಷಾಕ್ಷತೆ।
ಮೆಂಬಿನೆಗಂ ಸವನಸಲಿಲಕಣಮಂಜರಿಗಳ್॥೧೬೩

ಅಂಚಿರಮಲ್ಲದೆ ಜಳಕಣ।
ಸಂಚಯಮಾವರಿಸೆ ತನುವನಮರೇಂದ್ರಂ ಕ॥
ಣ್ಗೇಂ ಚೆಲ್ವಾದನೊ ಮುತ್ತಿನ।
ಕಂಚುಕಮಂ ತೊಟ್ಟು ನರ್ತನಕ್ಕೊಡರಿಪವೊಲ್॥೧೬೪

ಸಕಳಾಶಾದಂತಿದಾನಾಸವದ ದೆಸೆಗೆ ಮುಂದಾದುವೇ ದಿಗ್ವಧೂಕೇ । ಶಕಳಾಪಾಸಕ್ತವಂ ಕತ್ತುರಿಯ ಸೊವಡನೇಂ ಸಾರ್ದುವೇ ಕಲ್ಪವಲ್ಲೀ । ಮುಕುಳಾವೋದಕ್ಕೆ ಮೆಯ್ದಂದುವೆ ಜಿನಸಹಜಾವೋದಸಂಮಿಶ್ರಗಂಧೋ । ದಕಗಂಧಂ ತವ್ಮೊಳಾಕರ್ಷಣಪರಿಣತಿಯಂ ಬೀಱೆ ಭೃಂಗೀಸಹಸ್ರಂ ॥೧೬೫

ತದನಂತರಂ ॥೧೬೬

ಜಿಳದಿಂದರ್ಚಿಸಿ ಜಿನಪದ ।
ಜಳರುಹವಂ ಕರ್ಚಿ ಪೋಪುದಚ್ಚರಿ ಚೇತೋ ॥
ಮಳವೆಂದೇನರ್ಚಿಸಿದನೊ ।
ಬಳರಿಪು ಕಾಶ್ಮೀರಜಳದಿನಂಗಜರಿಪುವಂ ॥೧೬೭

ಜಿನ ನಿನ್ನ ದಯೆಯ ತಣ್ಪಿನೊ ।
ಳೆನಗೀವುದು ನಣ್ಪನೆಂದು ಕಾಲ್ವಿಡಿವುದು ಚಂ ।
ದನರಸವೆನೆ ದಿವಿಜೇಂದ್ರಂ ।
ಜಿನೇಂದ್ರಚರಣಾರವಿಂದವಂ ಪೂಜಿಸಿದಂ ॥೧೬೮

ನಿರತಿಶಯಭಕ್ತಿರಸಶೀ ।
ಕರನಿಕರವಿದೆನಿಪ ಧವಳಕಳವಾಕ್ಷತೆಯಿಂ ॥
ಸುರರಾಜಂ ಸಕಳಜಗ ।
ದ್ಗುರುಚರಣಸರೋಜಯುಗಳವಂ ಪೂಜಿಸಿದಂ ॥೧೬೯

ಸ್ಮರನಂ ಕೊಲ್ಲದೆ ಕಾವುದು ।
ಕರುಣಿಪುದೆಂದರಲ ಸರಲೆ ಕಾಲ್ವಿಡಿದುವೆನಲ್ ॥

೧. ಜಳದಿಂದರ್ಚಿಸೆ... । ... ಕರ್ಚಿ. ಕ॥ಗ॥

ಸುರಪತಿ ಜಿನಪತಿಪದಮಂ।
ದರದಳಿತಲತಾಂತಮಾಳೆಯಿಂದರ್ಚಿಸಿದಂ ॥೧೩೦

ತಣಿವಿಲ್ಲದರಂ ಪೂಜಿಸೆ।
ತಣಿಪಕ್ಕುಮೆ ಸಕಳಸುಖದಿನೆಂದಮರಶಿಖಾ ॥
ಮಣಿ ಭುವನತ್ರಯಚಿಂತಾ।
ಮಣಿಯಂ ಚಾರುಚರುನಿಚಯದಿಂದರ್ಚಿಸಿದಂ ॥೧೩೧

ಜನದ ಮನಸ್ತಮಮಂ ಕಳೆ।
ವ [೧]ನೆರವನೆನಗೀವುದೆಂದು ಮಣಿದೀಪಂಗಳ್ ॥
ಜಿನಪತಿಯಂ ಸೇವಿಸಿದಪ್ಪು।
ಪನೆ ಸುರಪತಿ ರತ್ನದೀಪದಿಂದರ್ಚಿಸಿದಂ ॥೧೩೨

ಅಗುರುವ ಪೊಗೆಯಿಂ[೨]ದರ್ಚಿಸಿ।
ಜಗದಧಿಪತಿಯಂ ಸುರಾಧಿಪತಿ ಬೇಳ್ಪೊಂದಂ ॥
ಜಗುನೆಯ ಮಡುವಂ ಪಡೆದಂ।
ಗಗನತರಂಗಿಣಿಗೆನ[೩]ಲ್ಕಪಲ್ತುದು ನಭದೊಳ್ ॥೧೩೩

ಸುರಪತಿ ಪೂಜಿಸುವಂ ಗಡ!।
ಪರಮಂ ಪೂಜ್ಯಂ ಗಡರ್ಚನಾನೀಕಂಗಳ್ ॥
ಸುರತರುಫಳಂ ಗಡಪಳುಂ।
ದೊರೆಕೊಳ್ವುದು ಮುಕ್ತಿ ಗಡಮದಂ ಪೊಗೞದರಾರ್ ॥೧೩೪

ಅಂತನೇಕಾರ್ಚನೆಗಳಿಂದರ್ಚಿಸಿ ಕಿಂಚಿನ್ನಮಿತಂ ನಿಟಿಳಕ್ಕೆ ಮುಕುಳಿತಕರಪುಟಮನುಯ್ದು ॥೧೩೫

೧. ನೆಱವ. ಕ॥ಗ॥ ೨. ದರ್ಚಿಸೆ. ಕ॥ ೩. ಲ್ಕಪಲ್ತುವು. ಕ॥

ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದಪ್ರತಿಕೂಳವೃತ್ತಿ ಮು ।
ಕ್ತಿಗೆ ನಿಜತತ್ವಭಾವನೆಯೆ ಕಾರಣಮೆಂದೊಡೆ ನೀನೆ ಧೇಹಯಾ ॥
ತ್ರಗೆ ಸುಖದುಃಖಯೋಜನೆಗೆ ದೇಹಿಗೆ ಮುಖ್ಯನೆ ನಿನ್ನನಾತಱಂ ।
ಜಗಮನಶೇಷಮಂ ಪಡೆವೆನೆಂಬುದು ಯುಕ್ತಿ ವಲಂ ಜಿನೇಶ್ವರಾ ॥

ಕೊಲೆಯು ವಿಕಲ್ಪಕೋಟಗಳೆ ದುಷ್ಕೃತಮೆಲ್ಲಮುಬಾಧೆಯೊಂದೆ
[೩]ಬಂ । ಬಲೆ ಸುಕೃತಂಗಳೆಲ್ಲಮವನಿರ್ಬಗಿಯಾಗಿರೆ ಮಾಡಿ ಮಾನವರ್ ॥
ಪ್ರೊಲಗಿಡದಂತು ದುಃಖಸುಖಹೇತುಗಳಂ ನಿಜದಿವ್ಯಭಾಷೆಯಿಂ ।
ಜಳಕನೆ ಮಾಡಿಬ್ಬೆ ಸಕಳದೇಹಿಗೆ ನೀನೆ ಶರಣ್ ಜಿನೇಶ್ವರಾ ॥೧೭೬

ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಹಿ ನಿನ್ನನ ।
ಣ್ಮದು ಕಲುಷಾನಳಂ ನಿಜದಯಾರಸದಿಂ ಮುಸಿಯಾಯ್ತು ಪಾವ
ಮಿ ॥ ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳವಾಯ್ತೆ[೪]ನೆ ಪೆಣ್ಣ
ಮಣ್ಣ ಮೋ । ಹದ ಪರಮಾತ್ಮರತ್ತಿರಲಿ ನೀನೆ ಜಗತ್ಸ್ವತನ್ಯೆ
ಜಿನೇಶ್ವರಾ ॥೧೭೭

ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವ ಸೌಖ್ಯಮಂ ।
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳ ಭೇದಮಾದ ಕೊಂ ॥
ಡಾಟದನಂತಸೌಖ್ಯಮನೆ ಮೆಚ್ಚಿದಮರ್ಚನೆಗೆಯೊಳೆತ್ತಡರ್ಚ ಮಾ ।
ಱಾಟದೆ ನಿನ್ನ ದರ್ಶನವಿಶುದ್ಧಿಯೆ[೫] ಮೂಲ್ಯಮೆನಲ್[೬] ಜಿನೇಶ್ವರಾ ॥೧೭೯

ಎಂದು ಸೌಧರ್ಮೇಂದ್ರಂ ವಸ್ತುಸ್ತವಗುಣಸ್ತವಂಮಾಡಿ ॥೧೮೦

ದಿವಿಜನಿರ್ೕಡುವ ಮಂಗಳೋಪಕರಣದ್ರವ್ಯಕ್ಕೆ ಧೇವಾಂಗವ ।
ಸ್ತ್ರವಿತಾನಕ್ಕೆ ನಮೇರುಪುಷ್ಪಫಳಮಾಣಿಕ್ಯಪ್ರದೀಪಕ್ಕಱಂ ॥

೧. ದುಃಖಿಯೋಜನನ. ಕ॥ ೨. ಪಡೆವೆಯೆಂಬುದು. ಕ॥ಗ॥ ೩. ಬೆಂ । ಬರೆ. ಗ॥
೪. ಜನ. ಗ॥ ೫. ಶುದ್ಧಿಯು. ಕ॥ ೬. ಸ್ತವಮಂ. ಕ॥

ಪವಣಿಲ್ಲೆಂಬಿನೆಗಂ ಮಹಾಮಹಿಮೆಯಿಂ ಜನ್ಮಾಭಿಷೇಕಾರ್ಚನಾ ।
ಸ್ತವಮಂ ತೀರ್ಚಿದನಪ್ರಮತ್ತಚರಿತಂ ಸಾಹಿತ್ಯವಿದ್ಯಾಧರಂ ॥೧೮೧

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರ ಬಾಲಚಂದ್ರ
ಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಜನ್ಮಾಭಿಷೇಕವರ್ಣನಂ
ದ್ವಾದಶಾಶ್ವಾಸಂ ಸಮಾಪ್ತಂ.



— ತ್ರಯೋದಶಾಶ್ವಾಸಂ —

——o——

ಶ್ರೀಮಜ್ಜಿನಪತಿಯುಂ ಸಕ ।
ಳಾಮರಪತಿ ಪರಮಭಕ್ತಿಯಿಂ ಸ್ತುತಿಯಿಸಿದಂ ।
ಪ್ರೇಮೋತ್ಕಟರಸಪಿಶುನಂ ।
ರೋಮಾಂಚಂ ಪ್ರಡಿಯೆ ತನುವನಭಿನವವಂಪಂ ॥ ೧

ಅನಂತರಂ ನೀರಾಜನದೀಪಕಳಶಾಪ್ರತಿಫಳತಕಳಧೌತಕಾಂತಿಪ್ರವಾಹಕಮನೀಯದೇಹನಂ ಮೋಹರಸತರಂಗಿಣಿಯ ತೆರೆಗಳೆನಿಪ ತೋಳ್ಗಳಿಂದೆತ್ತಿಕೊಂಡತಿನಿಬಿಡಾಲಿಂಗನಂಗೆಯ್ದು ನಿಜಪರ್ಯಂಕತಳದೊಳ್ಕುಳ್ಳಿರಿಸಿ ॥ ೨

ದಿವಿಜೇಂದ್ರವನಿತೆ ದೇವಾಂ ।
ಗವಸ್ತ್ರದಿಂ ತೊಡೆದಳಾಜಿನಾರ್ಭಕದೇಹ ।
ಪ್ರವಿಲಿಪ್ತಸ್ನಪನಪಯೋ ।
ಲವಮಂ ನೀರಂಜಿಪಂತೆ ರತ್ನಮನಾಗಳ್ ॥ ೩

ಜಳದಿಂದರ್ಣವಮಂ ಸೊಡ ।
ರ್ಗೆಳಗಿಂ ದಿನಮಣಿಯನರ್ಚಿಪಂತರ್ಚಿಸಿದಳ್ ।
ಪುಳಯುಜರಸದಿಂ ಶಚಿ ಮಂ ।
ಗಳಾರ್ಘಮತಿಸಹಜಸುರಭಿಯಂ ಜಿನತನುವಂ ॥ ೪

ಲಲಿತಾಂಗುಳಿಯಿಂ ಶಚಿ ಕ ।
ಜ್ಜಳಮಂ ಕಣ್ಣೀಪ್ರವನ್ನೆವರವೆಚ್ಚುವ್ರದುಂ ।

ಬಿಳಿಯಲರ್ಗಣ್ಗಳ್ ನೀಳೋ ।
ತ್ಪಳೋಪಮಾನಂಗಳಾದುವಾಬಾಳಕನಾ ॥೫

ಪೊಂದಾವರೆವೂವಿನ ಮುಕ ।
ರಂದಮನನುಕರಿಸೆ ರೋಚನಾತಿಳಕಮನೇ ॥

ನೆಂದಿಟ್ಟಳೊ ಸುರವಧು ಚೆ ।
ಲ್ವಿಂದಿಟ್ಟಳಮೆನೆ ಜಿನಾರ್ಭಕನ ನಗೆಮೊಗದೊಳ್ ॥೬

ಅವತಂಸೋತ್ತಂಸಕಂಠಾಭರಣಕಟಕಮುದ್ರಾಮಣಿಕ್ಷುದ್ರಘಂಟಾ । ನಿವಹಂಗಳ್ ನೂಪುರಂಗಳ್ ಚರಣವಳಯುಮೆಂಬೀವಿಭೂಷಾಳಿ ಸು ತ್ರಾ । ಮವಧೂಟೀಸೂತ್ರಿತಂ ಕಣ್ಗೊಳಿಸೆ ಕೊನರ್ಗಳಿಂ ಕೋರಕ ಶ್ರೇಣಿಯಿಂ ಪ । ಲ್ಲವದಿಂ ಚೆಲ್ವಾದ ಕಲ್ಪದ್ರುಮದಗೆಯುವ್ರೊಲಾಬಾಳ ಕಂ ಲೀಲೆವೆತ್ತಂ ॥೭

ಕುಡುವುದು ಭೂಷಣಾಂಗತರು ಕೊಟ್ಟವನೋಲಗಿಪಂ ಸುರಾಧಿ ಪಂ । ತೊಡವುಗಳನ್ನವಿಲ್ಲಿನಿವ ರನ್ನದಿನಾದುವು ಬಾಳಕಂಗವಂ ॥ ತುಡಿಸುವಳಪ್ಸರೋಗಣಶಿರೋಮಣಿಯೊಂದೊಡದರ್ಕೆ ವಿಸ್ಮಯಂ । ಬಿಡೆಯುದರಾರೊ ಬಣ್ಣಿಸದರಾರೊ ಜಿನಾರ್ಭಕಪುಣ್ಯಶಕ್ತಿಯಂ ॥೮

ಅಂತು ಕಯ್ಗೆಯ್ದು ನಿಜಕರಕಿಸಲಯಕ್ಕೆ ನೀಡುವುದುಂ ॥೯

ಚರಮತನು ಸಹಜದಿಂ ಸುಂ ।
ದರಮುದನಿಂದ್ರಾಣಿ ಬಾಳವಂದಮನಳವ ॥
ಟ್ಟರೆ ತುಡಿಸೆ ನೋಡಿದಂ ಸಾ ।
ಸಿರಕಣ್ಗಳುಮೆಯ್ದೆ ತಣಿವಿನಂ ದಿವಿಜೇಂದ್ರಂ ॥೧೦

೧. ಧನಾಧಿಪಂ. ಗ॥ ೨. ಬಡದವ. ಕ॥ ೩. ವದನಮು. ಕ॥ ೪. ತುಡಿಸಿ. ಕ॥

ಎಮೆಯಿಕ್ಕುವರುಂ ನೋಡಿದೊ ।
ಡೆಮೆಯಿಕ್ಕಲ್ಕೆಱಿವರೆನಿಪ ಜಿನರೂಪಮುನಂ ॥
ದಮರಾಂಗನೆಯುನೋಡಿದ ।
ರೆಮೆಯಿಕ್ಕದುದಿವರ್ಗೆ ಸಫಳವಾಯ್ತೆಂಬಿನೆಗಂ ॥೧೧

ಆಗಳಖಿಳಸುರಸೇನಾವಿಳೋಚನಮುದಾಳಪಾಳಿ ಬಾಳಕನ ಕರ್ಣಕಾರಕುಸುಮಸುಕುಮಾರತನುವಂ ಸುತ್ತಿ ಮುತ್ತಿ ಸಂತೋಷದುತ್ಸೆಯ್ದು ॥೧೨

ಮೊಲೆಯೊತ್ತಿಂ ಶಚಿ ಮೆಯ್ಗೆ ಮಾಡೆ ಪುಳಕಪ್ರೋದ್ಭೇದಮಂ ಸೋಂಕಿಲೊಳ್ । ನೆಲಸಿರ್ದರ್ಭಕನುಂಟುಮಾಡೆ ನಯನಕ್ಕಾನಂದಮಂ ಪ್ರೋತ್ಕ್ರಮಂ ॥ ಗಳಭೇರೀರವಮೋಱು ಗಂಧಗಜಮುಂ ಸೇನಾಶತಂ ತನ್ನರ । ಚ್ಕಲದೊಳ್ ಘೂರ್ಣಿಸೆ ಮೇರುವಿಂ ಮಿಥಿಳೆಗೆಯ್ತಂದಂ ಸುರಾಧೀಶ್ವರಂ ॥೧೩

ಆಗಳಮರೇಂದ್ರಸೈನ್ಯಂ ।
ಪೋಗಲೊಡಂ ಪೋಗೆ ಕಳಕಳಂ ಮಧುಸಮಯಂ ॥
ಪೋಗೆ ಕಳನಿನದಮುಡುಗಿದ ।
ಕೋಗಿಲೆಯೆಂತಂತೆ ಬಿನ್ನನಿರ್ದುದಗೇಂದ್ರಂ ॥೧೪

ಪಲತೆಱದ ಪಱೆಯ ದನಿಗಳು ।
ಮುಲಿವಮರರುಮೊಡನೆ ತೊಲಗೆ ಕನಕಾಚಳಮೇಂ ॥
ಗೆಲೆವಂದುದೊ ಬಾಜಿಸುತುಂ ।
ನಿಲಿಸಿದ ಮಣಿಖಚಿತಕನಕಘಂಟಾಕೃತಿಯಂ ॥೧೫

೧. ಸೋಂಕಿನೊಳ್. ಕ॥ ೨. ಬಿನ್ನವಿ. ಗ॥

ದೆಸೆ ಭೂಷಾರುಚಿಯಿಂ [1]ಕವಿಲ್ಮಸಗುವನ್ನಂ ಭೂತಳಂ ಕೋಟ್ಗಸ।
ವರ್ಗಸವನ್ನಂ ನಿಜದಂತಿದಾನಜಳದಿಂ ವಜ್ರಾಂಶುವಿಂ ಬಲ್ಪಿಸಿ।
ಸ್ಮಸವನ್ನಂ ನಭಮಪ್ಸರೋಗಣದಲಾವಣ್ಯಾಪ್ಲವಂ ಕಾಲ್ಪರಂ।
ಮಸವನ್ನಂ ನೃಪಗೇಹದೊಳ್ಶತಮಖು ಬಂದು ಮಹೋತ್ಸಾಹದಿಂ।

ಅಂತು ದಿವಿಜಸಮಾಜಂಬೆರಸು ರಾಜಮಂದಿರಮಂ ಪೊಕ್ಕು ತನ್ನ ಬೆಸದಿಂ ಮುನ್ನವೆ ದಿವಿಜಶಿಲ್ಪಿಗಳ್ವಿರಚಿಸಿದ ಕರುಮಾಡದ ಮುಂದಣ ನಾಟ್ಯಮಂಡಪದ ಮಣಿಕುಟ್ಟಿಮದ ನಡುವಣ ಸಿಂಹಪೀಠದೊಳ್ ಬಾಳಕನನಿರಿಸಿ ।೧೭

ಅನುರಾಗಂ ಮಿಗೆ ದಿವಿಜೇಂ।
ದ್ರನಿರ್ಪುದುಂ ಕುಂಭನೃ[2]ಪತಿಯುಂ ಸತಿಯುಂ ತ।
ತ್ತನಯಮುಖದರ್ಶನೋತ್ಸುಕ।
ಮನದಾಮಂಡಪಮನೆಚ್ಚಱಿಂ ಪುಗುತಂದರ್ ।೧೮

ಅಂತು ಬಂದು ಸಿಂಹಾಸನದ ಕೆಲದ ಮಣಿಮಯಾಸನದೊಳ್ ಕುಳ್ಳಿರ್ದರ್ ।೧೯

ತನಯಮುಖಾಳೋಕನದಿಂ।
ಮನದಿಂ ನೆಲೆ[3]ವೆರ್ಚೆ ತಮಗತಿಪ್ರೇಮರಸಂ।
ನೆನೆಯಿಸಿದತ್ತಾ ಮಿಥುನಂ।
ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ ।೨೦

ಅಂತು ಸಂತೋಷದಂತನೆಯ್ದಿರ್ಪುದುಂ ।೨೧

ತ್ರಿಜಗನ್ನಾಥಂಗೆ ತಾಯ್ತಂದೆಗಳೆನಿಸಿದ ಸೈಪಿಂಗಡವಾರ್ದ[4]ರೆಂದಂ।

---

೧. ಕವಲ್ಮ. ಕ। ೨. ಪತಿಯುಂ ತತ್ಸತಿಯುಂ। ತನಯು. ಕ।
೩. ವೆರ್ಚೆ. ಕ। ೪. ರಿಂದಂ। ತ್ರಿಜ. ಗ।

ದೆ ಜಗಕ್ಕಾರಾಧ್ಯರುಂ ಪೂಜ್ಯರುಮಿವರೆನುತಂ ಕಲ್ಪಜಾಲೇವದಿಂ ಕ ।
ಲ್ಪಜದಾಮಸ್ತೋಮದಿಂ ಕಲ್ಪಜಮಣಿಮಯಭೂಷಾಕದಂಬಂಗಳಿಂ
ಕ । ಲ್ಪಜವಸ್ತ್ರಾನೀಕದಿಂದರ್ಚಿಸಿದನೊಸೆದು ಸೌಧರ್ಮಕಲ್ಪಾಮ
ರೇಂದ್ರಂ ॥ ೨೦

ಅದನಂತರಂ ॥ ೨೩

ಇನ್ನುಂ ರನ್ನದ ಪೊನ್ನ ಸೋನೆ ಸುರಿಯುತ್ತಿರ್ದಪ್ಪುದೀಗಳ್
ಸುರೇಂ । ದ್ರನ್ನಾನಾಮರಸೈನಿಕಂಬೆರಸು ಮುಂದಾರಾಧಿಸುತ್ತಿರ್ದ
ಪಂ ॥ ಮುನ್ನಾಪ್ಪುರ್ತ್ರನನಿನ್ನನಂ ಪಡೆದರೀಸ್ತ್ರೈಮಾರ್ಗ ಕೈಸಾಗು
ಮೆಂ । ದುನ್ನೂನಂ ಪೊಗಳ್ದಿತ್ತು ಪೌರಜನಮೆಲ್ಲಂ ತತ್ಪಿತೃದ್ವಂ
ದ್ವಮಂ ॥ ೨೪

ವಲವ್ರುಂ ಕಣ್ಬೆತ್ತನಿಂದ್ರುಂ ಕೆಲದೊಳೆಳಸಿ ಕುಳ್ಳಿರ್ದಳಿಂದ್ರಾಣಿ
ಸುತ್ತುಂ । ನೆಲಸಿರ್ದಲೋಕಪಾಲರ್ಶಿಶುವಿನ ಪೆಂಗಿರ್ದರ್ಸಮಸ್ತ
ಮರೇಂದ್ರರ್ ॥ ಕೆಲರಿಂದ್ರಚಾಮರಂ ಬೆಳ್ಗೊಡೆವಿಡಿದವರೆಂದಂದು ಮಾ
ತಾಡುತುಂ ಕ । ಣ್ಮಲರ್ಗಳ್ಬಳ್ದಂಗಳಂ ಬಿತ್ತರಿಸೆ ಬಳಸಿ ನೋಡಿತ್ತು
ಕಾಂತಾಕದಂಬಂ ॥ ೨೫

ಆಗಳನೇಕಮಂಗಳವಸ್ತುವಿಸ್ತೀರ್ಣಮಾಗೆ ವಿರಚಿತಜಾತಕರ್ಮೋ
ತ್ಸವಾನಂತರಂ ॥ ೨೬

ಅನಿಮಿಷನಾಯಕನಾನಂ ।
ದನರ್ತನೋತ್ಸಾಹಚಿತ್ತನೀಕ್ಷಿಸಿದಂ ಗಾ ॥
ಮಿನಿಯರ ಮುಖಾಬ್ಜಮಂ ಭೃಂ ।
ಗನಿಕಾಯಂ ಪುಡಿದುವೆನಿಸೆ ನಯನಪ್ರಭೆಗಳ್ ॥ ೨೭

೧. ದುನ್ನುನ್ನಂ. ಕ॥ ೨. ಕೆಲಗಿರ್ದ. ಕ॥

ಆಗಳವಸರವಱಿದು ತಾಳನಿವರ್ತನೆಗೆಯ್ದು ಬಂಚಪಿಂಚರದೊ
ಳುಪಾಶ್ರಯಂಬಡೆದು ವಿಂಶತಿಯತಿಪ್ರಪಂಚದೊಳ್ನಱಿದು ॥ ೨೮

ಸ್ವರಸಂಯೋಗದೊಳಾದ ರಾಗಮನಿತುಂ ದೇಶೀಯರಾಗಂಗಳುಂ ।
ಸ್ವರಭಾಷಾವಿದರಿಂದವಾದ ಪೆಱವುಂ ರಾಗಂಗಳುಂ ವ್ಯಕ್ತಮಾ ॥
ಗಿರೆ ತಜ್ಞರ್ಕಳೆದೂಗೆ ಬೇಱೆ ಪುಳಕಂ ಮೆಯ್ದೋಱೆ ಮೆಯ್ವೆರ್ಚಿ ರಾ।
ಗರಸಂ ಕಾಲ್ವೊರಮಾಗೆ ಪಾಡಿದುದು ತದ್ಗಂಧರ್ವದೇವೀಜನಂ ॥ ೨೯

ಕಾಮನ ಬಿಲ್ಲ ಜೇವೊಡೆಯ ಮೆಲ್ಲುಲಿ ಕರ್ಣರಸಾಯನಾರ್ಣವೋ।
ದ್ದಾಮರರಂಗಭಂಗದುಲಿ ಪೊಣ್ಮಿದುದೆಂಬಿನಮೋಜೆವೆತ್ತು ಗೀ ॥
ತಾಮೃತವೃಷ್ಟಿಯಂ ಕಱೆವಿನಂ ಬಹುಭೇದದ ವಸ್ತುಗೀತಿ ಕ।
ಲ್ಪಾಮರಕನ್ಯೆಯರ್ಬಿಡದೆ ತಾಳಲಯಾನುಗಮಾಗೆ ಪಾಡಿದರ್ ॥ ೩೦

ಆಸಮಯದೊಳು ಪವಾದಪರಿವಾದಕರಂ ಕೂಡಿಕೊಂಡು ॥ ೩೧

ಗತಿಭೇದಂ ಲಯಭೇದವೊಪ್ಪೆ ವಿವಿಧಾಳಂಕಾರಸಂಯೋಗವ।
ದ್ಧತಿ ಚೆಲ್ವಂ ಕುಡೆ ಚಾರಿಗಳ್ ಬಗೆವುಗಲ್ ಮಾರ್ಗಪ್ರಚಾರಂ ಸಭಾ ॥
ಶ್ರುತಿಸೌಖ್ಯಾವಹಮಾಗೆ ತೀವೆ ಮನದಿಂ ಮುಂ ಕೈಗಳಾರ್ಗಂ ಚಮ।
ತ್ಕೃತಿಯಪ್ಪಂತಿರೆ ಬಾಜಿಸಲ್ತೊಡಗಿದರ್ವಾದ್ಯಂಗಳಂ ವಾದಕರ್ ॥

ಆಪ್ರಸ್ತಾವದೊಳ್ ॥ ೩೨

ನೃತ್ಯಾರ್ಥ್ಯಂ ಪೊಸಪೇಸಿವೆತ್ತಸಿಯ ತನ್ನೊಳ್ಪೂರ್ವರಂಗಪ್ರಸಂ।
ಗೋಪೇತಾಗಳೆನಿಪ್ಪ ಮಂಗಳಪದಾಖ್ಯಾನಂಗಳಂ ಮಾಡಿ ನಾಂ ॥
ದೀಪ್ರೋಚ್ಚನಿಧಿಪೂರ್ವಕಂ ದಿವಿಜರಾಜಂ ಸೂಸಿದಂ ಕಲ್ಪವ।
ಲ್ಲೀಪುಷ್ಪಾಂಜಳಿಯಂ ಸಭಾಸದರ್ಗೆ ತೋಱಲ್ ತಾಂಡವಪ್ರಾರ್ಥಿಯಂ ॥

೧. ಗಳಾ । ಮ್ಮುರಭಾಷಾ, ಕ॥ ೨. ತಾನೆ, ಕ॥ಗ॥

ಎಸೆದಿರೆ ವೈಶಾಖಸ್ಥಾ |
ನಸೌಷ್ಠವಂ ಪಾಣಿಪಲ್ಲವದ್ವಿತಯಂ ರಂ |
ಜಿಸೆ ಕಟಿತಟದೊಳ್ ಸುರಪತಿ |
ರಸಭಾವಾಭಿನಯವೊಪ್ಪೆ ರಂಗಂಬೊಕ್ಕಂ ॥೩೫

ಅಂತು ರಂಗಮಂ ಪೊಕ್ಕು ॥೩೬

( ತ್ರಿಪದಿ )

ಭಾವಾನುಭಾವವಿಭಾವಂಗಳ್ ರಸಮನು |
ದ್ಭಾವಿಸೆ ನಿಂದ ನಿಱಸು ವಿಚಿತ್ರತೋ |
ಭಾವಹವಾಗೆ ದಿವಿಜೇಂದ್ರಂ ॥೩೭

ಅಂತು ನಿಂದು ವೈಶುವರ್ಣಾವಿರ್ಭೂತವೆನಿಸಿ ॥೩೮

ತುಱುಗಿದ ತೋಳ್ಗಳೊಳಂ ಕ |
ಣ್ದುಱುಗಲೊಳಂ ನೆಱೆದು ಮೆಱೆದು ರಸಭಾವಮನಂ |
ದಱುವತ್ತು ನಾಲ್ಕು ಹಸ್ತದ |
ತೆಱನುಮನೊರ್ಮೊದಲೆ ತೋಱಿದಂ ದಿವಿಜೇಂದ್ರಂ ॥೩೯

ಅನಂತರಂ ॥೪೦

ಅಳವಡೆ ನಿಜೋದ್ಧೃತಾಭಿನ |
ಯಲೀಲೆ ರಸವೃತ್ತಿ ತನ್ನೊಳಾರಭಟ ಮನಂ |
ಗೊಳೆ ರಂಗಮನಮರೇಂದ್ರಂ |
ಬಳಸಿದನೊಡವಳಸೆ ಜನದ ಕಣ್ಣುಂ ಮನಮುಂ ॥೪೧

ಭರತಾಗಮಕ್ಕೆ ಟೀಕಂ |
ಬರೆದಂತಿರೆ ತಾಂಡವಕ್ಕೆ ಲಕ್ಷ್ಯಮಿದೆಂಬಂ |
ತಿರೆ ದೇವಮನುಜಸಭೆಗ |
ಚ್ಚರಿ ಜಚ್ಚರೆ ದಿವಿಜನಾಯಕಂ ನರ್ತಿಸಿದಂ ॥೪೨

ಧರೆ ಕಂಪಂಗೊಂಡುದಯ್ದುಂ ಕೆಱದ ಚರಣಸಂಚಾರದಿಂದೆಂಟುವಾ ಶಾ । ಕರಿಗಳ್ ಬಾಯ್ವಿಟ್ಟುವೀರಯ್ದೆನಿಸಿದ ಭುಜವಿಕ್ಷೇಪದಿಂ ದಿಗ್ವಿ ಭಾಗಂ ॥ ಪರಭಾಗಂಬೆತ್ತುವೊಂಭತ್ತೆನಿಪ ನಯನಭೇದಂಗಳಿಂದೇಂಬಿ ನಂ ನಿ । ರ್ಭರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವ ಪ್ರಾರ್ಥಿವೆತ್ತಂ ॥೪೩

ರಾಗರಸಂ ಪೊನಲ್ವೊನಲನಟ್ಟುವಿನಂ ಚರಣಾಂಗಹಾರವಿಂ ।
ಬಾಗಿರೆ ದೃಷ್ಟಿಭೇದವುಳವಟ್ಟಿರೆ ಚಾರಿಗಳೊಪ್ಪೆ ತನ್ನೊಳಂ ।
ದಾಗಸದೊಳ್ ದಿಶಾವಳಯದೊಳ್ ಧರೆಯೊಳ್ತನತೊಂದೆ ರೂಪು ನೂ ।
ರಾಗಿರೆ ವಿಕ್ರಿಯಾವಿಭವಮುಚ್ಚರಿಯಾಗಿರೆ ಶಕ್ರನಾಡಿದಂ ॥೪೪

ಲತೆಗಳ್ದಂಗುಡಿವಿಟ್ಟು ತಟ್ಟಡರ್ದ ರಕ್ತಾಶೋಕವುಂ ವಿದ್ಯುದಾ ।
ವೃತಸಂಧ್ಯಾಂಬುದಮಂ ಮಣಿದ್ಯುತಿಲತಾಸಂಛನ್ನಮಾಣಿಕ್ಯಪ ॥
ರ್ವತಮುಂ ಪೋಲ್ತನನಂತದೇವಗಣಿಕಾಸಂತಾನಮುದ್ಬಾಹುಸಂ ।
ತತಿಯೊಳ್ ಲಾಸ್ಯಮನಪ್ಪುಕೆಯ್ದೆ ಪುರುಹೂತಂ ತಾಂಡವಕ್ರೀಡೆ ಯೊಳ್ ॥೪೫

ಎತ್ತಿದ ತೋಳೊಳುಚ್ಚಳಿಸಿ ಸೂಸದೆ ಬೀಸಿದ ಬಾಹುದಂಡ ದೊಳ್ । ಕಿತ್ತಡವಾಗದಂಗವಳನಂಗಳೊಳಲ್ಲುಗದೋಜೆವೆತ್ತು ನೇ ॥
ಪೋತ್ತಮವೇಗನರ್ತನಲಯಾನುಗವಾಗಿರೆ ವಜ್ರಲೇಪಮಂ ।
ಪತ್ತಿಸಿದಂತದೇಂ ಪದುಳವಾಡಿದುದೋ ಸುರಸುಂದರೀಜನಂ ॥೪೬

ಅಮರೇಂದ್ರಂ ಕುಡೆ ದಂಡ ।
ಭ್ರಮರಿಯನುದ್ದಂಡಬಾಹುದಂಡಂಗಳೊಳ ॥

---

೧. ದಿಟ್ಟಿ. ಕ॥ ೨. ತನಗೊಂದೆ. ಗ॥

ರ್ದಮರಿಯರೇಂ ಯಕ್ಷಾಂದೋ ।
ಳಮನಾಡುವ ಮಾಟ್ಕೆಯಿಂ ಮನಂಗೊಳಿಸಿದರೋ ॥೪೭

ಕಿವಿಗಿಂಪಂ ಕಱೆಯುತ್ತುಮಿರ್ಪ ರಸಗೀತಂ ಗೀತದೊಳ್ತೊಟ್ಟು ಪೊ।
ಣ್ಮುವ ವಾದ್ಯಂ ರಸಗೀತವಾದ್ಯವೆರಡರ್ಕಂ ನೇರ್ಪಡಂ ತೋರ್ಪ ತಾಂ।
ಡವಭೇದಂ ಕುಡೆ ದೇವಮರ್ತ್ಯಸಭೆಗತ್ಯಾನಂದಮಂ ಲೋಚನೋ ।
ತ್ಸವಮಂ ಶಕ್ರನಿನುಂಡದೇನೆಸೆದುದೋ ಸಂಗೀತಕಂ ಕೌತುಕಂ ।

ದೇವೇಂದ್ರಂ ನಿರ್ವರ್ತಿಸಾ ।
ಖ್ಯಾವಾಪ್ತಿಗೆ ಬಯಸಿ ಬಲ್ಮೆಯಂ ನೆಱೆ ಮೆಱೆದಾ ।
ದೇವನ ಮುಂದಾಡಿದನೆನ ।
ಲೇನೇಬ್ಬಿದೊ ನೃತ್ಯಫಳಮುಮಂ ನೃತ್ಯಮುಮಂ ॥೪೮

ಅಂತಮರನಾಯಕನಾನಂದನರ್ತನಮಂ ನಿರ್ವರ್ತಿಸಿ ಸಮುದಮದ
ನಮಲ್ಲಂಗೆ ಮಲ್ಲಿನಾಥನೆಂದು ಪೆಸರನಿಟ್ಟು ॥೪೯

ಮಿಸುಸುವ ಕಾಡಿಗೆಯೆಚ್ಚ್ಬವ ।
ಪೊಸವೊತಮಂ ತುಱಿಪ ಪೆಂಡಲೆಯನೂಡುವ ಪೆಱಪ್ರಂ ।
ಬೆಸದೆಡೆಗೆ ದೇವರಾಜಂ ।
ಬೆಸವೇಳ್ದಂ ಕರೆದು ಸುರಮಹತ್ತರಿಕೆಯರಂ ॥೫೦

ಅಮರಕುಮಾರರಂ ಬೆಸಕುಮಾರಕನಂ ಸಹಪಾಂಸುಕೇಳಿಯೊಳ್
ಸಮವಯಸಂ ಮನಂಗೊಳಿಸಿ ಮೇಳಿಸಲುಂ ಬಹುವಾಹನಸ್ವರೂ ।
ಪಮನನುರೂಪಮಂ ಬೆಳೆಮ ತಾಳ್ದಲುಂ ಬೆಸವೇಳ್ದು ನಾಕಲೋ
ಕಮನತಿಹರ್ಷದಿಂದ ವಿಷಯಮುಖ ನಿಮಿಷಕ್ಕೆ ಮುಟ್ಟಿದಂ ।

೧. ಸಿದುವೊ. ಕ॥

ಅಂತು ವಾಸವಂ ನಿಜನಿವಾಸಕ್ಕೆ ಪೋಪುದುಮಿತ್ತಲಮರಕಾಮಿ
ನೀಕರಸರೋಜವನರಾಜಹಂಸನೆನಿಪ ಬಾಳಕಂ ॥೫೩

ತನಗೆಱಕಮೇತಱೊಳಮಿ ।
ಲ್ಲೆನಿ[೧]ಪ್ಪುದಂ ಪೂರ್ವಸೂಚೆ[೨]ನಂಗೆಯ್ವವೊಲಂ ॥
ದನಪೇಕ್ಷಿ[೩]ತಸಕಳವಿಳೋ ।
ಕನದಿಂದುತ್ತಾನಶಯ್ಯೆಯೊಳ್ಕಣ್ಗೆಸೆದಂ ॥೫೪

ಜನನಜರಾಮೃತಿಗೊಳಗಾ ।
ಯ್ತನಿತುಂ ಜಗಮೆಂದು ಬಗೆದು ತನ್ನೊಳ್ ನಗುವಂ ॥
ತನಿಮಿತ್ತದರಸ್ಮಿತದಿಂ ।
ಜಿನಾರ್ಭಕಂ ತಾಯ ಮನಮನಿರ್ಕುಳಗೊಂಡಂ ॥೫೫

ಎನ್ನವೊಲಿಲ್ಲಮನಱಿಪದು ।
ನಿನ್ನಳವೆಳಗೇವುದೆಂದು ತೇಜೋನಿಳಯಂ ॥
ಮನ್ನಿಸನೆನೆ ಜನನಿಯು ಕೈ ।
ಯಿನ್ನಿಮಿರ್ಚಂ ಪಿಡಿಯಲೆಂದು ದೀಪಾಂಕುರಮಂ ॥೫೬

ಸುರಧಾತ್ರಿಯ ತರ್ಜನಿಯಂ ।
ಬೆರಲ್ಗಳಿಂ ಪಿಡಿದು ಕೆದಱುವಂತಿರೆ ಕೆಂದಾ ॥
ವರೆಯೆಸಱಂ ಕತ್ತುರುಣಂ ।
ಮರಕತಕುಟ್ಟಿಮದ ಮೇಲೆ ದಟ್ಟಡಿಯಿಡುವಂ ॥೫೭

ಮಣಿಘಂಟಿಕಾರವಂ ಕಿಂ ।
ಕಿಣೀರವಂ ಕಱಿಯೆ ಬೇಱೆ ಕರ್ಣಾಮೃತವ ॥

೧. ಪ್ಪುದು. ಕ॥ ೨. ಚಕಂ. ಕ॥ ೩. ದುತ್ಥಾನ. ಗ॥

ರ್ಷಣಮುಂ ಜನನೇತ್ರಾಕ |
ರ್ಷಣಮಾದುದು ತಡತಡಾದ ಜಿನಬಾಳಕನಾ |೫೮

ಧರೆಗೆ ಸುಚರಿತಸುಭಾಷಿತ |
ವೆರಡರ್ಕಂ ಗುರುವೆನಿಪ್ಪ ಮಹಿಮೆಗೆ ಕುಳಮುಂ |
ದಿರವಾದ ಶಿಶುಗಿದಾವ |
ಚ್ಚರಿಯೊ ತಳರ್ನಡೆಯ ಮುದ್ದುನುಡಿಯ ವಿಳಾಸಂ |೫೯

ಓವುವುದೆ ತನಗೆ ಸಹಜಂ |
ಜೀವಮನೆಂದಱಿವುವಂತೆ ನಡೆಗಲ್ವಂದುಂ |
ಪ್ರಾವಿನೆಸಲ್ಗಿಳ್ಕಂದವೆ |
ಜೀವಂ ನೋಯುವೆ ಜಿನಾರ್ಭಕಂ ಮೆಟ್ಟಿದೊಡಂ |೬೦

ಅಂತನತಿಶಯಮೆನಿಪ ಬಾಳಕಾಲಮನತಿಕ್ರಮಿಸಿ |೬೧

ಶಶಿಲೇಖೆ ಪೂರ್ಣಮಪ್ಪಂ |
ತೆ ಶೈಶವಂ ಪಿಂಗೆ ನಿಜಕಳಾಪರಿಪೂರ್ಣಂ |
ವಿಶದಯಶೋಭೂಷಣಮುಂ |
ದಿಶಾವಿಳಾಸಿನಿಗೆ ತತ್ಕುಮಾರಂ ಕೊಟ್ಟಂ |೬೨

ಅಂತು ನಿರಂತರೋಪಚಯಮನಪ್ಪುಕೆಯ್ದು ಕುಮಾರಕಾಲದೊಳ್
ತಾನೆ ಮಹಾವಿವೇಕನಿಧಿ ತಾನೆ ಸಮಸ್ತಕಳಾವಿಶಾರದಂ |
ತಾನೆ ಜಗಜ್ಜನಾರ್ಜಿತಶುಭಾಶುಭಕರ್ಮವಿಪಾಕವೇದಿಯೆಂ |
ಬೀನುಡಿ ಚೋದ್ಯಮಲ್ಲದೊಡವುಟ್ಟಿದುವಲ್ತೆ ಮತಿ ಶ್ರುತಾವಧಿ |
ಜ್ಞಾನಮೆನಲ್ ಪವಣ್ಬಡಿವರಾರೊ ಕುಮಾರನುದಾರವೃತ್ತಿಯಂ |

೧. ಮಲ್ಲಪೊಡ, ಕ||

ಪದವಿದ್ಯಾವಿದರರ್ಥಶಾಸ್ತ್ರನಿಪುಣರ್ಸಾಹಿತ್ಯವಿದ್ಯಾವಿಶಾ ।
ರದರಾಲೇಖನಲೇಖ್ಯಮುಖ್ಯರಿಭವಾಹಾರೋಹಕರ್ಕಾವ್ಯಕೋ ॥
ವಿದರಾಪ್ತಾಗಮದೇಶಿಕರ್ಭರತವಿದ್ಯಾವೇದಿಗಳ್ಮತ್ತಮಾ ।
ವುದನಾರ್ಬಲ್ಲರವರ್ಮನಂಗೊಳೆ ಕುಮಾರಂ ಬಲ್ಮೆಯಿಂ ಬೀಱಿದಂ ॥

ಅಱಿಯದ ವಿದ್ಯೆಯಿಲ್ಲವಱೊಳಾವುದಱೊಳ್ ನಲಿದಾಡೆ ಪೊೞ್ತು ಗಳ್ । ನೆಱಿಯುವು ಮೆಚ್ಚಿಸಲ್ನೆಱಿಯರೆನ್ನದೆ ಮೆಚ್ಚಿ ಕುಡಲ್ಕೆ ಮೇರುವುಂ ॥ ನೆಱಿಯದು ಮೆಚ್ಚಿದಂತಡವರ್ಕೀರ್ತಿಯು ದಾಂಗುಡಿಗಳ್ಗೆ ದಿಕ್ತಟಂ । ನೆಱಿಯುವೆನಲ್ಕುಮಾರನ ನೆಗೞ್ತೆ ಪೊಗೞ್ತೆಗಳುಂಬಮಲ್ಲದೇ ॥ ೬೫



ಪಲತೆಱದಿಂ ಕುಮಾರನ ಮನಂಬಡೆಯಲ್ಪರಿಚಾರಕಸುರ ।
ರ್ಕೆಲರುರಿಲಿಂಗಮಾಗಿ ಕಡಲಂ ಕಡೆವಂತೆವೊಲಾಗಿ ಕೊಳದೊ ॥
ಳ್ಕಱಸಿದ ಜೊನ್ನವಾಗಿ ಪಗಲೊಳ್ತಡವಾಡಿರುಳಾಗಿ ವಿಕ್ರಿಯಾ ।
ವಿಲಸನಮತ್ಯಪೂರ್ವಮೆನೆ ತೋಱಿದರಂತವರಿಂದ್ರ[3]ಜಾಲಮಂ ॥ ೬೬

ಮುಂತೆ ಲುಲಾಯಸಂತತಿಗಳಾಗಿ ಕರಂ ಪುಗೆ ಕೋಡುಗುಟ್ಟಿಯುಂ ।
ದಂತಿಗಳಾಗಿ ಬಂದು ಮೊಗಮಿಕ್ಕಿಯುಮಂಕದ ಮಲ್ಲರಾಗಿ ಪೊ ॥
ರ್ದುಂ ತಗರಾಗಿ ತಾಗಿಯುಮುಗುರ್ವಿನ ಲಾವಗೆಯಾಗಿ ಕಾದಿಯುಂ ।
ಶಂತಮಗಿಂತು ಚಿತ್ತಮಱಿದೋಲಗಿಪರ್ಧಿವಿಜಕುಮಾರನಂ ॥ ೬೭

ಕೆಲಬರ್ವಾಹನಮಾಗಿ ಮೆಚ್ಚಿದೆಡೆಗು[4]ಯ್ದುಂ ಗೀತವಾದ್ಯಂಗಳಂ ।
ಕೆಲಬರ್ಕೇಳಿಸಿಯುಂ ಕೆಲರ್ಕಥಕರಾಗಿರ್ದುಂ ಕೆಲರ್ನಿಂದು ಮಂ ॥
ಗಳವೃತ್ತಂಗಳನೋದಿಯುಂ ವಿಕೃತವೇಷಂಗಳ್ಮನಂಗೊಳ್ವನಂ ।
ಕೆಲರಿರ್ಪಾಡಿಯುಮಿಂತು ಮೆಚ್ಚಿಸುವರಾದೇವರ್ಜಗನ್ನಾಥನಂ ॥ ೬೮

೧. ಲ್ಲದ. ಕ ॥ ೨. ಕಾಲ. ಕ ॥ ೩. ಗೊಂಡು. ಕ ॥ ೪. ಗೊಯ್ದುಂ. ಕ ॥

ಭ್ರಮರಾಕೃತಿಯಂ ಕೈಕೊಂ ।
ಡಮರರ್ ಮಧುಮಧುರಮಂದ್ರತಾರಧ್ವನಿಯಿಂ ।
ದಮರ್ದಂ ಸಿಂಪಿಸಿ ಪುಳಕೋ ।
ದ್ಗಮಮಂ ನೃಪನಂದನಾಂಗದೊಳ್ಪುಟ್ಟಿಸಿದರ್ ॥೭೯
ಶುಕರೂಪಂ ಕೈಕೊಂಡಮ ।
ರಕುಮಾರರ್ಸಕಳಕಾವ್ಯನಾಟಕಭರತಾ ।
ದಿಕಳಾಕಳಾಪಮಂ ಪೇ ।
ಳ್ದು ಕುಮಾರನ ಬಗೆಗೆ ಬೀಱಿದರ್ಕೌತುಕಮಂ ॥೩೦

ಅಂತನೇಕವಿವಿಧವಿನೋದಂಗಳನಿಚ್ಛೆಯಱಿದು ಮೆಚ್ಚಿಸುತ್ತಮಿರೆ ॥೩೧

ಅನುಲೇಪಂ ಚಿತ್ರವಸ್ತ್ರಂ ಕುಸುಮಸಮುದಯಂ ಭೂಷಣಶ್ರೇಣಿಕಲ್ಪಾ । ವನಿಜೋತ್ಪನ್ನಂಗಳಾವಸ್ತುಗಳನನುದಿನಂ ಭಕ್ತಿಯಿಂದಟ್ಟುವಂ ವಿ । ಶ್ವನಿಳಿಂಪಾಧೀಶ್ವರಂ ತಂದವನಮರಿಯರಾನಂದದಿಂದೀವರೆಂದಂ । ದನವದ್ಯದ್ರವ್ಯಭೋಗಾನುಭವವಿಭವಮಂ ತಾಳ್ದಿದಂ ಮಲ್ಲಿನಾಥಂ ॥೩೨

ಆತಪವಾತವರ್ಷವಿಷಕಂಟಕಶಾಸ್ತ್ರಶಿಳಾಕೃಶಾನುಕ । ಸ್ತ್ರಾತುರಬಾಧೆಯುಂ ಜರೆಯುಮಿಲ್ಲ ಸಿತಕ್ಷತಜಂ ಸುವರ್ಣವ । ರ್ಣಾತಿಶಯಂ ಸುಗಂಧಶುಭಲಕ್ಷಣಸುಂದರರೂಪು ಸುಸ್ವರೋ । ಪೇತಮುಮಾನುಷಂ ಚರಮದೇಹದ ಮೆಯ್ಸಿರಿ ಮಲ್ಲಿನಾಥನಾ ॥೩೩

ಪರಮಾಯುಮಯ್ವತೈಸಾ ।
ಸಿರಬರಿಸಂ ನೀಳವಿರ್ಪತೈವಿಲ್ ಬಿಮರು ।

೧. ತಾರಾ. ಕ॥ ೨. ವಾಕ್ಯ. ಕ॥ ೩. ರಸಮಯಂ. ಗ॥ ೪. ರೂಪ. ಗ॥

ಬ್ಬರಿಸದೆನೆ ಜಿನಕುಮಾರನ |
ಪರಮೌದಾರಿಕಶರೀರಮೇನತಿಶಯಮೋ ! ||೭೪

ಇದು ಲಕ್ಷ್ಮ್ಯಂ ಲಕ್ಷಣಕ್ಕಾಗರಮಿದು ಶುಭಚಿಹ್ನಕ್ಕೆ ಸೌಂದರ್ಯಸಸ್ಯ | ಕ್ಕಿದು ಸುಕ್ಷೇತ್ರಂ ಪ್ರತಿಷ್ಠಾಮಣಿಗಿದಮೃತವಾರಾಶಿ ಗಂಭೀರನಾದ | ಕ್ಕಿದು ಪೀಯೂಷಾಂಬುದಂ ಕಾಂಚನರುಚಿಗಿದು ಸೌದಾಮಿನೀಬಂಧು | ಗಂಧ | ಕ್ಕಿದು ಮಂದಾರೋದ್ಗಮಂ ತಾನೆನೆ ತನು ಸುಭಗಾಕಾರನಾದಂ ಕುಮಾರಂ ||೭೫

ಕೆರುವಿಟ್ಟಂ ತಿಟ್ಟವಿಟ್ಟಂ ಕಡಿದು[1]ಮೆರಗಿಯುಂ [2]ಪೋಲಿಸಲ್ ಬಾರದಾಸುಂ | ದರರೂಪಂ ಕಂಡು ಕಣ್ಸೋಲ್ತೊಳಸಿ ಪೆಸಱ ಪೆಂಡಿರ್ಕುಮಾರಂ ಕರಂ ತೋ | ಳ್ಪರಗಂ ನಿಶ್ರೇಯಸಶ್ರೀವನಿತೆ ಸಮನಿಸಿ ತ್ತಾಂ[4]ತನೇಗೆಯ್ವ[3]ನೆಮ್ಮಂ | ಪುರುಷಾರ್ಥಮೊಲ್ದು ರೂಪಲ್ಲದೆ ಪೆಱವೆ ಱವು ಸೋಂಕಿಯುಂ ಕಾಣರಲ್ತೇ ||೭೬

ಕಾಂತೆಯರಂ ಕುಮಾರನ ವಿಳಾಸಮೆ ತೋಳ್ವಲಮಾಗೆ ಕಾಮನೋ | ರಂತಿಸುವಂ ಶಿರೀಷಸುಕುಮಾರಿಯರಪ್ಪುದಱಿಂದಮುರ್ಚೆಪೋ | ಪಂತಿಸಲೊಲ್ಲನಾಪರಮನಂ ಬಗೆ ಪೋಪುದು ಪುಷ್ಪಬಾಣನಿಂ | ದೆಂತಿಸುವಂ ಸ್ಮರಂ ಚರಮದೇಹಮನಾಯುಧಮುರ್ಚದಂತುಟಂ ||

[5]ದೇವರೆವೆಂಬ ದೊಡ್ಡವೆಸಱಂ ತಳೆದಿರ್ದದನುರ್ಚಿ ಪೋಗಿ ಪ |
ತ್ತಾವಧಿಯಪ್ಪಿನಂ ತಳಿರ ಪಾಸಿನ ಮೇಲೆ ಪೊರಳ್ಚಿದಂಬುಗಳ್ |
ದೇವರದೇವನಂ ನಡುವೆ ಭಂಗಮನೆಯ್ದುಗುಮೆಂದುಪಾಯದಿಂ |
ಪೂವಿನ ಬಾಣದಿಂ ಪಿಸದೆ ನಿಂದನಿದೇಂ ಮದನಂ ವಿವೇಕಿಯೋ ||೭೭

೧. ಮೆಱಗಿ. ಕ|| ಗ|| ೨. ಸೋಲಿಸಲ್. ಕ|| ೩. ನುಂತುಂ. ಗ||
೪. ಱಂ. ಗ|| ೫. ದೇವರೆಮೆಂಬ ದೊಡ್ಡಿವೆಸರಂ. ಕ|| ಗ||

ಅಂತು ಕುಮಾರಂ ಕುಮಾರಕಾಲದೊಳಮರಮಹತ್ತರಿಕಾವಿರಚಿತ ಮಜ್ಜನಭೋಜನಾದಿ ಭೋಗೋಪಭೋಗಮನಪ್ಪಿಕೆಯ್ದು ॥೭೯

ಶತಸಂವತ್ಸರಮಿಂತನಂತಸುಖದೊಳ್ ಸಂಪೂರ್ಣನಾಗಿರ್ದನಂ ।
ಸುತನಂ ನೋಡಿ ವಿವಾಹಮಂ ಸಕಳಲೋಕೋತ್ಸಾಹಮಂ ಧರ್ಮಸಂ ॥ ತತಿಯಂ ಪೆರ್ಚಿಸಲೆಂದು ಮಾಳ್ಪ ಬಗೆಯಿಂದುತ್ಕಂಠರಾದರ್ಪ್ಪಭೂ । ಪತಿಯುಂ ಕುಂಭನೃಪಾಳನುಂ ತನಯನಂತಸ್ಸಾರಮಂ ಬಲ್ಲರೇ॥

ತದನಂತರಂ ಕುಂಭವಲ್ಲಭಂ ಕುಮಾರನ ವಿಕಾರವಿರಹಿತಾಕಾರಮಂ ಮನದೆಗೊಂಡು ತನ್ನೊಳಿಂತೆಂದಂ ॥೮೧

ನನೆಯಂಬು ನಾಂಟದಂತಿರೆ ।
ಮನದೊಡವುಟ್ಟಿತ್ತು ವಜ್ರಕವಚಮೆನಿಪ್ಪೀ ॥
ಜಿನಪತಿ ದಂಪತಿಯೆನಿಪನೆ ।
ಧನಕ್ಕೆ ಮಾಣಿಕ್ಯದೀಪಮೇನೆಱಗುಗುಮೇ ॥೮೨

ಗಜಮಂ ಕಟ್ಟುವವೋಲಂ ।
ಬುಜಸೂತ್ರದಿನೀಮನೋಜವೈರಿಯ ಚೇತೋ ॥
ಗಜಮಂ ವಿಳಾಸವತಿಯರ ।
ಭುಜಲತೆಯ ತೊಡರ್ಪಿನೊಳ್ತೊಡರ್ಚುವನಾವಂ ॥೮೩

ಎರಲೆಯ ಪಿಂಡುಗಳ್ಮರುಮರೀಚಿಕೆಯಂ ಜಳಮೆಂದು ಮೋಹದಿಂ
ಪರಿವವೊಲಿಂದ್ರಿಯಂಗಳ ಸುಖಂ ಸುಖಮೆಂದು ವಿವೇಕಿಯಲ್ಲದಂ ॥
ಪರಿಗುಮನಂತಬೋಧನಿಧಿ ನಿತ್ಯಸುಖೋನ್ಮುಖನೀಕುಮಾರಕಂ ।
ಪರಿಣಯನೋತ್ಸವಕ್ಕೆ ಬಗೆದರ್ಪನೆ ದರ್ಪಕದರ್ಪಭಂಜನಂ ॥೮೪

ಮನಮೇನುಂ ಕದಡದೆ ಪಳ ।

ಕಿನಱಿಯ ಮೇಲೆಱಿದ ನೀರ ಪೋಲದಱಿಂದೀ ॥
ತನ ಬಗೆಗೆ ಮದನರಾಗಂ ।
ಜನಿಯಿಸದೆಂದುಸಿರದಿರ್ಪುದಲ್ತೆನಗನಯಂ ॥೮೫
ತನಯಂ ಪರಿಣಯನಪ್ರಾ
ಪ್ತನಾದೊಡಾತಂಗೆ ಮದುವೆಯಂ ಮಾಳ್ಪುದೆ ದಲ್ ॥
ಜನಕಂಗೆ ಕೃತ್ಯಮಾನದ ।
ನನುಷ್ಠಿಪೆಂ ತಿಳಿವೆನದಱಿನಾತನ ಬಗೆಯಂ ॥೮೬

ಎಂದು ನಿಶ್ಚಯಿಸಿ ॥೮೭
ಕುಲರೂಪಸಕಲಲಕ್ಷಣ ।
ಕಳಾಪ್ರಸನ್ನೆಯರೆನಿಪ್ಪ ನೃಪಕನ್ಯೆಯರಂ ॥
ಪಲರಂ ತರಿಸಿದನರಸಂ ।
ತಲೆದೂಗಿಸೆ ತನ್ನದಾನಸನ್ಮಾನಂಗಳ್ ॥೮೮

ಅನಂತರಂ ಗೃಹಮಹತ್ತರಂಗೆ ರಾಜಗೃಹಮಂ ಕಯ್ಗಯ್ವಂತು ಬೆಸಸುವುದುಂ ॥೮೯

ನೀಲಪ್ರಸ್ತರಿತಂ ಹರಿನ್ಮಣಿಮಯಸ್ತಂಭಾಂಚಿತಂ ಹೇಮಘಂ ।
ಟಾಲಂಭೂಷವಿಭೂಷಿತಂ ಸ್ಫಟಿಕಭಿತ್ತಿಭ್ರಾಜಿತಂ ರತ್ನದೀ ।
ಪಾಲೋಕಂ ಮಣಿತೋರಣಾರುಣರುಚಿಚ್ಛನ್ನಂ ಪತಾಕಾಪಟೀ ।
ಲೋಲಂ ಬೇಱೆ ವಿವಾಹಮಂಡಪಮದೇಂ ಚಿತ್ತಕ್ಕೆ ಗೊತ್ತಾದುದೋ ॥

ಆವಿವಾಹಮಂಡಪಮಂ ಮೋಹಮಲ್ಲನಪ್ಪ ಮಲ್ಲಿನಾಥಕುಮಾರಂ ಕಂಡು ಮುನ್ನಂ ತನ್ನ ಪುಟ್ಟಿದಪರಾಜಿತವಿಮಾನಮನವಧಿಬೋಧದಿಂ ಪಱಿದುದುಮೆ ತನಗೆ ನಿರ್ವೇಗಮಾಗೆ ॥೯೦

ಇನ್ನವರಂ ಚತುರ್ಗತಿಗಳೊಳ್ತಿರಿತಂದು ಜವಂಗೆ ಪೇಡಿಯಾ |
ದೆಂ ನೆಱಿಪಂತೆಕಂಗಿಡಿರನಾಂತವನಂ ತವೆ [೧]ಪೋಡಿ ಸೇಸೆಗೊ |
ಳ್ವಂ ನೆರೆವೆಂ ಜಯಾಂಗನೆಯೆ ಪೇೞ್ವೆನೊ ಮತ್ತಿನ ಪೆಣ್ಣನೆಂದು ತಾಂ|
ತನ್ನನೆ ತಾನೆ ಸಾಧಿಸುವ ಧೀರತೆಯಿಂ ತಳೆದಂ ಕುಮಾರಕಂ ||೯೨

ತವದ ಸುಖಂಗಳುಂ ತವದ ಮೆಯ್ಸಿರಿಯುಂ ತವದಾಯುರಬ್ಧಿ
ಯುಂ | [೨]ತವೆ ತೀರೆ ಬಿಟ್ಟು ಬಂದು ದಿವಮಂ ಜನನೀಜ[೩]ಠರಾಂಧಕೂಪ
ದೊಳ್ | ಕವಿವ ಜರಾಯುವಿಂ ಕ್ರಿಮಿಕುಳಂಗಳನಾಕುಳನಾಗಿ ಪುಟ್ಟ
ಪ್ಪೊಂ | ದುವ ಪಿರಿದೊಂದು ದಂದುಗದ ದೈನ್ಯಮನೇಂ ತಲೆದೋಱಲೀ
ವೆನೇ ||೯೩

ಮೃತಸುತನಂತೆ ದಂತಹತಿ ಪೊರ್ದದೆ ಶೂದ್ರಕನಂತೆ ಶಕ್ತಿಯಂ |
ಕಿಡಿಸದೆ ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್ |
ನಡೆಯದೆ ಪೋದೆಪೋದ ಮರದಂತೆ ಕರಂ ನರೆಯೇಱದಿಟ್ಟಮು |
ಪ್ಪಡಸದ ಮುನ್ನಮೇಕೆ ಮನುಜರ್ಮಱವಿಕ್ಕರೊ ಮೋಹಮಲ್ಲನಂ||

ಪವನಪಥದಂತೆ ಮಂದಂ |
ಶ್ರವಣೋದಯಮಾಗೆ ತನಗದಂತತೆ ರಾಜಾ |
ರಿಪೊಲಾಗೆ ಭೀತನೃಪನಂ |
ತೆ ವಿಗ್ರಹಂ ಶಿಥಿಲಮಾಗೆ ಮತ್ತೞಪುವುದೇ ||೯೪

ಜವನೇನಳ್ಕಮೆ ಪಟ್ಟನೇ ಪರಿದು ಮೇಣ್ಕಾಲಂ ಜನಂಗೆಟ್ಟನೇ |
ಕಿವಿ ಕಣ್ ನಾಲಗೆ ಮೂಗು ಮೆಯ್ ಜವಜವಕ್ಕೇಂ ಸಲ್ಲವೇ ಯೌವ
ನಂ| ತವದೇ ಕುತ್ತದ ಬಿತ್ತನೇ ಪುರಿದರೇಕೇಡಿಂಗೆ ಕೇಡಾಯ್ತು ಮಾ|
ನವರೇನೆಂದು ಜಡಾತ್ಮರೈಹಿಕಸುಖವ್ಯಾಮೋಹಮಂ ಮಾಡುವರ್ ||೯೫

೧. ನೋಡಿ. ಗ||   ೨. ತಪುತರೆ. ಕ||   ೩. ರಾಂತೆ. ಕ||

ಎಂದಪವರ್ಗಸುಖಮನಾಸೆಗೆಯ್ದು ಚತುರ್ಗತಿಯ ದುಸ್ಸ್ಥಿತಿಯನಾತ್ಮಗತದೊಳಮಿಂತೆಂದಂ ॥೯೭

[೧]ಕಡುಕೆಯ್ದಂತ[೨]ರ್ಮುಹೂರ್ತಸ್ಥಿತಿಗವಧಿಯೆನಲ್ಕುಮ್ಮಱ ಪಲ್ಯಂಬರಂಬಾ । [೩]ಬ್ವಿಡೆ ತಿರ್ಯಗ್ಜಾತಿಯಂ ಮಾನಿಸರನಱಸಿ ಕೊಲ್ವಂ ಜವಂ ಕಂಡು ಕಂಡುಂ । ಬಿಡದೇ ದುರ್ಮೋಹಮಂ ನಿರ್ವೃತಿಗೆಳಸದೆಲೇ ದೇಹಸಂಬಂಧದಿಂದಂ । ಜಡನಾದಂ ದೇಹಿ ಶೈಳೋದಕವನೆಳಸಿ ಕಲ್ಲಪ್ಪವೊಲ್ಕಾಷ್ಠಮೆಲ್ಲಂ ॥೯೮

ಪೋ ಜಡರೇಕೆ ಭಾವಿಸರೊ ಮೂತ್ರಬಿಲಂ ನೆಲೆ ಶುಕ್ಲಶೋಣಿತಂ ।
ಬೀಜಮೊಡಲ್ಗಡಂ ಕ್ರಿಮಿ ಜರಾಯು [೪]ನಿರೋಧಿಸಿ ತೀವ್ರದುಃಖಮಂ ॥
ಯೋಜಿಸುತಿರ್ಪು[೫]ದುರ್ಕಿಸುವುದೆಂಜಲೆನಲ್ಪಱವಲ್ಲಿ ವೇದನಾ ।
ಭೋಜನಮಪ್ಪ ಭವ್ಯಜನದೂಷ್ಯಮೆನಿಪ್ಪ ಮನುಷ್ಯಜನ್ಮಮಂ ॥

ಸುಡೆ ದಾವಾನಳನೊಂದನೊಂದು ತಿನೆ ಕುತ್ತಂ ಪತ್ತೆ ಕೊಂದಿಕ್ಕೈ ಕಾ । ಡೊಡೆಯುಶೀತದ ವಾತದಾತಪದ [೬]ಧಾರಾಪಾತದತ್ಯಾತುರಂ ॥ ಮಡಿವಂ ಮಾಡೆ ಕರಾಂಕುಶೋಪಹತಿ[೭]ಸಂತಾಪಕ್ಕಡರ್ವಾಗೆ ಮೂ । ಗಿಡೆ ನಿರ್ಬಂಧದಿನೇಱ್ [೮]ಪೇಱ್ ತಿನೆ ತಿರ್ಯಗ್ಜಾತಿಗಳ್ಬರ್ದುಗುಂ ॥೧೦೦

ಮತ್ತಮೀಗತಿಚತುಷ್ಟಯದೊಳುತ್ಕೃಷ್ಟಮೆನಿಸಿದ ಚತುರ್ನಿಕಾಯಾಮರರೊಳ್ ವಜ್ರಕ್ಷೇತ್ರದ ಖರಪಂಕಭಾಗದ ಭವನವಾಸಿಗಳಪ್ಪ ॥೧೦೧

ಅಸುರಾಗ್ನಿವಾತದಿಗ್ನಾ ।
[೯]ಗಸುವರ್ಣಸ್ತನಿತವಿದ್ಯುದುದಧಿದ್ವೀಪಂ ॥

೧. ಕಡಿಕೆ. ಕ॥ ೨. ಮುಹೂರ್ತಂ ಸ್ಥಿತಿ. ಗ॥ ೩. ಗಂಡರ್. ಗ॥ ೪. ನಿರೋಧಿಸೆ. ಕ॥ ೫. ದುರ್ಕಿಸುತದೆಂ. ಗ॥ ೬. ವಾರಾ. ಗ॥ ೭. ಸಂಪಾತ. ಗ॥ ೮. ತೆರೆ. ಕ॥ ೯. ಸುವರ್ಣ. ಕ॥

ಪೆಸಱಿನೆ ಭವನಾಮರಕುಳ ।
ಮೆಸೆಗುಂ ದಶವಿಧವಿಕಲ್ಪಮುಳವಡೆ ತ[1]ವೆ್ಮೊಳ್ ॥೧೦೨

ಸವಿನೋಽಲ್ಪಂ ಸಾಗರಾಂತಕ್ಕಸುರರನೆ[2]ರೆಗೊಳ್ವಂ ತ್ರಿಪಲ್ಯಕ್ಕೆ ನಾಗಾ । ನ್ವಯಮುಂ ಸಾರ್ಧದ್ವಿಪಲ್ಯಕ್ಕಳವಳಲುಱೆ ಪಾಲ್ವಂ ಸುವರ್ಣಾ[3]ನ್ವಪಾಯ ॥ ಕ್ಷಯಮುಂ ದ್ವೀಪಾಮರಾನೀಕಮನುಗಿಬಗಿಪಾಲ್ವಂ ದ್ವಿಪಲ್ಯಕ್ಕಿದೇಂ ನಿ । ರ್ದಯನೋ ಸಾರ್ಧೈಕಪಲ್ಯಕ್ಕುಱಿದಱುವರುಮಂ ನಂದೆಪ್ಪೊಯ್ವಂ ಕೃತಾಂತಂ ॥೧೦೩

ಅದಲ್ಲದೆಯುಮೀಚಿತ್ರಾಕ್ಷೇತ್ರದೊಳ್ ॥೧೦೪

ಬಗೆವಡೆ ಕಿಂಪುರುಷಮುಹೋ ।
ರಗಭೂತಪಿಶಾಚಯಕ್ಷರಾಕ್ಷಸಗಂಧ ॥
ರ್ವಗಣಂ ಕಿನ್ನರಗಣಮೆಂ ।
ಬ ಗಣಸೆಯಿಂ ವ್ಯಂತರರ್ಕ[4]ಳಂತೆಣ್ಟೆಱಂ ॥೧೦೫
ಭವನಂಗಳೊಳಂ ದ್ವೀಪಾ ।
ರ್ಣವದ ಪುರಂಗಳೊಳಮಬ್ಜವನಗಿರಿತರುವೆಂ ॥
ಬಿವಱಾವಾಸಂಗಳೊಳಂ ।
ಜವನವರಂ ಪಳತೆದಳವಿನೊಳ್ ತವೆ ತಿಂಬಂ ॥೧೦೬
ಜಳಶಸ್ತ್ರಘಾತಗರಳಾ ।
ನಳಾದಿಯಿಂ ನೆಗಱೆ ತವೆ್ಮಳಸಮಾಧಿಮಯುಂ ॥
ವಿಳಯಂ ಮನುಜಪರ್ಯಂತರ ।
ಕುಳದೊಳ್ ಜನಿಯಿಸುವರದಱನಾಗತಿ ಗತಿಯೋ ॥೧೦೭

ಅದಲ್ಲದೆಯುಂ ॥೧೦೮

೧. ತನ್ಮೊಳ್. ಗ॥ ೨. ನೆಲೆ. ಕ॥ ೩. ಸುಪರ್ಣದ್ವಪಾ. ಕ॥ ೪. ಳಂಧ. ಕ॥

ಪ್ರಹರಿಸುವಂ ವಿಧಿ ಸ್ನಾ[1]ಯಕ |
ವಿಹೀನಪಲ್ಯೋಪಮಕ್ಕೆ ಪಂಚವಿಕಲ್ಪಾ |
ವಹಮಂ ಚಂದ್ರಾದಿತ್ಯ |
ಗ್ರಹನಕ್ಷತ್ರಪ್ರಕೀರ್ಣತಾರಾಗಣಮಂ ||೧೦೯

ಪಾಳಾಗ್ರದನಿತು ಮಂದರ |
ಚೂಳಿಕೆಯಂ ಮುಟ್ಟದೆನಿಪ ಸೌಧರ್ಮೇಶಾ |
ನಾಳಯದಮರರನೇಂ ನಿ |
ರ್ಮೂಳಿಸುವನೊ ವಿಧಿ ಪಯೋಧಿಯುಗಳಾವಧಿಯೊಳ್ |

ಯಮಜಠರಾನಳಮೇನಧಿ |
ಕಮೊ [2]ಸಾಗರದೇೞಿಱಿಂತ್ಯದೊಳ್ ತವೆ [3]ಸುಟ್ಟಂ ||
ಸಮೆಯಿಪುದಣಮುಲ್ತ ಸನ |
ತ್ಕುಮಾರಮಾಹೇಂದ್ರಕಲ್ಪಜನಿತಾಮರರಂ ||೧೧೧

ಮುರಿದೇೞಿದುಯ್ವಂ ದಶಸಾ |
ಗರೋಪಮಾಯುಷ್ಯದಂತ್ಯದೊಳ್ ಕೊಲೆಗೆ ಪೊಗಂ |
ಮುರಿಯಂ ಬ್ರಹ್ಮಬ್ರಹ್ಮೋ |
ತ್ತರಕಲ್ಪಾಮರರನೇಂ ಜಮಂ ಜೆಟ್ಟಿಗನೋ ||೧೧೨

ಪಿಂತಿಕ್ಕುವಿನಂ ಪದಿನಾ |
ಲ್ಕುಂ ತೋಯಧಿಯಂ ತಗುಳ್ದು ನಡೆಗಿಡೆ ಸಾರ್ದಂ |
ದಂತಕನುಗಿಬಗಿಮಾಡ್ಪಂ |
ಲಾಂತವಕಾಪಿತ್ಥಮೆಂಬ ಕಲ್ಪಾಮರರಂ ||೧೧೩

೧. ಸಾಧಿಕೆ. ಗ|| ೨. ಸಾಗರವೇೞಿ. ಗ|| ೩. ಸುಟ್ಟಂ. ಕ||

ಆಕ್ರಮಿಸುವರಾರಂತಕ ।
ವಿಕ್ರಮಮುಂ ಷೋಡಶಾಬ್ಧಿತವೃತರೆ ನಖತೀ ॥
ಷ್ಣ್ವಕ್ರಕಚದಿಂದೆ ಸೀೞ್ವಂ ।
ಶುಕ್ರಮಹಾಶುಕ್ರಕಲ್ಪಜನಿತಾಮರರಂ ॥೧೧೪

ತೀರಲೊಡಂ ಪದಿನೆಣ್ಬಂ ।
ವಾರಾಶಿಗಳೞಿಸಿ ಕೊಲ್ವನಱುಗುಲಿ ಬಿದಿ ದು ॥
ರ್ವಾರವರಾಕ್ರಮಶಾಳಿ ಶ ।
ತಾರಸಹಸ್ರಾರಕಲ್ಪಜನಿತಾಮರರಂ ॥೧೧೫

ಗತಕಾರುಣ್ಯರಸಂ ವಿಂ ।
ಶತಿಜಳನಿಧಿ ಕಳೆಯೆ ಬಸಿಱ ಬಲ್ಗಿರ್ಚಿಂಗಾ ॥
ಹುತಿಮಾೞ್ಪನಾನತಪ್ರಾ ।
ಣತಕಲ್ಪಾಮರರನೇಂ ಜವಂ ಪಾತಕನೋ ॥೧೧೬

ದ್ವಾವಿಂಶತಿ ಪಾರಾವಾ ।
ರಾವಧಿಗೆೞ್ದುಯ್ವನಾರಣಾಚ್ಯುತಕಲ್ಪ ।
ಪ್ರಾವಿರ್ಭೂತರನೆಂದಂ ।
ದಾವೆಡೆಯುಂ ಜವನ ಧಾೞಿ ಮುಟ್ಟದದುಂಟೇ ॥೧೧೭

ಸಮೆವುದುಮಿರ್ಪತ್ತು ಮೂಱ ।
ಬ್ಧಿವೊದಲೆನಲ್ಮೂವತ್ತೊಂದುವರಮಾಯುಃ ॥
ಕ್ರಮದ ನವಗ್ರೈವೇಯಕ ।
ದಮರರುಮಂ ನೊಣೆವನೇಂ ಜವಂ ನಿರ್ಗುಣನೋ ॥೧೧೮

೧. ಪಿಡಿ. ಕ॥ ಗ॥ । ೨. ವಧಿಗಳ್ಗುಯ್ವ. ಕ॥ ೩. ನಿಷ್ಠುರನೋ. ಗ॥

ವನನಿಧಿ ಮೂವತ್ತೆರಡುಂ ।
ತನಗಾಪ್ಪೋಶೆನಮೆನಲ್ಕಿಖಾವಧಿಯುಪ್ಪಾ ॥
ತೆನು ದಿಶೆಯೊಂಭತ್ತುಱ ದಿವಿ ।
ಜನಿಕಾಯಮನಿಕ್ಕ್ಯವಂ ಜವಂ ಕ್ಷುತ್‌ಕ್ಷಾಮಂ ॥೧೧೯
ಬತ್ತಲೊಡಂ ಮೂಱುಂ ಮೂ ।
ವತ್ತುಂ ಪರಮಾಯುರರ್ಣವಂಗಳ್ಪಂಚಾ ॥
ಣುತ್ತರೆಯಹಮಿಂದ್ರರುಮಂ ।
ತುತ್ತುವನೆನೆ ಜವನ ದಾಡೆಗೊಳಗಾಗದರಾರ್ ॥೧೨೦

ಪಂಚಾಣುತ್ತರೆಯಿಂದಮಿತ್ತಲಸುರಾವಾಸಂಬರಂ ಹೀನಮು ।
ಕ್ಕ್ಯಂ ಚೆಲ್ವಿಂ ಪರಮಾಯುವಿಂದವಧಿಯಿಂ ಸಾಮರ್ಥ್ಯದಿಂ ಲೇಶ್ಯದಿಂ ॥
ಚಂಚದ್ದೇಹಮರೀಚಿಯಿಂ ಸುಖದಿನಾಹೀನತ್ವದಿಂ ಖೇದಮು ।
ಕ್ಕ್ಯಂ ಚಿತ್ತಕ್ಕದಱಂ ವಿವೇಕಿಗಮರತ್ವಂ ಹೇಯಮಾದೇಯಮೇ ॥

ಸಪ್ತಾನೀಕಿನಿಯಾಗಿಬಂದು ಬೆಸಕೆಯ್ವ ತ್ಯಂತದೈನ್ಯಂ ಮಹಾ ।
ಸುಪ್ತಿಜ್ಞಾನದಿನಾದ ಮೆಯ್ಯ ಮಱಕಂ ಸಾಮರ್ಥ್ಯಸೌಂದರ್ಯದ ॥
ವ್ಯಾಪ್ತಿಶ್ರೀ ಪರಮಾಯುವೆಂದನಿತೆಱಲ್ಪಾನಲ್ಪಸಂಕಲ್ಪಸಂ ।
ತಪ್ತಸ್ವಾಂತಮಿವೃಳ್ಪ ನಾಕವಿಭವಂ ಜ್ಯಾಯಂಗುಪಾದೇಯಮೇ ॥

ತವಿಲುಳ್ಳಿಂದ್ರಿಯಸೌಖ್ಯದಿಂ ತಣಿವೊಡೀಭೂಲೋಕಮೇಂ ನಾಕಮೇಂ । ಜವನಿಂದಪ್ಪ ಪರಾಭವಂ ಬಿಡದು ಬೆನ್ನಿಂದೆಂದೊಡೇಬಾಱ್ತಯೋ ॥ ದಿವಮಾತ್ಯಂತಿಕಸೌಖ್ಯವಲ್ಲದುದನೆಲ್ಲಿದುಂಡುಮೇನಿಲ್ಲಿ ಪು । ಟ್ಟುವುದೇ ಪುದ್ಗಲಕಾರ್ಯಮಲ್ಲದ ಶರೀರಂ ದೇವರೇಂ ಮರ್ತ್ಯರೇಂ ॥

೧. ನಿಕ್ಕಿಪಂ. ಕ॥, ನರ್ಕಿಪಂ. ಗ॥ ೨. ಲೇಶ್ಯೆಯಿಂ. ಗ॥ ೩. ತ್ಯಂಶೆ. ಕ॥ ೪. ತವಲ್. ಕ॥ ೫. ಬೆಂದೆಂವೆಂ. ಗ॥ ೬. ಮೇಱಿಲ್ಲಿ. ಗ॥ ೭. ಮರ್ತ್ಯರೇ. ಗ॥

ಅನುಭೂತಕ್ಷಣಮುತ್ತರಕ್ಷಣಮಪಾರ್ಥಂ ವರ್ತಮಾನಕ್ಷಣಂ। ತನಗಕ್ಕುಂ ಸುಖಹೇತುವೆಂದೊಡೆನಿಶಾನುಂ ಕಾಲಮಿದುರ್ಗಂ ಪ್ರಿಯೇ। ಜನಮೇಂ ಸ್ವರ್ಗದೊಳಾವುದೊಂದು ಗತಿಯೊಳ್ ಜೀವಕ್ಕೆ ಬಾಹ್ಯೇಂದ್ರಿಯ। ಕ್ಕಿನಿದೆಂಬಂತಿರೆ ತೋರ್ಪುದೇನದೆ ಸುಖವ್ಯಾಮೋಹಮಂ ಮಾಡುಗುಂ॥೧೦೫

ಅದಲ್ಲದೆಯುಮಧೋಭೂಮಿಗಳೆನಿಸಿದೇಳುಂ ನರಕಂಗಳೊಳ್॥

ಮೊದಲ ನರಕಂಗಳಯ್ದು।
ಕ್ಕಿದ ಲೋಹದ ಬೆಟ್ಟು ಕರಗುವಂತಪ್ಪತ್ಯು॥
ಷ್ಣದವದನೆ ಗಟ್ಟಮಾಲ್ಪಂ।
ತೊದವಿದ ಶೀತಳಮೆ ಕೆಳಗಣೆರಡುಂ ನರಕಂ॥೧೦೬
ಖರಪಂಕಸಲಿಲಭಾಗಂ।
ನಿರಯಕ್ಷೇತ್ರಕ್ಕೆ ಮೂದೆಜಂ ಬಿಲ ಮೂಱುಂ॥
ನರಕದೊಳಮುದಕಭಾಗಾಂ।
ತರದಲ್ಲಿಯೆ ಕಡೆಯ ನರಕದೊಳ್ನಡುವಿರ್ಕುಂ॥೧೦೭

ಆನರಕವಿವರಂಗಳೋರೊಂದರ್ಕಸಂಖ್ಯಾತಯೋಜನಮಸಂಖ್ಯವೆತ್ತಿಂದ್ರಕಂಗಳುಮಸಂಖ್ಯಾತಯೋಜನಪ್ರಮಾಣಮಪ್ಪ ಶ್ರೇಣಿಬದ್ಧಂಗಳ್ ಸಂಖ್ಯಾತಾಸಂಖ್ಯಾತಯೋಜನವಿಸ್ತೀರ್ಣಮಾದ ಪ್ರಕೀರ್ಣಕಂಗಳೆಂದು ಬೇಱೆ ಮೂಱುಂ ಪ್ರದೇಶಂಗಳಕ್ಕುಮಲ್ಲಿ॥೧೦೮

ಸಕಳಶ್ವಭ್ರಮನೆಯ್ದುಗುಂ ಪ್ರಡಿಯೆ ಚೇತೋವೃತ್ತಿಯುಂ ಕೃಷ್ಣನೀ। ಳಕಪೋತಾಶುಭಲೇಶ್ಯೆ ಬೆಂದಗುಱೆ ಬಹ್ವಾರಂಭವೊಂದಾಗೆ

ಗ. ನಳಿಸುಖ. ಕ॥ ೨. ಪುಟ್ಟ. ಕ॥ ೩. ನಾಗಂ. ಗ॥ ೪. ಮಾಱುಂ. ಗ॥ ೫. ಶ್ರೇಢೀಬದ್ಧಂಗಳಪ್ಪಸಂಖ್ಯಾ. ಕ॥ ೬. ಗಳುಮೆಂದು. ಕ॥ ೭. ಶಲ್ಯೇ. ಕ॥

ತೀ ॥ ಪ್ರಕಷಾಯಂ ತನುಭೃದ್ಗಣಂ ತನುಮನಸ್ಸಂತಾಸುರಾನ್ಯೋ ನ್ಯಘಾ । ತಕಸಂಜಾತದುರಂತದುಃಖದಹನಜ್ವಾಳಾಸಹಸ್ರಾಕುಳಂ ॥

( ತರಳವೃತ್ತಂ )

ಭ್ರಮಿಸುಗುಂ ನರಕಂಗಳೇೞಱೊಳಂ ಯಥಾ ।
ಕ್ರಮದಿನಗ್ನಿಸರೀಸೃಪಂ ವಿಹಗಂ ಭುಜಂ ॥
ಗಮುಮಿಭಪ್ಪೈರಿ ವಧೂಜನಂ ಝಷ ಮಾನವರ್ ।
ಸಮನಿಸಿದದ್ಭುತಪಾಪಕರ್ಮವಿಪಾಕದಿಂ ॥ ೧೩೧

ಆನರಕಬಿಲದ ಮೇಗಣಟ್ಟುಗಳೊಳಟ್ಟ ಜೇನ ಪುಟ್ಟಗಳನನು ಕರಿಸಿ ॥ ೧೩೨

ಕಾಕೋಳೂಕಸೃಗಾಳಬ ।
ಳಾಕೋಷ್ಟ್ರಚಮೂರುಖರಮುಖಂಗಳವೊಲ್ ನಾ ॥
ನಾಕುತ್ಸಿತಬೀಭತ್ಸತ ।
ರಾಕಾರದಲಿರ್ಪವಲ್ಲಿ ಯೋನಿಮುಖಂಗಳ್ ॥ ೧೩೩

ನಿಮಿಷಾರ್ಧಕ್ಕೆ ಮೊರ್ದಲೊಳ್ ।
ಸಮನಿಸೆ ಪರ್ಯಾಪ್ತಿ ತಮ್ಮೊಳಱಂ ತದ್ಯೋ ॥
ನಿಮುಖಂಗಳಿಂದಮಾಯುಧ ।
ದ ಮೇಲಧೋಮುಖದೆ ಬಿರ್ದು ಪೞವೞುಯುಪ್ಪರ್ ॥ ೧೩೪

ಭವಬದ್ಧವೈರಮಂ ತಿಳಿ ।
ದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ॥
ನವಖಂಡಮಾಗೆ ಮಾಳ್ಪರ್ ।
ನವನಾರಕರಂ ಪುರಾಣನಾರಕರಾಗಳ್ ॥ ೧೩೫

೧. ಸಗ್ನಿಸರಸ್ಸಪಂ. ಕ॥ ೨. ಚಮೂರ. ಕ॥ಗ॥ ೩. ದುವಿರ್ಪ. ಗ॥

(ಪೃಥ್ವೀವೃತ್ತಂ)

ಕೆಲರ್ಕೆಲರ ಬೆಂಗಳಂ ಕರುಳನುರ್ಚುವರ್ಚುರ್ಚುವರ್ ।
ಕೆಲರ್ಕೆಲರ ಕಾಲ್ಗಳಂ ಪಿಡಿದು ಬೀಸುವರ್ಕಾಸುವರ್ ॥
[೧]ಕೆಲರ್ಕೆಲರನುರ್ಕುವೆಣ್ಣೆಗಳೊಳರ್ದುವರ್ಗರ್ದುವರ್ ।
ಕೆಲರ್ಕೆಲರನಿಂತು ಹಂಚುರಱುವಾಡುವರ್ಕಾಡುವರ್ ॥೧೩೬

ಮೂವತ್ತೆರಡಾಯುಧದೊಳ ।
ಮೋವದೆ ಕೊಱೆದಿಱಿದು ಕಡಿದು ಖಂಡಿಸೆ ಕಾಣರ್ ॥
ನೋವಂ ಮಱಿದುಂ ಸುಖಸ ।
ದ್ಭಾವಮನೆಳ್ಳನಿತನಪ್ಪೊಡಂ ಕಂಡಱಿಯರ್ ॥೧೩೭

ಕಿಱುಕಿಱಿದಾಗೀಳಗೆಯೊಳ್ ।
ಕೊಱೆದೊಡೆ ಕಾವಲಿಯೊಳಟ್ಟು ಕರಿದೊಡೆ ಕೈರಂ ।
ದಱಿದೊಡೆ ತನುಸಂಧಿಗಳಂ ।
ಮುಱಿದೊಡೆ ತತ್‌ಕ್ಷಣದೆ ಮುನ್ನಿನಂತೆವೊಲಿರ್ಪರ್ ॥೧೩೮

ಕಡಿಯೆ ಕೊನರ್ವ ಕಾಲ್ ಮುಱಿಯೆ [೨]ಮೂಡುವ ಕಯ್ ಬಿಡೆ ಕೀಲಿಪೆಲ್ವು ಕೊ । ಯ್ದೊಡೆ ಕೊನೆಗೊಳ್ವ [೩]ಮೂಗುಳ ಪದಂಗೊಳೆ ಮತ್ತೆ ತೊವಲ್ವ [೪]ಪೊಯ್ದವಲ್ ॥ ಬಿಡಿಸೆ ತೆರಳ್ದು ಸಂಧಿಸುವ ಸಂಧಿಗಳರ್ಬಗಿಯಾತಿಗೆ ಪೊಟ್ಟ ಸೀ । ೞ್ದೊಡೆ ಪಳೆಯಂತೆ ಪತ್ತುವೊಡಲೇಂ ವಿಪರೀತಮೊ ನಾರಕರ್ಕಳಾ ॥೧೩೯

ಪರಿನೀರ ನಡುವನಿಱಿದಂ ।
ತಿರೆ ಖಂಡಿಸಿ [೫]ಕುಸುರಿದಱಿಯೆ ಸಣ್ಣಿಸೆ ಪಳೆಯಂ ॥

---

೧. ಕೆಲರ್ಕೆಲರಬೀರಮುಂಉರ್ಕುವ. ಕ॥ ೨. ಮೋದುವ. ಕ॥
೩. ಮೂಗುಗಿ. ಕ॥ ೪. ಪೊಲ್ದವಲ್. ಕ॥ ೫. ಕುಸಿರಿ. ಗ॥

ತಿರವಿಕ್ರಿಯಾಶರೀರಂ ।
ದೊರೆಕೊಳ್ವುದು ನಾರಕರ್ಗೆ ಪಾಪದ ಫಲದಿಂ ॥೧೪೦

ಗಂಟಲ ಬೇಗಡಂ ಮಣಿಯ ಬೇಗಡದಂತುಟೆ ಬೇಗೆಗಿರ್ಚಿದೊಂ ।
ದುಂಟೆನೆ ಪೆರ್ಚುಗುಂ ಬಸಿಱ ಕಿರ್ಚುಣಿಸುವುದುಮಿಲ್ಲ ಕೂಡೆ ಮೆ ॥
ಯ್ಗಂಟುಗಳಾಗಿ ಬಾತ ಪೆಣದಂತೆ ಕರಂ ಕೊಳೆನಾರ್ಕುಮೆಲ್ಲರುಂ ।
ಕಂಟಳವನ್ನೆಗಂ ಮುದುಪರಾಗಿ ನಪುಂಸಕರಾಗಿ ಪುಟ್ಟುವರ್ ॥೧೪೧

ವನಿತೆಯರುಂ ಪುರುಷರುಮಿ ।
ಲ್ಲ ನಪುಂಸಕರಪ್ಪ ಮೊದಲ ನಾರಕರ್ಗೆಲ್ಲಂ ॥
ತನುವಿನಿಸುದ್ಧಮೆನಿಕ್ಕುಂ ।
ಧನುವೇೞುಂ ಮೂಱು ಮೊೞನುಮಾಱುಂಗುಳಮುಂ ॥೧೪೨

ದ್ವಿಗುಣದ್ವಿಗುಣೋನ್ನತಿವೆ ।
ತ್ತು ಗೋತ್ರಮಯ್ದುಱು ಬಿಲ್ವರಂ ಕ್ರಮದಿಂ ಪೆ ॥
ರ್ಚುಗುಮುೞಿದಾಱುಂ ನರಕದೊ ।
ಳೊಗೆದವರ್ಗೊಡಲೊಡನೆ ದುಃಖಮುಂ ಪಿರಿದಕ್ಕುಂ ॥೧೪೩

ವೈತರಣೀತರಂಗಿಣಿಯ ನಂಜಿನ ನೀರ್ಗುಡೆ ಬಂದು ಪೊಕ್ಕರಂ ।
ಘಾತಿಸೆ ಪತ್ರರೂಪದಸಿಪತ್ರವನಂಗಳ ಪತ್ರಪುಷ್ಪಸಂ ॥
ಘಾತಮೆೞಲ್ದು ಜೋಲ್ದು ನಡುಕಂ ಮಿಗೆ ವಿಹ್ವಳಚಿತ್ತರಾಗಿ ಹಾ ।
ಹಾತರನಿಸ್ವನಂ ನೆಗೞೆ ನಾರಕರುಣ್ಬರಪಾರದುಃಖಮಂ ॥೧೪೪

ಕೊಲೆ ಕಡಿದಾಡೆ ಕಯ್ಗಡಿವರಿಕ್ಕುಳನೋೞ್ಪಿಡಿದೊತ್ತಿ ಕೀೞ್ವರಂ ।
ದಲಸದಸತ್ಯಮಂ ನುಡಿದ ನಾಲಗೆಯುಂ ಮಧುಮದ್ಯಸೇವೆಯೊಳ್ ॥

---

೧. ಮೆಲ್ಲಮಂ, ಕ॥ ೨. ವಿನಿಶುದ್ಧ. ಕ॥
೩. ಮೂಱುಂಗುಲಮುಂ. ಕ॥ ೪. ನಿಸ್ವರಂ, ಗ॥

ನಲಿನಲಿಯೆಂದು ಬಾಯೊಳೆಱೆವರ್ತಲೋಹಮನೇಱೆಗಾಯ್ದಯೋ ।
ಲಲನೆಯನಪ್ಪಿಪರ್ ಪೆಱರ ಪೆಂಡಿರನಪ್ಪಿದುರಃಪ್ರದೇಶಮಂ ॥೧೪೫

ಮೂವತ್ತು ಲಕ್ಕವಿವರ ।
ಲ್ಕಾವಾಸಮೆನಿಪ್ಪ ಮೊದಲ ರತ್ನಪ್ರಭೆಯೊಳ್ ॥
ಜೀವಂಗಳಯ್ದುಗುಂ ನಾ ।
ನಾವಿಧದುಃಖಾನುಭವಮನೊಂದಬ್ಧಿವರಂ ॥೧೪೬

ಲಕ್ಕಗಳಿರ್ಪತ್ತಯ್ದು ಬಿ ।
ಲಕ್ಕೆಡೆಯೆರಡನೆಯ ಶರ್ಕರಾಪ್ರಭೆಯೊಳ್ ಪಾ ॥
ಪಕ್ಕ ಗುಱಿಯಾದ ಜೀವಂ ।
ಕುಕ್ಕುಳಗುದಿಯುತ್ತುಮಿರ್ಕುಮಬ್ಧಿತ್ರಯಮಂ ॥೧೪೭

ಪದಿನಯ್ದು ಲಕ್ಕವಿವರಂ ।
ಪೊದೞ್ದ ಮೂಱನೆಯ ವಾಲುಕಪ್ರಭೆಯೊಳ್ ಪು ॥
ಟ್ಟ ದುರಂತದುಃಖದಿಂ ಜೀ ।
ವದು ಜೀವಂ ಪತ್ತುಸಾಗರಾಂತಂಬರೆಗಂ ॥೧೪೮

ಈರಯ್ದು ಲಕ್ಕವಿವರಂ ।
ದಾರುಣಮೆನಿಸಿದ ಚತುರ್ಥಪಂಕಪ್ರಭೆಯೊಳ್ ॥
ಘೋರತರದುಃಖದೊದವಿಂ ।
ದೂರಿಸುಗುಂ ದೇಹಿ ಸಾಗರಂ ಪತ್ತುವರಂ ॥೧೪೯

ಪದಿನೇೞಂಬುಧಿವರೆಗಂ ।
ಕುದಿಗುಂ ಜೀವಂಗಳಶುಭಕರ್ಮದ ಪರಿಪಾ ॥

---

೧. ಮಾ. ಕ॥ ೨. ಭೋಧಿವರಂ. ಗ॥

ಕಡೆ ಮೂಱು ಲಕ್ಕೆಬಿಲದಿಂ ।
ಪುದಿದಿರ್ದಯ್ದನೆಯದೆನಿಪ ಧೂಮಪ್ರಭೆಯೊಳ್ ॥೧೫೦
ಬಿಲನಯ್ದುಗುಂದೆ ಲಕ್ಕದ ।
ಪೊಲನಾದಾಱನೆಯ ತತ್ತಮಪ್ರಭೆಯೊಳಣಂ ॥
ನೆಲಸಿರ್ದಿರ್ಪತ್ತೆರಡುಂ ।
ಜಲಧಿವರಂ [1]ನಮೆಗುಮಱನನುಱಪ [2]ದುರಾತ್ಮರ್ ॥೧೫೧
ಕೇಳಲರಿದೆನಿಪ ಜೇವಸ ।
ದೇಟನೆಯ ಮಹಾತಮಪ್ರಭೆಯ ಬಿಲಮಯ್ದಂ ॥
ಮೇಳಸಿ ದುರಾತ್ಮನಲ್ಲಿಂ ।
ದೇಟುಂ ಮೂವತ್ತುಮೂಱುಮಂಭೋಧಿವರಂ ॥೧೫೨
ಒಡಲಿಂದಂ ಮನದಿಂದಿ ।
ರ್ಪಡೆಯಿಂದೋರೊರ್ವರಿಂದಮುಗ್ರಾಸುರರಿಂ ।
ಬೆಡರಿಪ ನೋವಿಂ ಜೇವಂ ।
ಕಡುಗೋಟಲೆವಡುಗುಮಲ್ಲಿಗುಱು ನೆಱವಿನೆಗಂ ॥೧೫೩

ಆನರಕಂಗಳೇ[3]ಟಱು ಕೆಳಗೆ ನಿತ್ಯನಿಗೋದಮೆಂಬ ನರಕವಿರ್ಪುದು ಅಲ್ಲಿ ಸೂಕ್ಷ್ಮ[4]ಬಾದರಪರ್ಯಾಪ್ತಾಪರ್ಯಾಪ್ತಕಭೇದದಿಂ ಸೂಕ್ಷ್ಮ ವನಸ್ಪತಿಕಾಯಂಗಳಂತರ್ಮುಹೂರ್ತದೊಳಗಱುವತ್ತಾಱು ಸಾಸಿರದ [5]ಮುನ್ನೂಱ ಮೂವತ್ತಾಱು ಸೂೞಲ್ಲಿಯೆ ಸಾಯುತ್ತುಂ ಪುಟ್ಟುತ್ತುಮಿರ್ಕುಂ ॥೧೫೪

ಉದಯಿಸುಗುಂ ನಿತ್ಯನಿಗೋ ।

೧. ನಮೆಗುಂ. ಗ॥ ೨. ದುರಾತ್ಮಂ. ಗ॥ ೩. ಳೇಟಱ. ಗ॥
೪. ಬಾದರಪರ್ಯಾಪ್ತಕಭೇದದಿಂ. ಕ॥ ೫. ಅಯ್ನೂಱ. ಕ॥

ದದೊಳೇಕೇಂದ್ರಿಯಪ ರ್ಯಾಪ್ತರು ಸಕಳವಿಕಳೇಂದ್ರಿಯಮಿ ॥
ಲ್ಲದಜೊಳ್ ಜೀವಂ ಕಡೆಯಿ...ದುದು ।
ಲ್ಲದ ದುಃಖಮನುಣ್ಗುಮಶುಭಕರ್ಮ... ...ದ ಫಳದಿಂ ॥೧೫೫

ಎಂದು ಚತುರ್ಗತಿಸ್ವಭಾವಮಂ ಭಾವಿಸಿ ॥೧೫೬

ಪಂಚಪಱಿವಾದಿ ಪಡೆಗುಂ ।
ಪಂಚತ್ವಮನಾವ ಗತಿಯೊಳಂ ಜವನೆಂದೇಂ ॥
ಪಂಚಶರವೈರಿ ಪಡೆದನೊ ।
ಪಂಚತ್ವಂ ಪೊರ್ದದೆನಿಪ ಪಂಚಮಗತಿಯಂ ॥೧೫೭

ಅನಂತರಂ ಭವಾಂತರಪರಿಚಿತಪರಮಾಗಮವಿಭಾಸಿಗಳುಂ ಬ್ರಹ್ಮಕಲ್ಪನಿವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಜಗತ್ರಯಜ್ಯಾಯನಭಿಪ್ರಾಯಮನವಧಿಬೋಧದಿಂದಮಱಿದು ಬಂದು ॥೧೫೮

ಅಳಿಮಾಳಾಕೀರ್ಣಕಲ್ಪದ್ರುಮಸುರಭಿಲತಾಂತಂಗಳಿಂ ಪಾದಪೀಠಸ್ಥಳಿಯಂ ಲೋಕಾಂತಿಕರ್ಪೂಜಿಸೆ ಜಿನತನುಗಂಧಕ್ಕೆ ಸೋಲ್ತಾ ಲತಾಂತಂ ॥ ಗಳ ಕಂಪಂ ತುಂಬಿಗಳ್ ಮೆಚ್ಚದೆ ಬಿಸುಡೆ ಪದಾರಕ್ತಪದ್ಮಂ ನಖಾಂಶುಚ್ಛಲದಿಂ ಮಂದಸ್ಮಿತಂಬೆತ್ತುದು ಸುಖಜನಕಂ ರಾಗಿಗಂತ್ಯಾಪಕರ್ಪಂ ॥೧೫೯

ಇರೆ ಲೋಕಾಂತಿಕದೇವರ್ ।
ಪರಿವೇಷ್ಟಿಸಿ ಮಲ್ಲಿನಾಥಜಿನನಾಥಂ ದಿ ॥
ಕ್ಕರಿಗಿರಿಗಳ್ಬಳಸಿದ ಮಂ ।
ದರಪರ್ವತದಂತೆ ಪೆಂಪನೊಳಕೊಂಡಿರ್ದಂ ॥೧೬೦

೧. ಜವನನದೆಂ, ಕ॥ ೨. ವಹ್ನ್ಯ. ಗ॥

ಅಂತಿರ್ಪುದುಂ ॥೧೬೧

ಮುಕುಳಿತಪಾಣಿಪಲ್ಲವಪುಟರ್ನಮಿತಾನನಪದ್ಮರೆಂದರಂ।
ತ್ರೆಕನಳವಂ ತ್ರಿಳೋಕದಱಿವಂ ಪರಿಭಾವಿಸಿ ದೇವ ನೀಂ ಬರಂ ॥
ಪ್ರಕೃತಿಗಳೆಣ್ಟುಮಂ ಕಿಡಿಸುವುಜ್ಜಗದೊಳ್ ತಱಿಸಂದ[1]ರಾರಲೌ।
ಕಿಕಮೆನಿಸಿತ್ತು ನಿನ್ನ ಮಹಿಮೋನ್ನತಿ ದರ್ಪಕದರ್ಪಭಂಜನಾ ॥

ನಾನಲ [2]ಬಾನಲ ನೀರಂ।
ಮೀನೊ[3]ಲ್ಗುಂ ರಾಜಹಂಸನೊ[4]ಲ್ಗುಮೆ ಮಿಥ್ಯಾ॥
ಜ್ಞಾನಿ ಭವಸುಖಮನೊಲ್ವನೊ।
ಲೇನೊಲ್ಗುಮೆ ಪರಮಪಾವನಜ್ಞಾನಪರಂ ॥೧೬೩

ಕುರುಡಂ ಕೋಲಿಂ ಚರಿಯಿಸಿ।
ಪರಿವೃತ್ತಿಯನಪ್ಪುಕೆಯ್ವವೋಲಿಂದ್ರಿಯದಿಂ॥
ದೊರೆಕೊಳ್ವಲ್ಪಜ್ಞಾನಂ।
ಮರುಳೇ ಹಿತಮಲ್ತು ನಿನಗೆ ಪರಮಜ್ಞಾನೀ ॥೧೬೪

ಎಂದವರನುಮೋದಿಸಿ ಪೋಪುದುಮಿತ್ತಲಮರಪತಿ ಚತುರ್ಣಿಕಾಯಾಮರೇಂದ್ರಪರಿವೃತಂ ಬಂದು ॥೧೬೫

ಇದು ಜನ್ಮಾಭಿಷವಕ್ಕವತ್ಯಧಿಕವೆಂಬನ್ನಂ ಸುರಶ್ರೇಣಿ ನೀ।
ಡಿದ ದುಗ್ಧಾರ್ಣವದುಗ್ಧಪೂರ್ಣಘಟಸಂಘಾತಂಗಳಂ ಕೊಂಡು ರಾ॥
ಗದ ಪೆರ್ಚಿಂದಭಿಷೇಕಮಂ ದಿವಿಜನಾಥಂ ಮಲ್ಲಿನಾಥಂಗೆ ಮಾ।
ಡಿದನೆಣ್ಟುಂ ದೆಸೆಯುಂ ಪಳಂಚಲೆವಿನಂ ಗಂಭೀರಭೇರೀರವಂ ॥೧೬೬

ಅಂತು [5]ಪರಿನಿಷ್ಕ್ರಮಣಕಲ್ಯಾಣಾಭಿಷವಣಮಂ ತೀರ್ಚಿ ॥೧೬೭

೧. ರಾರು. ಗ॥ ೨. ಲಾನಲ. ಕ॥ ೩. ನೊಯ್ಗುಂ. ಕ॥
೪. ನೊಯ್ಗುಮೆ. ಗ॥ ೫. ನಿಷ್ಕ್ರಮಣ. ಕ॥

ಚರಮಶರೀರದಂತೆ ಕಡು[೧]ಗಂಪಿದುವೇ ಕುಸುಮಾಂಗರಾಗಮಾ ।
ಭರಣಮರೀಚಿ ದೇಹರುಚಿಯಂತೆ ಮನೋಹರಮೋ ಜಿನಂಗಳ ॥
ಕರಣದ ಬಿಣ್ಪನಿತ್ತನವಿವೇಕಿ ಮರುತ್ಪತಿ ಮುಖ್ಯಮಂಗಳಾ ।
ಕರನೆನಿಸಿರ್ದ ದೇವನೊಳದೇವುದೊ ಪೇಱುಪಚಾರಮಂಗಳಂ ॥೧೬೮

ಎಂಬಿನಮಮರಪತಿ ಕಯ್ಗೆಯ್ದನಂತರಮಿಕ್ಷ್ವಾಕುಕುಳಕಮಳವನದಿನಪತಿಯೆನಿಪ್ಪ ಜಿನಪತಿ ॥೧೬೯

ಜನನೀಜನಕರನೇಗೊಳ ।
ಸಿ ನಿಖಿಳಬಂಧುಗಳನಂದೊಡಂಬಡಿಸಿದನೇ ॥
ನನವದ್ಯಚರಿತನೆಲ್ಲರ ।
ಮನಕ್ಕಮನುಕೂಲನಪ್ಪುದೊಂದಚ್ಚರಿಯೇ ॥೧೭೦

ಬಾಜಿಸೆ ಮಂಗಳಾನಕಮನಾದಿವಿಜೇಂದ್ರನ ದತ್ತಹಸ್ತದೊಳ್ ।
ರಾಜಿಸೆ ಶೋಣಮಾಣಿಕಮಳಂ ಪರಿನಿಷ್ಕ್ರಮಣೋತ್ಸುಕಂ ಮರು ॥
ದ್ವಿಜನಮಾರುತಂ ಕುರುಳನಾಡಿಸೆ ಮುಕ್ತಿವಧೂವಿವಾಹಗೇ ।
ಹಾಜೆರದಂ[೩]ತುಟಂ ಸಿವಿಗೆಯಂ ಭುವನತ್ರಯನಾಥನೇಱಿದಂ ॥೧೭೧

ಆಗಳ್ ॥೧೭೨

ನರವೃಂದಾರಕರುಂ ಖೇ ।
ಚರವೃಂದಾರಕರುಮುರಗವೃಂದಾರಕರುಂ ॥
ಸುರವೃಂದಾರಕರುಂ ತರ ।
ತರ[೪]ದಿಂ ವೈಮಧಿಕರುಯ್ವ ತೆಱದಿಂದುಯ್ದರ್ ॥೧೭೩

ಅಂತು [೫]ಬೆಳಗಲ್ಲದೆ ಬಿಸುಪಿಲ್ಲದಾದಿತ್ಯನುಮಂ ಕಾಂತಿಯಲ್ಲದ

೧. ಗಣ್ಪಿ. ಕ॥ ೨. ದಂತ. ಕ॥ ೩. ತುಟೀಂ. ಗ॥
೪. ಕಮುಯ್ವು. ಕ॥ ೫. ಬೆಳಗಿಲ್ಲದಾದಿತ್ಯನು. ಕ॥

ಅಯ್ಕಿಲಿಲ್ಲದ ಚಂದ್ರನುಮನುಯ್ವಂತೋರ್ರೊರ್ವರೇಱಡಿಯನುಯ್ವೆಡೆ
ಯೊಳ್ ॥೧೩೪

ಜವದಿಂ ಮುಯ್ವಿನೊಳಾಂತು ಕೊಂಡು ಗಗನಾಭೋಗಂಬರಂ ಕೀ
ಱಿ ಪೊ। ಱುವ ದೇವರ್ಕಳ ದಿವ್ಯಮೌಳಿಮಣಿಮಾಳಾದೀಪ್ತಿಯುಂ ದಿ
ವ್ಯರ ॥ತ್ನವಿಮಾನಪ್ರಭೆಯುಂ ಜಿನೇಂದ್ರತನುದಿವ್ಯದ್ಯೋತಿಯುಂ ಧಾ
ಱಿಮಿ। ಟ್ಟು ವಿಯಚ್ಚಕ್ರದೊಳಿಕ್ಕಿ ಮೆಟ್ಟಿದುವನಂತಾರ್ಕಪ್ರಭಾ
ಚಕ್ರಮಂ ॥೧೩೫

ಅಂತು ಗಗನಮಾರ್ಗಂಬಿಡಿಂ ನೆಗೆದು ॥೧೩೬

ಧನದಂ ಶ್ವೇತವನಕ್ಕೆ ಭೂಷಣಮೆನಲ್ ರತ್ನಾಂಶುಭಾಸ್ವನ್ನಿಕೇ।
ತನಮಂ ಮಾಡಿದನಾಗಳಲ್ಲಿಗೆ ಸುರಾಧೀಶರ್ಜಿನಾಧೀಶನಂ ॥
ಮನದಿಂ ಚೇಗಮೆನಲ್ ಜಯಂತಶಿಬಿಕಾಸ್ಕಂಧರ್ವಿಚಿತ್ರಾನಕ।
ಧ್ವನಿಗಳ್ ಘೂರ್ಣಿಸೆ ತಂದರಾರೊ ಬೆಸಕೆಯ್ವೊರ್ಪ್ಣ್ಯಸಾಮರ್ಥ್ಯದಿಂ॥

ಉಗುಳ್ದ ಪ್ರದಿಂದ್ರಚಾಪಲತೆಯಂ ನವರತ್ನವಿತಾನವಮಾಡಿದ।
ತ್ತಗರುವ ಧೂಪಧೂಮಲತೆ ತುಂಬಿಯ ಗೀತದ ಮೆಯ್ಗೆ ಲಾಸ್ಯಮಂ॥
ಪಗಲನಿರುಳ್ಗೆ ಮಾಣಿಕದ ದೀವಿಗೆ ಕೈಸೆಱೆಗೊಟ್ಟುದುತ್ಪತಾ।
ಕೆಗಳನಿಲಂಗೆ ಮಾಡಿದುವು ಮಾರ್ಗನಿರೋಧಮನಾ ನಿವಾಸದೊಳ್॥

ಅಲ್ಲಿ ॥೧೩೭

ಬಯಸಿದ ವಸ್ತುವಂ ಬಯಸಿದಾಗಳೆ ತರ್ಪುದು ದೇವಕೋಟಿ ದೇ।
ವಿಯರುವಚಾರಮಂಗಳಶತಂಗಳನಾಚರಿಪರ್ಸುರೇಶ್ವರರ್॥
ಪ್ರಿಯಪರಿಚರ್ಯೆಯಂ ಪಿರಿದು ಮಾಳ್ಪರೆನಲ್ ಪರಿಪೂರ್ಣಪುಣ್ಯಸಂ।
ಚಯನೆನಲಲ್ಲದೇವ್ರೊಗಳ್ವೆ ಮಲ್ಲಿಜಿನೇಂದ್ರಮಹಾನುಭಾವಮಂ ॥೧೪೦

೧. ನುಯ್ದ್ದಂ. ಕ॥ ೨. ಪೊಣ್ಮುಮ. ಕ॥ ೩. ನಾವರಿಪ. ಗ॥ ೪. ಪರಿದು. ಗ॥

ಅನಂತರಂ ॥೧೪೧

ಪ್ರತಿಹಾರವೃತ್ತಿಯಿಂ ಸುರ।
ಪತಿ ದೇವಾಸುರರ ನೆಗೞ್ವ ಕಳಕಳಮನುದಂ॥
ಚಿತತರ್ಜನಿಯಿಂ ನಿಯಮಿಸಿ।
ಹಿತಪರಿಚರ್ಯೋಪಚಾರಪರಿಣತಿವೆತ್ತಂ ॥೧೪೨

ಆಗಳಲ್ಲಿ ಜಿನವಲ್ಲಭಂ ಪರಿನಿಷ್ಕ್ರಮಣಮಣಿಮಂಡಪಮಧ್ಯಸ್ಥಿತ ಚಂದ್ರಕಾಂತಶಿಳಾತಳಮನಳಂಕರಿಸಿ ॥೧೪೩

ಭಾವನೆ ಶುಭಮೆನೆ ಸಮತಾ।
ಭಾವಮನೊಳಕೊಂಡು ವಸ್ತ್ರಮಾಳಾಮಣಿಭೂ॥
ಷಾವಳಿಯುಂ ನಿಜತನುವಿಂ।
ದೇವರ ದೇವಂ ತ್ರಿಸಾಕ್ಷಿಯಿಂ ತೊಲಗಿಸಿದಂ ॥೧೪೪

ಅಂತು ತೊಲಗಿಸಿ ಬದ್ಧಪಲ್ಯಂಕಾಸನಂ ಪೂರ್ವಾಭಿಮುಖನುಮಂತರ್ಮುಖನುಮಾಗಿ ॥೧೪೫

ಜಯಶಾಳಿ ನಮಸ್ಸಿದ್ಧೇ।
ಭ್ಯಯೆನುತ್ತಂ ಪಱಿಯೆ ಜಿನಕುಮಾರಂ ಕುರುಳೋ॥
ಳಿಯನತ್ತಲ್ಪಱಿದಂ ಡು।
ರ್ಜಯಮೆನಿಸಿದ ಕುಸುಮಚಾಪನೆಳನೀಗುಣಮಂ ॥೧೪೬

ಇರುಳಶ್ವಿನಿನಕ್ಷತ್ರಂ।
ದೊರೆಕೊಳೆ ಮಾರ್ಗಶಿರಶುದ್ಧದೇಕಾದಶಿಯೊಳ್॥
ಧರಣೀಶರ್ಮೂನೂರ್ವ[3]।
ರ್ವೆರಸನಘಂ ಜೈನದೀಕ್ಷೆಯಂ ಕೈಕೊಂಡಂ ॥೧೪೭

೧. ತರ್ಜಿನಿಯಿಂ. ಕ॥ ೨. ದ. ಕ॥ಗ॥ ೩. ಶಂಮೂ. ಕ॥

ಒಡನೊಡನೆ ದಿವಿಜಪತಿ ಮಣಿ ।
ಪಡಲಿಗೆಯೊಳಗಾಂತುಕೊಳ್ವುದುಂ ತೋಱುಗುರುಳ್ ॥
ತಡವಾದುವಲ್ಲಿ ಕೀಲಿಸಿ ।
ಬೆಡಂಗನೊಳಕೊಂಡ ನೀಳಮಣಿಮಾಳಿಕೆವೋಲ್ ॥೧೪೮

ಅಂತಾಂತುಕೊಂಡು ಪೋಗಿ ॥೧೪೯

ಭೋರೆನೆ ಮಂಗಳಾನಕಶತಧ್ವನಿಗಳ್ ದಿವಿಜಾಧಿನಾಯಕಂ ।
ಕ್ಷೀರಸಮುದ್ರದೊಳ್ ಕೆದಱಿ ಕಣ್ಗೆಸೆದಿರ್ದುವು ಕಾಂತಕುಂತಳಂ ॥
ತೀರತಮಾಳಪಲ್ಲವಶತಪ್ರತಿಬಿಂಬಮೊ ಭಾನುಭೀತಿಯಿಂ ।
ವಾರಿಧಿಯಂ ಶರಣ್ಬುಗುವ ಸಂತಮಸಂಗಳೊ ಪೇೞಿಮೆಂಬಿನಂ ॥೧೫೦

ಅಂತು ಪರಿನಿಷ್ಕ್ರಮಣಕಲ್ಯಾಣಮಂ ನಿರ್ವ[3]ರ್ತಿಸಿ ವಿವಿಧಾರ್ಚನೆಗಳಿಂದರ್ಚಿಸಿ ವಾಸವಂ ನಿಜನಿವಾಸಕ್ಕೆ ಪೋಪುದುಮಾಮುನೀಶ್ವರಂ ಷಷ್ಠೋಪವಾಸಿನಿಯಮನಿಯಮಿತನಾಗಿರ್ಪುದುಂ ॥೧೫೧

ಕರೆಗಣ್ಮುವ ಶಾಂತರಸಾಂ ।
ಬುರಾಶಿಯೊಳ್ ಬೆಂಡುನೆಗೆದ ಮತ್ಸ್ಯಂಗಳವೋಲ್ ॥
[4]ಅರೆಮುಗುಳ್ದ* ಕಣ್ಗಳೇಂ ಸುಂ ।
ದರಮಾದುವೊ ಮಲ್ಲಿನಾಥಜಿನಪುಂಗವನಾ ॥೧೫೨

ಮೀನಕ್ಷೋಭವಿಹೀನಮಾನಸದವೋಲಚ್ಛಾನನಂ ಮಂದರಂ ।
ತಾನೆಂಬಂತೆ ವಿನಿಶ್ಚಳಂ ತನು ಶರಚ್ಚಂದ್ರಾಂಶುವೋಲ್ ನಿರ್ಮಳ ॥
ಧ್ಯಾನಂ ಕೂಡೆ ಸಮಾಧಿಸೌಖ್ಯದೊಳಿರ್ಪನ್ನಂ ಮನಃಪರ್ಯಯ ।
ಜ್ಞಾನಂ ತನ್ಮುನಿಪಂಗೆ ಪುಟ್ಟಿದುದು ನಿರ್ವಾತಪ್ರದೀಪೋಜ್ಜ್ವಳಂ ॥

೧. ಯೊಳ್. ಕ॥ ೨. ಗೊಳೆ. ಕ॥ ೩. ರ್ತಿಸಿ ವಾಸವ. ಗ॥
೪. ರೆ ಮುಗುಳ್ದು. ಕ॥

ಅಂತು ದೀಕ್ಷಾನಂತರಂ ಚತುರ್ಥಜ್ಞಾನಧರನಾಗಿ ಪಾರಣಾದಿನದೊಳ್ ॥೧೯೪

ನಗರಾರಣ್ಯವಿಶೇಷಂ ।
ಬಗೆಗಿಲ್ಲೆನೆ[1] ಕಾಲನಿಯಮದೊಳ್ ಬನದಿಂ ಚ ॥
ರ್ಯೆಗೆ[2] ಪೊಱಮಟ್ಟಂ ಮುನಿ ತ ।
ನ್ನಗವನಮಂ ದ್ರುತವಿಳಂಬಿತಂ ಪೊರ್ದದೆನಲ್ ॥೧೯೫

ಯುಗಮಾತ್ರಕ್ಷೇತ್ರಮಂ ಕಣ್ಬರಿಕಿನೆ ನಡೆವೀರ್ಯಾವಿಶುದ್ಧಿಕ್ರಮಂ ಕೈ । ಮಿಗೆ ಮೇರುಕ್ಷ್ಮಾಚಳಂ ಬಂದಪುದೆನೆ ಮಿಥಿಳಾವೀಥಿಯೊಳ್ ಪಾದಪದ್ಮಂ ॥ ತುಗಳಂ ಪುಷ್ಪೋಪಹಾರಂ ದ್ವಿಗುಣಿಸೆ ಬಱಸಂದೆಲ್ಲರುಂ ಭಕ್ತಿಯಿಂ ಕೈ । ಮುಗಿವನ್ನಂ ನಂದಿಷೇಣಕ್ಷಿತಿಪತಿಯ ಗೃಹದ್ವಾರದೇಶಕ್ಕೆ ವಂದಂ ॥೧೯೬

ಆಗಳಾಮುನೀಶ್ವರನ ಬರವನಱಿದು ॥೧೯೭

ಒದವೃತ್ತಿರ್ವನ್ನೆಗಂ ಮಂಗಳಪಟಹರವಂ ಮಂಗಳದ್ರವ್ಯಮಂ ತಾ । ಳ್ದದ ಪುಣ್ಯಸ್ತ್ರೀಜನಂ ಸುತ್ತಿಱಿವ ಬರೆ ಗೃಹದ್ವಾರಮಂ ಬಳ್ವಿಮಿಂಚು ॥ ಪುದಿಯುತ್ತುಂ ತನ್ನ ತೊಟ್ಟಾಭರಣಕಿರಣದಿಂದರ್ಘ್ಯಪಾದ್ಯಂಗಳಂ ಕೊಂ । ಡಿದಿರ್ವಂದಂ ನಂದಿಷೇಣಂ ಜಿನನಿಗದಿತಕಲ್ಯಾಣಮಾರ್ಗಪ್ರವೀಣಂ ॥೧೯೮

ಉಪಭೋಗದ್ರವ್ಯಮಂ ಶಾಶ್ವತಮೆನಿಸಿದುವಂ ಬೇಡಿದರ್ಗೀವ[3] ಕಲ್ಪಂ । ಘ್ರುವಮಂ ದುಮೌರ್ಗಿಹಮಂ ಪುಟ್ಟಸುವ ನಿಧಿಗಳಂ ಕಂಡು

[1] ಬಗೆದಿಲ್ಲೆನೆ. ಕ॥ [2] ರಿಗೆಗೆ. ಕ॥ [3] ಬೇಡಿದಂಗೀವ. ಗ॥

ಮೋಹಾಬ್ಧಿ ಪೇಳಿಂ ॥ ದವವರ್ಗಶ್ರೀಯನೀಯಲ್ ನೆಱೆದ ಮುನಿಪದಾಂ
ಭೋಜಮಂ ಕಂಡು ಹರ್ಷಾ । ಶ್ರುಪಯಃಪೂರಂಗಳಿಂ ಪಾದ್ಯಮನೊ
ದರಿಸಿದಂ ಸೂಕ್ತಿಮುಕ್ತಾವತಂಸಂ ॥೧೯೯

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪರಿನಿಷ್ಕ್ರಮಣಕಲ್ಯಾಣವರ್ಣನಂ
ತ್ರಯೋದಶಾಶ್ವಾಸಂ ಸಮಾಪ್ತಂ.



## —ಚತುರ್ದಶಾಶ್ವಾಸಂ—

ಶ್ರೀಪದಮನೀವ ಮುನಿಪ ।
ಶ್ರೀಪದಮಂ ಪಂಚಮುಷ್ಟಿಯಿಂ ಬಂದಿಸಿ ವಾಕ್ ॥
ಶ್ರೀಪತಿ ಶಶಿವಿಶದಯಶ ।
ಶ್ರೀಪತಿ ಸಂತುಷ್ಟನಾದನಭಿನವಪಂಪಂ ॥೧

ಅಂತು ಮುನಿಪದಪಯೋಜಪಾಂಸುವಿಂ ನಿಜಲಲಾಟಪಟ್ಟದೊಳಪವರ್ಗವಿಳಾಸಿನೀವಶ್ಯತಿಳಕಮಂ ತಳೆದು ನಿಲಿಸಿ ॥೨

ಮಣಿಖಚಿತಾಸನದೊಳ್ ಮುನಿ ।
ಗಣಪತಿಯಂ ನೃಪತಿ ತಂದು ಕುಳ್ಳಿರಿಸೆ ನಭೋ ॥
ಮಣಿ ಪೂರ್ವಾಚಳಚೂಡಾ ।
ಮಣಿಯೆನಿಸಿದನೆನೆ ಪೊದಳ್ದದಪಘನಕಿರಣಂ ॥೩

ಮುನಿಮುಖ್ಯಪದಪ್ರಕ್ಷಾ ।
ಳನಾಂಬುಕಣಮುತ್ತಮಾಂಗದೊಳ್ಸೊಗಯಿಸೆ ಮು ॥
ತ್ತಿನ ಸೇಸೆಯಂತೆ ರೋಮಾಂ ।
ಚನಿಚಿತಸರ್ವಾಂಗನಾದನಭಿನವಪಂಪಂ ॥೪

ಜಳಗಂಧಾಕ್ಷತಕುಸುಮಾ ।
ವಳಿಯಿಂ ಚರುದೀಪಧೂಪಫಳದಿಂ ತ್ರಿಜಗ ॥
ತ್ತಿಳಕನನರ್ಚಿಪ ಸ್ನೈಪಂ ।
ತಳೆದನದೇನಧಿಕಪುಣ್ಯನಿಧಿಯೊ ನೃಪಾಳಂ ॥೫

೧. ಕ॥ ಪುಸ್ತಕದಲ್ಲಿಲ್ಲ. ೨. ಕ್ಷತೆ. ಕ॥

ಅಂತರ್ಚಿಸಿ ಭಕ್ತಿಭರದಿನೆಱಗಿರ್ಪುದುಂ ॥೬

ಇವು ಪಾರಿಜಾತಪಲ್ಲವ ।
ನವೋದ್ಗಮಸ್ತಬಕಮೆಂಬಿನಂ ಕರ್ಣಯುಗ ॥
ಕ್ಕವತಂಸಮಾಗೆ ಮುನಿ ಪರ ।
ಸುವುದುಂ ಪರಕೆಗಳನಾಂತನಭಿನವಪಂಪಂ ॥೭

ಅನಂತರಂ ॥೮

ಜನಪಂ ಪಾಯಸಮುಂ[1] ತಣಿ ।
ವಿನೆಗಂ ತ್ರಿಕರಣವಿಶುದ್ಧಿಯಿಂದಿಕ್ಕಿದನಾ ॥
ಮುನಿಪತಿಯು ಸಮುತ್ತಾನಿತ ।
ಮೆನಿಸಿರ್ದ ವಿಶಾಳಪಾಣಿಪಲ್ಲವಪುಟದೊಳ್ ॥೯

ಆಗಳ್ ॥೧೦

ರೈವೃಷ್ಟಿ ಕುಸುಮವರ್ಷಂ ।
ದೇವರಹೋದಾನಘೋಷಣಂ ಹಿಮಪವನಂ ॥
ದೇವಾನಕರವಮೊದವೆ ನೃ ।
ಪಾವಾಸದೊಳೊಗೆದುದಿಂತು ಪಂಚಾಶ್ಚರ್ಯಂ ॥೧೧

ಅಂತು ಮಲ್ಲಿನಾಥಮುನಿನಾಥಂ ಸಂಯಮರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಪರಸಿ ಪೋಪುದುಂ ॥೧೨

ಕಳಪುತ್ತುಂ ಭೂಪಾಳಂ ।
ನೆಲಲಂತೊಡನೊಡನೆ ನಡೆದು ಬೀಳ್ಕೊಳಿಸಿದೊಡಂ ॥
ಪೞುವಂ ಪುಗುವನ್ನಂ ಕ ।
ಣ್ಬಿೞಿವೞಿಯುಂ ಪರಿಯೆ ನಿಂದು ನೋಡುತ್ತಿರ್ದಂ ॥೧೩

೧. ಪಾ । ಪನಪುಂ. ಗ॥ ೨. ಣ್ಬಳವಳ. ಕ॥

ಯುತಿಯೊಳಳೆವಟ್ಟ ಗುಪ್ತಿ।
ತ್ರಿತಯುಮುಮಂ ಚರಮತನುವಿಳಾಸಮುಮಂ ಭೂ॥
ಪತಿ ಮಂಬಲಿಸುತ್ತುಂ ವಿ।
ಸ್ಮಿತಚಿತ್ತಂ ನಿಜನಿವಾಸದತ್ತೇೞ್ತಂದಂ॥೧೪

ಪಡೆದಂ ದಾನಮನೀಯಲಾ ಪರಮಯೋಗೀಂದ್ರಂಗೆ ರೈವೃಷ್ಟಿಯಂ। ಪಡೆದಂ ದಾನದ ಪೆರ್ಮೆಯಿಂ ಪಡೆದುದಂ ಸನ್ಮಾನದಿಂದುಕುಡಲ್॥ ಪಡೆದಂ ಬೇೞ್ಪ ಜನಕ್ಕೆ ಕೊಟ್ಟು ಜಸಮಂ ಚಂದ್ರಾರ್ಕತಾರಂಬರಂ। ಪಡೆದಂ ನೆಟ್ಟನೆ ನಂದಿಷೇಣನೆ ವಲಂ ಧನ್ಯಂ[3] ಪೆಱರ್ ಧನ್ಯರೇ॥೧೫

ಅತ್ತಲಾಶ್ವೇತವನದೊಳಾತಪೋನಿಧಿಯು ಸನ್ನಿಧಿಯೊಳ್॥೧೬
ಕರಿಗಳ್ಕೇಸರಿಗಳ ಕೇ।
ಸರಮಂ ಕರಪುಷ್ಕರಂಗಳಿಂ ತೊಡೆದುವು ಕೇ॥
ಸರಿಗಳ್ ಖರನಖರದಿನೋ।
ಸರಿಸಿದುವು ಮದೇಭಗಂಡಕಂಡೂತಿಗಳಂ॥೧೭
ಎರಲೆಯು ಕೋಡಿಂ ಕಣ್ಣಂ।
ತರಕ್ಷು ತುಱಿಸಿದುವು ನೆಱೆದು ಸಿಂಗದ ಮಱಿಗಳ್॥
ಶರಭದ ಕೆಲದೊಳ್ ನಲಿದುವು।
ನಿರವದ್ಯಚರಿತ್ರನಿರ್ದ ಋಷ್ಯಾಶ್ರಮದೊಳ್॥೧೮

ಮದವನ್ಮಾತಂಗಮಂ ಸುತ್ತಿದುವು ಪೊರಜೆಯಂ ಸುತ್ತಿದಂತಾಗೆ ಸಾರಂ। ಗದ ಕೋಡಂ ಸುತ್ತಿ ಕೊಂಡುಯ್ಯಲನೊಲೆದುವು ದೂರ್ವಾಲತಾಷಂಡದೊಳ್ ತಂ॥ ಡದಿನಾಡುತ್ತಿರ್ಪವೊಲೆಸ್ಸೇಗೆಗಳ ಮಡೆಯು

೧. ಪಟ್ಟು. ಗ॥ ೨. ಯುಂ. ಕ॥ ೩. ಧನ್ಯಪೆಱ. ಗ॥

ಕಣ್ಬೇಲಿಯುಂ ಪೊಕ್ಕುವಾಜ। ನ್ಮದ ವೈರಂ ಪಿಂಗೆ ಪುಣ್ಯಾಶ್ರಮಿಯ ಮಹಿಮೆಯಿಂ ಕ್ರೂರಕಾಳೋರಗಂಗಳ್ ॥೧೯

ಎಸಱಿಂ ಮುಟ್ಟದೆ ತುಂಬಿ ಪುಷ್ಪರಜಮಂ ಕೊಳ್ಗುಂ ಪಿಕಂ ಪಕ್ವಮಾ। ಗಿ ಸಡಿಲ್ದಲ್ಲುಗುತಿರ್ಪ ಪಣ್ಣ ರಸಮಂ ಪೀರ್ಗುಂ ರಥಾಂಗಂ ರತ॥ ವ್ಯಸನಂಗೆಟ್ಟೆಳಸಿರ್ಕುಮಂಚೆ ಸವಿಗುಂ ಸ್ವಚ್ಛಾಂಬುವಂ ಚಂಚುವಿಂ। ತ್ರಸಮಂ ಬಂಚಿಸಿ ದೇವನಿರ್ದ ಬನದೊಳ್ ಸತ್ಸೇವೆ ಸಾಮಾನ್ಯಮೇ॥೨೦

ಮತ್ತಮಾತಪೋವನದೊಳ್॥೨೧

ಸ್ಮರಚಾರಂ ಸ್ವೈರಚಾರಂ ಶಿಶಿರಮರುತನಂಭೋಜಿನೀರಾಜಿಯೊಳ್ ಸಂ। ಚರಿಸುತ್ತುಂ ಮಾಧವೀಮಂಡಪದೆಡೆಗಳೊಳಾರಯ್ಯುತುಂ ಪುಷ್ಪಲೀಲಾ॥ ಸ್ತರಣಸ್ಥಾನಂಗಳೊಳ್ ಕಾಮುಕರನಱಸುತುಂ ಬಂದು ನಿಷ್ಪನ್ನಯೋಗೀ। ಶ್ವರನಂ ತನ್ನಾಳ್ದನಂ ಕಾಮನನುಱದೆ ತಪಂಗೆಯ್ವನಂ ನೋಡಿ ಕಂಡಂ॥೨೨

ಕಂಡೀಬನಮಪ್ಪೊಡೆ ಮನೋಜರಾಜನೆಱೆವಟ್ಟು ಈಬನಮನಂಜದೆ ಪೊಕ್ಕು ವಿಜಿಗೀಷುವೃತ್ತಿಯನೇಕಾಂಗದೊಳ್ ಮೆಱೆದು ತಪೋರಾಜ್ಯಮುದದೊಳ್ಕೈಯ್ಯಱಿಯದೆ ನಿಂದನಿದನೆಮ್ಮರಸಂಗಱಿಪುವೆನೆಂದು ಬಂದು॥೨೩

ಸಾರಸಚಾರಣಸ್ತವನದಿಂ ಕಳಕೋಕಿಳನಿಸ್ವನವ್ರತೀ।
ಹಾರನಿನಾದದಿಂ ಸ್ತಬಕಮಂಗಳದರ್ಪಣದಿಂ ಶುಕಾವಳೀ॥

---

೨೦. ತ್ರಸ=ಹುಳು; ಕ್ರಿಮಿ.

---

೧. ತತ್ಸೇವೆ. ಕ॥ ೨. ಕ॥ ಪುಸ್ತಕದಲ್ಲಿಲ್ಲ. ೩. ಮಂದಯಾನಂ. ಕ॥
೪. ರಾಜ್ಯದೊಳ್ಕೆ. ಕ॥ ೫. ಭಾರಣ. ಕ॥

ತೋರಣದಿಂ ವಿಚಿತ್ರತರಪತ್ರದಿನೊಪ್ಪು[೧]ವುದಂ ಲತಾಗೃಹ।
ದ್ವಾರಮನೆಂದು ಪೊ*ಕ್ಕನಲರ್ಗೊಂಚಲೆ ದರ್ಶನವಾಳಿಗೆ ಮಾರುತಂ ॥

ಅಂತು ಪೊಕ್ಕದಱ ನಡುವಣ ದವನದ [೨]ಮರುಗದ ಮಂಡಪದ ವೇದಿಕಾಮಧ್ಯಭಾಗದೊಳ್ ॥ ೨೫

ಅಲರಂಬಂ ತಿಱುಪುತ್ತುಮೊಯ್ಯನಲರ್*ವಿಲ್ಲಂ ನೋಡಿ ಪೆರ್ಚುತ್ತುಮು। ಳ್ಕ*ಲದಂಭೋರುಹಪೀಠದೊಳ್ ನೆಲಸಿ ತನ್ನಿಂ ಸೋಂಕಿ ಕುಳ್ಳಿರ್ದಿರ್ಪೆ॥ ಪೊರ್ಲೆಯೊತ್ತಿಂ ರತಿ ಮೆಯ್ಯ[೧] [೩]ಮಾಡೆ ಪುಳಕಪ್ರೋದ್ಭೇದಮಂ [೪]ಪಾಡುತಿ। ದರ್ಳನೀಗೀತರವಕ್ಕೆ ಮೆಚ್ಚಿ ತಲೆದೂಗುತ್ತಿರ್ದನಂಗೋದ್ಭವಂ ॥ ೨೬

ಇರೆ ದಕ್ಷಿಣದೊಳ್ವಧು ಮಧು।
ವಿರೆ ವಾಮದೊಳಸಿತಸಿತಸರೋಜಾಸನದೊಳ್।
ಪರಿಜನಮನಿತುಂ ಸುತ್ತಲು।
ಮಿರೆ ತಂತಮ್ಮರ್ಪ ತಾಣದುಚಿತಾಸನದೊಳ್ ॥ ೨೭

ಅಂತಿರ್ದ ಮನಸಿಜಚಕ್ರವರ್ತಿಯನೆಯ್ದೆ ವಂದು ಸರ್ವಾಂಗಪ್ರಣಿತನಾಗಿ ತನ್ನ ಮೇಲಿಕ್ಕೊಂಡ ಸರಸಿಜಪರಾಗಪಲ್ಲವಮುಂ ಮುಖಕ್ಕೆ ಕವಿದು ॥ ೨೮

ಇದನೊಂದಂ ಕಂಡೆನಾಶ್ಚರ್ಯಮನಖಿಳಮನಾಟಂದ ನಿನ್ನೀಭುಜಾಗ। ಪರ್ದಗುಪರ್ಪಂ ದೇವ ಪುಲ್ಲಿಂ ಲಘುವೆನೆ ಬಗೆದೇಕಾಂಗನೊಳ್ಕದುಪುದ್ಯೋ। ಗದೊಳಿರ್ದಂ ಪುಷ್ಪಚಾಪಾಂಚಿತಮಧುಕರಮೌರ್ವೀಲತಾಟಂಕೃತಕ್ಕೆ। ಳ್ಕದ ಗೌರೀನಾ[೫]ಥನಿಂ ತಾನಧಿಕನಜಡನೇಗಜ್ಜಮುಂ ಪಣ್ಣಿಕೊಂಡಂ ॥ ೨೯

೧. ಪುದುಂ. ಕ॥ ೨. ಮರುವದ. ಕ॥ ೩. ಮಾಡಿ. ಕ॥
೪. ಮಾಡು. ಕ॥ ೫. ಸೇಂ. ಗ॥

ಕರಣಗ್ರಾಮಂಗಳಂ ತೊತ್ತುೞಿದುೞಿದು ಮನೋಭಂಗಮಂ ಮಾಡುವೆಂ ದೇ। ವರ ತೇಜೋರೂಪಮಂ ಕ್ರೋಧಮನಳಿಸುವೆಂ ಮಾನಮಂ ಮೀಱುವೆಂ ಸಂ॥ ಹರಿಪೆಂ ಮಾಯಾಪ್ರಪಂಚಂಗಳನದಟಲೆವೆಂ ಲೋಭಮಂ ಕಾಮನಂ ಪ್ರೋ। [1]ಬರವೇೞ್ಕುಂದೆನ್ನ[2]ನಾಳರ್ಪಿಸಿ ಪರಮತಪ್ರೋಗರ್ವದಿಂದೊರ್ವನಿರ್ದಂ ॥೩೦

ಎಂದು ಬಿನ್ನಪಂಗೆಯ್ಯಲೊಡಂ ॥೩೧

ಕಡೆಗಣ್ಕೆಂಪೇಱೆ ನಾಸಾಮುಕುಳವಲರೆ ಬಾಯ್ಕೆತ್ತೆ ಗಂಡಸ್ಥಳಂಗಳ್। ಬಿಡೆ ಘರ್ಮೋದಂಗಳಂ ಪುರ್ವಡರೆ ಪೊಡರೆ ಕಾಯ್ಪಿಂಗಡರ್ದ ಮೆಯ್ಯಂ॥ ನಡುಕಂ ಮೆಯ್ವೆರ್ಚೆ ದೂತಂ ನುಡಿದ ನುಡಿಗಳಂ ಕೇಳ್ದು ಕೋಪಾವಲೇಪಂ। ಸಿಡಿಲಂತಾಸ್ಥಾನದೊಳ್ ಗರ್ಜಿಸಿದನೊದವಿದಾಕ್ಷೇಪದಿಂದಿಕ್ಷುಚಾಪಂ ॥೩೨

ಆನತನಾಗಿ ಬೆರ್ಚೆ ಬೆಸಕೆಯ್ಯದನಾವನೊ ನಾಗಲೋಕದೊಳ್।
ಮಾನವಲೋಕದೊಳ್ ದಿವಿಜಲೋಕದೊಳೆನ್ನಲರಂಬಿವಾರನಾ॥
ಲೂನವಿಶೀರ್ಣಮಾಗಿಸದನಿಲ್ಲನಗಂ ಗಡ ವಕ್ರನೊರ್ವನೆಂ।
ಬೀನುಡಿಗೇಳ್ವೆನೆಂದು ವಿಳಯಾನಳನಂತುರಿದೆರ್ದನಂಗಜಂ ॥೩೩

ಆಗಳಂಗಜಂಗಭಿಮುಖನಾಗಿ ॥೩೪

( ರಥೋದ್ಧತೆ )

ಮಲ್ಲಿಕಾಮುಕುಳದಂತಕಾಂತಿಗಳ್ ।
ಮೆಲ್ಲಮೆಲ್ಲನೆ ಪೊದಳ್ದು ತೋರ್ಪಿನಂ ॥
ಪಲ್ಲವಾಧರದ ಮೇಲೆ ಮಾಧವೀ ।
ವಲ್ಲಭಂ ನುಡಿದ[3]ನೆರ್ದು ಮಾಧವಂ ॥೩೫

೧. ತರ. ಗ॥ ೨. ನಾದರ್ಪಿಸಿ. ಕ॥ಗ॥ ೩. ನಿರ್ದು. ಕ॥

ಅವಿಚಾರಂ ತ್ರಿಪತಾಕೆ ನಿನ್ನ ನೊಸಲೊಳ್ ತೋರ್ಪರ್ನ್ನೆಗಂ ಕೂರ್ಪ್ಪರ್ದೋ। ರ್ಪವನಾವಂ ನಿಜನಾಮಮೆಯ್ದೆ ಕಿವಿಯಂ ದಿಗ್ಮೂರ್ಧನಾಗಿರ್ದ್ದಪಾ ॥ ಧವನಿಂ ಮಾಧವನಿಂ ವಚೋಧವನಿನಾವಂ ಬಲ್ಲಿದಂ ನೀಂ ಬರಂ । ಬವರಂ ಬರ್ಕ್ಕುಮೆ ಸೋಲಿಸಲ್ಕುನಿವನಂ ಚೂತಾಂಕುರಂ ಸಾಲದೇ ॥ ೩೬

ಜಡಿದಂಜಿಸುಗುಂ ಕೋಗಿಲೆ।
ನುಡಿದಂಜಿಸುಗುಂ ಶುಕಂಗಳಂಚೆಗಳದಿರೊಳ್ ॥
ನಡೆದಂಜಿಸುಗುಂ ಲತೆಗಳ್ ।
ತೊಡರ್ದಂಜಿಸುಗುಂ ಮನೋಜ ನಿನಗಂಜದರಾರ್ ॥ ೩೭

ಅದಱಿಂ ದೇವ ನಿಜರಾಜವರಿಜನದೊಳಾರಂ ಬೆಸಸಿದೊಡಮವರೆ ಸಾಲ್ವರೇಕಾಕಿಗೆ ತಾಪಸಂಗೆ ನೀಂ ಮುನಿದು ನಡೆವನಿತುವೇಡೆಂದೊಡಾನುಡಿಯನವಕರ್ಣಿಸಿ ನನೆಗಣೆಯ ದೊಣೆಯಂ ಬಿಗಿದು ಕಂಕೆಲ್ಲೀಪಲ್ಲವದ ಕಯ್ಪೊಡೆಯುನಳವಡಿಸಿ ಸಹಕಾರಕೋರಕದಂಗುಳತ್ರಾಣಮಂ ತೊಡರ್ಚಿ ಮೃದುಮೃಣಾಳಿಕೆಯ [1]ಪಣೆಗಟ್ಟಂ ಕಟ್ಟಿ ಮಾಧವೀಮಧುಬಿಂದುವಿನ ತಿಳಕಮನಿಟ್ಟು ಮೂಱುಂ ಜಗಮನೆಱಗಿಸಿದ ತನ್ನ ತೋಳ್ವಲಮನಲ್ಲದೆ ನೆರಮನಾಸೆಗೆಯ್ಯದೆ ನಡೆವೆಡೆಯೊಳ್ ॥ ೩೮

(ಪೃಥ್ವೀವೃತ್ತಂ)

ಪದಸ್ಖಳನಮಾದುದಂಚೆಗಿದಿರೊಳ್ಪಿಕಂ [2]ವಕ್ರಮಂ।
ತೊದಳ್ನುಡಿದುದಾದುದಾಱಡಿಯೊಳಾದ ಕೋಳಾಹಳಂ ॥
ವಿದಾರಿಸಿದುವಾಮ್ರಕೋರಕಶತಂಗಳೇದುರ್ಣ್ನಯಂ।
ಪೊಡೆಱ್ದ್ದಮವರ್ಕೆ [3]ನಿಟ್ಕರಿಸದುರ್ಕಿ ಬಂದಂ ಸ್ಮರಂ ॥ ೩೯

೧. ಪಣೆಕಟ್ಟಂ. ಕ॥ ೨. ವಕ್ತ್ರಮಂ. ಗ॥ ೩. ನಿರ್ಕಲಿಸ. ಕ॥ಗ

ಅಂತು ಬಂದು ಮುನಿಪತಿಯಿರ್ದಶೋಕದ್ರುಮದ ಮುಂದಣ ತಮಾಳಷಂಡಮನೊಳಕೊಂಡು ಮಂದರಮಹೀಧರದಂತಿರ್ದ ಮುನಿಯ ಮನದ ತೆಱಪುಗಾಣದಲ್ಲಿಂ ಪೋಱಮಟ್ಟು ವಶೀಕರಣವಿದ್ಯಾದೇವತೆಗೆ ಪೊಡವಟ್ಟು ॥೪೦

ಪೂವಿನ ಬಿಲ್ಲ ಕೊಪ್ಪನೊದೆದೇಱಸಿ ತಾವರೆನೂಲ ನಾರಿಯಂ ।
ಜೇವೊಡೆಗೆಯ್ದು ಪೊಗಣೆಗಳಯ್ದುಮನೊರ್ಮೆಯೆ ಪೂಡಿಕೊಂಡು[1]
ಕ ॥ ರ್ಣಾವಧಿಯಾಗೆ ತೀವಿ ತೆಗೆದುದ್ಧತನೆಂತುಮಸಾಧ್ಯಮಪ್ಪುದಂ ।
ಭಾವಭವಂ ನಿರೀಕ್ಷಿಸಿದನಾಮುನಿಮುಖ್ಯನ ಚಿತ್ತಲಕ್ಷ್ಯಮಂ ॥೪೧

ಅಂತು ನೋಡಿ ನಡುವಗಲಿನಾದಿತ್ಯನಂ[2] ನೋಡಿದಂತಸರವಸರಂ ಬಡೆಯುದೆ ॥೪೨

ಚರಮಶರೀರಮಂ ನಡುವ ಕಯ್ದುಗಳೆಲ್ಲ ಮನಕ್ಕೆ ವಜ್ರಮಂ ।
ಜರವೊಡಮೃಟ್ಟದಂತಿಸುವೆನಾವುದನೆಂದು ಮನೋಭವಂ ಭಯ ॥
ಜ್ವರವಶವರ್ತಿಯಾಗಿ ನಡುಗುತ್ತಿರೆ ದಕ್ಷಿಣವಾಮಪಾಣಿಗಳ್ ।
ಪರವಶಮಾಗೆ[3] ಬಿರ್ದಪ್ಪು ಲತಾಂತಶರಂಗಳುಮಿಕ್ಷುಚಾಪಮುಂ ॥೪೩

ಬಿದಿರೊಳ್ಪುಟ್ಟದ ಕಿಚ್ಚಿನಂತೆ ಸುಡೆ ತನ್ನಂ[4] ತನ್ನ ಕೋಪಾನಳಂ ।
ಮದನಂ ಮುನ್ನಮೆ ಬೆಂದು ತನ್ಮುನಿಯ ಬೋಧಾಳೋಕಸಾಧ್ಯಾಂಬು
ಪಾ ॥ ರದಯಾವರ್ಷಣದಿಂ ಕ್ಷಣಂ ತಡೆದನೇ ತಣ್ಣೀರ್ಗಳಿಂ ಬೇವ
ಸು । ಣ್ಣದ ಕಲ್ಲಂತಿರೆ ಬೆಂದನುಣ್ಮೆ ಸುರಪುಷ್ಪಾಸಾರಭೇರೀರವಂ ॥

ಮದನಂ ಶ್ರೀಮಲ್ಲಿಭಟ್ಟಾರಕನ ವಿಮಳಬೋಧಾನಳಜ್ವಾಳೆಗಳ್
ಸೋಂ । ಕದ ಮುನ್ನಂ ತತ್ತಪೋರಾಶಿಗೆ ಪುಲಿವರೆದತ್ತುಂ[5]ಬಿನಂ

೧. ಯಾಗಿ. ಕ॥ ೨. ನಡುಪಗಲಾದಿತ್ಯ. ಕ॥ ೩. ಗಿ. ಗ॥
೪. ತನ್ನಿಂ. ಕ॥ ೫. ವರದ. ಕ॥

ಬೞಿಯಾಗಿ ॥ ಪೃದುವಾಗಳ್ ಪೋದಿಕೊಂಡಳ್ ರತಿ ಮತಿಮಱ
ದಳ್ ಮೆಯ್ಯನೀಡಾಡಿದಳ್ ಕೂ । ಳ್ಗುದಿಗೊಂಡಳ್ ಕಣ್ಣ ನೀರ್ಗಳ್
ತೆರೆಮಸಗುವಿನಂ ಮಾಣದಟ್ಟುಳ್ ಚಿಮುರ್ದಳ್ ॥೪೫

ಪುಲಿಯುಂ ಪುಲ್ಲೆಯುಮಾದಿಯಾಗೆ ಭವಬದ್ಧಕ್ರೋಧನುಂ ಕೋ
ಳ್ಮೃಗಂ । ಪಲವುಂ ಬಿಟ್ಟವು ತನ್ನ ಸನ್ನಿಧಿಯೊಳೀಶಾಂತಾತ್ಮನೆತ್ತೆ
ನ್ನಕಾ ॥ ದಲನಂ ಮನ್ಮಥನಂ ತೃತೀಯನಯನಕ್ಕಾಪೋಶನಂಮಾ
ಳ್ಪುದೆ । ತ್ತಲೆನುತ್ತುಂ ಪಲವಂ ಪಲುಂಬಿ ರತಿ ಹಾಹಾಕ್ರಂದನಂ
ಮಾಡಿದಳ್ ॥೪೬

ಒಱವಱಬತ್ತೆ ಬಾಯ್ ಬೆರಲ ಬಾಸುಳ ಪದ್ಧತಿ ಮಧ್ಯದೊಳ್ಪಗಂ ।
ಡಿಱಿದಿರೆ ಕಣ್ಣ ನೀರ್ಗಳ ಪೊನಲ್ಕರೆಗಣ್ಮೆ ಕಪೋಳದೊಳ್ ಬಯ ॥
ಲ್ದೊಱಿಯನೊಡರ್ಚೆ ಶೋಕರಸದಿಂ ರತಿ ವಿಹ್ವಳೆ ಮುಚ್ಚೆವೋ
ಗಿಮೆ । ಯ್ಯೞಿಯುಳ್ ಜೋಗಿ ಮೂಱನೆಯ ಕಣ್ಣುರಿಯಿಂ ಸುಡೆ
ಕಾಮದೇವನಂ ॥೪೭

ಆಲಿಪರಾರೊ ತುಂಬಿಗಳ ಗೀತಮನುನ್ಮದರಾಜಹಂಸಲೀ ।
ಲಾಲಸಯಾನಮಂ ಬಯಸಿ ನೋೞ್ಪವರಾರೊ ಬಸಂತನಿರ್ಪನಾ ॥
ರೋಲಗದೊಳ್ ವಶೀಕರಣಸಾಯಕದಿಂ ಭುವನತ್ರಯಂಗಳಂ ।
ಸೋಲಿಪರಾರೊ ನೀಂ ಪುಗೆ ಯಮಾನನಮಂ ರತಿಜೀವಿತೇಶ್ವರಾ ॥೪೮

ಬಿರಿಮುಗುಳ್ಗಳ್ ಕೂರ್ಗಣೆಗಳಪ್ಪವೊ ಕಬ್ಬಿನ ಬಿಲ್ಲನಾ
ನೋ । ನರಿಸುವನಾರ ಮುಂದೆ ಪರಿಗುಂ ಮಕರಧ್ವಜಮಾರೊ ಮಾ

೧. ಗಿ. ಕ॥ ೨. ಕೋಳ್ಮೃ. ಕ॥ಗ॥ ೩. ಪಲವುಂ. ಗ॥
೪. ಮೂರ್ಛೆವೋಗ. ಕ॥ ೫. ಕಣ್ಕಿಱಿಯಿಂ. ಗ॥ ೬. ಶನಾ. ಕ॥

ತುವರ್ । ಸರಸಿಜಸೂತ್ರದಿಂ ದೊಣೆಯುಮಂ ರತಿ ಲಾಸ್ಯಮನಾರ್ಗೆ
ತೋರ್ಪಳಾ । ರರಗಿಳಯೋದನಾರಿಪರೊ ನೀಂ ಗತಜೀವಿತನಾಗೆ
ಮನ್ಮಥಾ ॥೪೯

ನೀರಸನಪ್ಪ ತಾಪಸನ ತೋಟದೊಳೀವನದೃಶ್ಯವಾಗೆ ಸಂ ।
ಸಾರಮಸಾರವಾದುದಬಳಾಜನಮೀ ಮುಖಚಂದ್ರಚಂದ್ರಿಕಾ ।
ಸಾರದರಸ್ಮಿತಾಮೃತಘನಸ್ತನಕಾಂಚನಕುಂಭಪೂರ್ಣಶೃಂ ।
ಗಾರರಸಂಗಳಿಂ ಮಗುಳೆ ಪುಟ್ಟಿಸಲಾಗದೆ ಕಾಮದೇವನಂ ॥೫೦

ಎನ್ನ ಕುರುಳ್ಗಳಂ ತಳದೊಳೊತ್ತದೆ ಹೇಮಸರೋಜರೇಣುವಿಂ ।
ದೆನ್ನ ಲಲಾಟಪಟ್ಟಿಕೆಗೆ ಬೊಟ್ಟಿಡದುತ್ಪಳಪತ್ರಭಂಗದಿಂ ॥
ದೆನ್ನ ಕದಂಪನರ್ಚಿಸದೆ ನಿನ್ನ ಮನೋನಯನಕ್ಕೆ ತಳ್ಪವಾ ।
ದೆನ್ನನಗಲ್ದು ನೀಂ ಕಳಿಯೆ ಮನ್ಮಥ ಬೆನ್ನನೆ ಬಾರದಿರ್ಪನೇ ॥೫೧

ಎಂದು ಶೋಕಶಂಕುಪಾತದಿಂದಱಿಯೆ ನೊಂದು ॥೫೨

ಸ್ಮರನ ವಿಯೋಗದೊಳ್ ನೆಗೆದ ಶೋಕದ ದಳ್ಳುರಿ ಸುತ್ತಿ ಮುತ್ತೆ
ಮೆಯ್ । ಪರವಶಮಾಗೆ ಮೋಹಿಸೆ ಮನಂ ನಯನಂ ನಸುಮುಚ್ಚೆ
ವಕ್ತ್ರಮಾ ॥ ಗಿರೆ ಗಳಕಂದಳಂ ರತಿಗುಸಿರ್ ತವೆ ಪೂವಿನ ಕೆಂಪು ಪಿಂಗು
ವಂ । ತಿರದಸು ಪೋದುದೋಪರೊಡೆಸಾವುದು ಸೈಪಿನೊಳಲ್ಲದ
ಕ್ಕುಮೇ ॥೫೩

ಅಂತು ॥೫೪

ಅವಗುಣನೆನಿಪ್ಪ ಕಾಮಂ ।
ಗವಸಾನಮನೀಯೆ ರತಿಯುಮೊಡನಱಿಯೆ ಮುನಿ ।

೧. ಗುಣಮಯಂ. ಗ॥ ೨. ಸಾಪದೆ. ಕ॥ ೩. ಮೆನಿಪ್ಪಕಾಮ । ಕ್ಕನ. ಕ॥

ಪ್ರವರಂ ನಿಷ್ಕಾಮಂ ಕ।
ರ್ಮರ್ಮವೆಣ್ಬುಮಂ ನೆಱಿಯೆ ಕಿಡಿಸಲುದ್ಯತನಾದಂ ॥೫೫

ಆಗಿ ನಿಜನಿಕಟರರಕ್ತಾಶೋಕಪಲ್ಲವಪ್ರತಿಬಿಂಬಶೋಣಿಮದಿಂ ಮಾಣಿಕ್ಯಶಿಲಾತಳದಂತಿರ್ದ ಚಂದ್ರಕಾಂತಶಿಲಾತಳದೊಳ್ ನಿಬದ್ಧಪಲ್ಯಂಕಾಸನನುಂ ಪೂರ್ವಾಭಿಮುಖನುಮಾಗಿ ॥೫೬

ನಯನಂ ನಾಸಾಗ್ರದೊಳ್ ಕೀಲಿಸೆ ನೆಲಸೆ ಮರಲ್ದಂಕದೊಳ್ ಪಾಣಿಪದ್ಮ। ದ್ವಯಮೇಕಾಗ್ರಂ ಮನಂ ಭ್ರೂಯುಗಳದ ನಡುವಂ ಪೊರ್ದೆ ದೇಹಂ ಸುವರ್ಣಾ॥ ದ್ರಿಯುವ್ರೊಲ್ ನಿಷ್ಕಂಪಿತಂ ಕಣ್ಗೆಸೆಯೆ ಕುಸಿಯೆ ಬಾಹ್ಯೇಂದ್ರಿಯಂ ಬಾಹ್ಯಸಾಮ। ಗ್ರಿಯೊಳವ್ಯಗ್ರಪ್ರತಿಷ್ಠಾಪರನೆನಿಸಿದನೇಕಾಂತದೇಶಂ ಮುನೀಶಂ ॥೫೭

ಅಂತು ಬಹಿಸ್ಸಾಮಗ್ರಿಗ।
ಳಂ ತಳೆದು ವಿಶುದ್ಧಸಿದ್ಧಪದದೊಳ್ ಮನಮಂ ।
ಸಂತಮಿರಿಸಿದನಿದೇನುಪ।
ಶಾಂತಾತ್ಮನೊ ಜಗದಭಿಖ್ಯನಾಮುನಿಮುಖ್ಯಂ ॥೫೮

ವೃತ್ತಂ ॥೫೯

ಅವಗಹನಶಕ್ತಿಬೋಧಾ।
ವಿವರ್ಜನಂ ಗುರುಲಘುತ್ವಬಾಧ್ಯತೆ ಸೂಕ್ಷ್ಮ।
ತ್ವಮನಂತಚತುಷ್ಟಯಮುಂ।
ಬಿಪೆಣ್ಬುಮಂ ನೆನೆದು ಸಿದ್ಧಗುಣಮಂ ಮನದೊಳ್ ॥೬೦

೧. ರಧಿ. ಕ॥ ೨. ನಿಜಬದ್ಧ. ಕ॥ ೩. ವಾರ್ನುಮುಖನಾಗಿ. ಕ॥
೪. ಕಾಂಗ. ಕ॥ ೫. ಬಾಧಾ। ನಿ. ಕ॥

ಪರಮಂ ಪ್ರೀಣಿತವಸ್ತು ।
ಸ್ವರೂಪಮಂ ನವಪದಾರ್ಥಮಂ ನಂಬುಗೆಯಂ ॥
ಪರಿಭಾವಿಸಿದಂ ಯೋಗೀ ।
ಶ್ವರನಾಜ್ಞಾನಿಚಯಮಂ ಶುಭಧ್ಯಾನಪರಂ ॥೬೧

ಅನಿಯತಯೋಗನಿಯೋಗದಿ ।
ನನಾದಿಸಂಸಾರಘೋರದಾರುಣದುಃಖಾ ॥
ಪನಯಂ ನಯ ದೊರೆಕೊಂಡಪ್ಪು ।
ದೆನಗೆನುತುಮಪಾಯವಿಚಯಮಂ ಧ್ಯಾನಿಸಿದಂ ॥೬೨

ನಾನಾಗತಿಯೊಳ್ ನಾನಾ ।
ಯೋನಿಗಳೊಳ್ ತೊಯ್ದ ಕರ್ಮಬಂಧವಿಪಾಕ ॥
ಧ್ಯಾನಂ ವಿಪಾಕವಿಚಯಮು ।
ದೇನಳವಟ್ಟತ್ತೊ ಮತಿಯೊಳಾಯತಿಪತಿಯಾ ॥೬೩

ತರುಣಯುವವೃದ್ಧಭೇದಂ ।
ಶರೀರದಿಂ ವ್ಯಕ್ತಮಾಗೆ ಪರ್ಯಾಯಪರಂ ॥
ಪರೆಗೆಯ್ದುವಿತರವಸ್ತು ।
ಸ್ವರೂಪಮಂ ದ್ರವ್ಯನಿಪುಣನಧ್ರುವಮೆಂಗುಂ ॥೬೪

ಸಾವೆಯ್ದೆ ಬಂದ ಪದದೊಳ್ ।
ಕಾವನ್ನವು ದೇಶಕಾಲವಿಧಿಹೇತುಗಳ ॥
ಲ್ಲಾವುದುಮಶರಣಮಕ್ಕುಂ ।
ಜೀವಕ್ಕೆ ಶರಣ್ಯಮೊಂದೆ ನಿರ್ಮಳಧರ್ಮಂ ॥೬೫

೧. ಯುತ. ಗ॥ ೨. ಗಳತ್ತೊಯ್ದು. ಕ॥ ೩. ನೆಂಗುಂ. ಕ॥

ಇಂದ್ರಿಯಕಷಾಯವಶಗತ ।
ರಂ ದ್ರವ್ಯಕ್ಷೇತ್ರಕಾಲಭವಭಾವವಿಭೇ ॥
ದಂ ದೃಢತರದುಃಖಜ್ವರ ।
ಕಂದ್ರಿಯನೆಯ್ದುವುದು ಘೋರತರಸಂಸಾರಂ ॥೨೬

ಸಮನಿಸಿದನಿಷ್ಟಸಂಯೋ ।
ಗಮನಿಷ್ಟವಿಯೋಗಮಂ ಚತುರ್ಗತಿಗಳೊಳಂ ॥
ಭ್ರಮಿಯಿಸಿ ಕೈಕೊಳ್ಗುಂ ತಾ ।
ನೆ ಮತ್ತೆ ನೆರವಿಲ್ಲ ದೇಹಿಗಿಂತೇಕತ್ವಂ ॥೨೭

ನಿತ್ಯಂ ನಿರೀಂದ್ರಿಯಂ ಸಂ[1] ।
ಪ್ರತ್ಯಯನವಿನಾಶಿ ಜೀವನಿತರಂ ತನುವೆಂ ॥
ದತ್ಯಂತಭೇದವಿಷಯಾ ।
ಪತ್ತ್ಯಾದಿಯನೆನ್ನವೆನ್ನನನ್ಯತ್ವವಿದಂ ॥೨೮

ದೇಹಕ್ಕಶುಚಿತ್ವಮಸಂ ।
ದೇಹಂ ಪರಶುಕ್ಲಶೋಣಿತಾಪಾದ್ಯಮಶು ॥
ದ್ಧಾಹಾರವೃದ್ಧಮಧುಕೀ ।
ಟಾಹತಮತಿದುಸ್ತರಾಮಯಂ ಧಾತುಮಯಂ ॥೨೯

ಬಟಲದ ಮಿಥ್ಯೆ ಹಿತಾಹಿತ ।
ದಱಿವನವರತಪ್ರಮಾದಮುದಿತಕಷಾಯಂ ॥
ಬಱಿಸಲ್ವ ಯೋಗ[3]ಮೆಂಬೀ ।
ಪಱಿಯಿಂ ಪ್ರತ್ಯೇಕಮಾಸ್ರವಂ ಪಂಚವಿಧಂ ॥೩೦

೧. ನಿರತಂ. ಕ॥ ೨. ದೇಯಕ್ಕೆ. ಕ॥ ೩. ಯೋಗ್ಯ. ಕ॥

ಅಪಮಿಥ್ಯಾತ್ವಂ ಸುಚರಿ ।
ತ್ರಪವಿತ್ರತೆ ನಿರ್ಗತಪ್ರಮಾದಂ ಕ್ರೋಧಾ ।
ದ್ಯಪಹೃತಿ ವಿಶುದ್ಧಯೋಗ ।
ಪ್ರಪಂಚಮೊಂದಯ್ದು ತೆಱದ ಸಂವರೆಯಕ್ಕುಂ ॥೨೧
ಬಿಟ್ಟು ಪರಿಗ್ರಹಮೆರಡಂ ।
ತೊಟ್ಟಯಾದ್ದಚಾರಮುಂ ಪರೀಷಹಮುಂ ಜೆ ।
ನ್ನಟ್ಟ ವಿಹಿತಮನನುಷ್ಠಿಸಿ ।
ಪುಟ್ಟಯಿಸಿದ ಕರಣಯೋಗಮಘನಿರ್ಹರಣಂ ॥೨೨
ಮುದಯುಂ ಪದಿನಾಲ್ಕು ತಳಂ ।
ಚದುರಸಮೇೞೊಂದು ನಡುವೆ ಮೇಲಯ್ದೊಂದ ।
ಗ್ರದೊಳನಿತೆ ರಜ್ಜುಪ ।
ಡ್ದ್ರವ್ಯದಾಶ್ರೈವಂ ಭುವನಮಾಶ್ರಿತತ್ರಸನಾಳಂ ॥೨೩
ಮನುಜತ್ವಂ ಸುಕ್ಷೇತ್ರಂ ।
ವಿನಯಂ ಕುಲಜಾತಿಭವ್ಯಯೋಗಂ ಗುರುಸೇ ।
ವನೆ ತತ್ತ್ವರುಚಿ ಸುಪರಿಣತಿ ।
ಮನೋವಚಃಕಾಯಶುದ್ಧಿಬೋಧನಿಮಿತ್ತಂ ॥೨೪
ಬಿಂಗೆ ಮನಂ ಮಿಥ್ಯಾತ್ವದಿ ।
ನಂಗೀಕೃತಮೆನೆ ವಿಶುದ್ಧಸಮ್ಯಕ್ತ್ವಂ ಸ್ಥಾ ।
ನಂಗಳ್ ಪನ್ನೊಂದು ಗೃಹ ।
ಸ್ಥಂಗೀರಯ್ದಾಗೆ ಯತಿಗೆ ಧರ್ಮಮೆನಿಕ್ಕುಂ ॥೨೫

೧. ನಿರ್ಝರಣಂ. ಕ॥ ಗ॥ ೨. ಶ್ರಮಂ ಭುವನಮಾಶ್ರಿತಂ. ಗ॥

ಧ್ಯಾನಂ ಮುಕ್ತಿಪ್ರಾಪ್ತಿನಿ।
ಧಾನಂ ಗತ್ಯಾದಿಮಾರ್ಗಣಸ್ಥಾನಗುಣ।
ಸ್ಥಾನಪರನಾಗೆ ಧರ್ಮ।
ಧೀನಂ ಸಂಸ್ಥಾನವಿಚಯಸುಸ್ಥಿತನಾದಂ ॥೭೬

ಅಂತವಿಶ್ರಾಂತಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧಲೇಶ್ಯಾಪರಿಣಾಮಪರಿಪೂರ್ಣನಪ್ರಮತ್ತಗುಣಸ್ಥಾನದೊಳ್ ನಿಂದು ಮುನ್ನಮಧಃಪ್ರವೃತ್ತಮನಿವೃತ್ತಮಪೂರ್ವಮೆಂಬ ಕರಣತ್ರಯದಿಂ ಮಿಥ್ಯಾತ್ವಂ ಸಮ್ಯಗ್ಮಿಥ್ಯಾತ್ವಂ ಸಮ್ಯಕ್ತ್ವಪ್ರಕೃತಿಯೆಂಬ ಮೂಱುಂ ದರ್ಶನಮೋಹಂಗಳುಮನನಂತಾನುಬಂಧಿಕ್ರೋಧಮಾನಮಾಯಾಲೋಭಂಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿಪಿಡಿಯಿಂ ಕಿಡಿಸಿ ॥೭೭

ತ್ರಿಕರಣದಿವ್ಯಾಂಜನದಿಂ।
ಸಕಳಪ್ರತ್ಯಕ್ಷಹೇತು ಸಮನಿಸೆ ಸಪ್ತ।
ಪ್ರಕೃತಿಪಟಳಕ್ಷಯಂ ಕ್ಷಾ।
ಯಿಕಸಮ್ಯಗ್ದೃಷ್ಟಿವಿಭವಮಂ ವಿಭು ತಳೆದಂ ॥೭೮

ಮತ್ತಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಮನಂತಮುಹೂರ್ತದೊಳ್ ನಿರ್ವರ್ತಿಸಿ ನಿವೃತ್ತಿಸ್ಥಾನಸೋಪಾನಶ್ರೇಣಿಯನೇಱಲೆಂದಧಃಪ್ರವೃತ್ತಾಧಿಕರಣಪರಿಣತಿಯನಪ್ಪುಕೆಯ್ದು ॥೭೯

ಪ್ರತಿಸಮಯಮನಂತಗುಣ।
ಕ್ಷತಿಕರಣವಿನಿರ್ಜರಾವಿಧಾನದಿನಾಯುಃ।

೧. ಸಂಸಾದ. ಕ॥ ೨. ಶ್ರೇಣಿಯುಕ್ತಸರಶ್ರೇಣಿ. ಗ॥

ಸ್ಥಿತಿಯುಂಬಿಯೆ ಶೇಷಕರ್ಮ।
ಪ್ರತಾನಬಂಧಾನುಭಾಗಮಂ ಕುಂದಿಸಿದಂ ॥೮೦

ಅನಂತರಮನಂತಗುಣಖಚಿತಮೆನಿಸಿದೆಂಟರೊಂದೆ ಪರಿಣಾಮದಿನ ಪೂರ್ವಕರಣಗುಣಸ್ಥಾನಮಿನಗಲ್ದು ನಿವೃತ್ತಿಬಾದರಸಾಂಪರಾಯದೊಳ್ ನಿಂದಂತರ್ಮುಹೂರ್ತದೊಳ್ ನಿದ್ರಾನಿದ್ರಾಪ್ರಚಳಾಸ್ತ್ಯಾನಗೃದ್ಧಿನರಕಗತಿತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿತತ್ಪ್ರಾಯೋಗ್ಯಾನುಪೂರ್ವಕದ್ವಿತ್ರಿಚತುರಿಂದ್ರಿಯಜಾತ್ಯಾತಪೋದ್ಯೋತಸ್ಥಾವರಸಾಧಾರಣಸೂಕ್ಷ್ಮಂಗಳೆಂಬ ಪದಿನಾಱುಂ ಪ್ರಕೃತಿಗಳುಮಂ ಪಡಲ್ವಡಿಸಿ ಮತ್ತಮನಿತ ಬೇಗದೊಳ್ ॥೮೧

ಅಪ್ರತ್ಯಾಖ್ಯಾನಪಿಶೇ।
ಷಪ್ರತ್ಯಾಖ್ಯಾನಭೇದಭಿನ್ನಾಷ್ಟಕಷಾ।
ಯಪ್ರತ್ಯರ್ಥಿಗಳಂ ಪೀ।
ಠಪ್ರಪರಂ ಗೆಲ್ದು ವಿಜಯವಲ್ಲಭನಾದಂ ॥೮೨

ಮತ್ತಮುತ್ತರಕ್ಷಣದೊಳ್ ॥೮೩

ಅಭಿಭವಿಸಿ ನಪುಂಸಕವೇ।
ದಭಾಮಿನೀ ವೇದಯುಗಳದೊಡನೊಡನೆ ಜಗ।
ದ್ವಿಭು ಹಾಸ್ಯರತ್ಯರತಿಶೋ।
ಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ ॥೮೪
ಬಱಿ ಪುರುಷವೇದಮಂ ಸಂ।
ಜ್ವಳನಚತುಃಕ್ರೋಧಮಾನಮಾಯಾಲೋಭಂ।

೧. ನಿವೃತ್ತಿ. ಗ॥ ೨. ಸ್ತ್ಯಾನ. ಗ॥ ೩, ೪. ತತ್ಪ್ರಾಯೋ. ಕ॥

ಗಳನೊರ್ವಿಯೆ ನಿರ್ಮೂಳಿಸಿ ।
ತಳೆದನಜೇಯಂ ಜಯಾಂಗನಾಲಿಂಗನಮಂ ॥೮೫

ಮತ್ತಮನಿವೃತ್ತಿಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರಶುದ್ಧಿಸಂಯಮಾನುಗನಯನಿವೃತ್ತಿಸಂಯುತಂ ಸೂಕ್ಷ್ಮಸಾಂಪರಾಯಸಂಪನ್ನನೆನಿಸಿ ॥೮೬

ಯತಿ ಸೂಕ್ಷ್ಮಸಾಂಪರಾಯ ।
ಸ್ಥಿತಂ ಯಥೋಕ್ತಪ್ರಶಸ್ತಪರಿಣಾಮಗದಾ ।
ಹತಿಯಿಂದೆ ಸೂಕ್ಷ್ಮಲೋಭ ।
ಪ್ರತಿಪಕ್ಷಕ್ಷಯಮನಿತ್ತನೇನುದ್ಧತನೋ ॥೮೭

ಅನಂತರಂ ॥೮೮

ಕಿಡೆ ಮೋಹನೀಯಕರ್ಮಂ ।
ಪಡೆದು ಯಥಾಖ್ಯಾತಚರಿತಮಂ ದುರಿತದ ಪೆ ।
ರ್ಚಡೆಗೆ ಕಡುಮುನಿದು ಮುನಿ ಮೊಗ ।
ಪಡಮುಡಿಗಿದ ವಿಜಯಭದ್ರಗಜದವೊಲಿರ್ದಂ ॥೮೯

ಮತ್ತಂ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದಿಂ ಕ್ಷೀಣಕಷಾಯವೀತರಾಗಚ್ಛದ್ಮಸ್ಥಗುಣಸ್ಥಾನಮಂ ಪೊರ್ದಿ ಕಿಱಿದು ಪೊೞ್ತು ವಿಶ್ರಮಿಸಿ ಬೞಿಯಮೇಕತ್ವವಿತರ್ಕವಿಚಾರಮೆಂಬೆರಡನೆಯ ಶುಕ್ಲಧ್ಯಾನದಿಂ ಬಹುತರಾಶ್ರವಸಂವರಕರ್ಮನಿರ್ಜರನಾಗಿ ನಿದ್ರಾನಿದ್ರಾಪ್ರಚಳೆಗಳನುಪಾಂತ್ಯಸಮಯದೊಳಸ್ತಮಯಮಂ ಪೊರ್ದಿಸಿ ॥೯೦

ಚರಮದೊಳಯ್ದುಂ ಜ್ಞಾನಾ ।
ವರಣಮುಮಂ ನಾಲ್ಕು ದರ್ಶನಾವರಣಮುಮಂ ॥
ಪರಮೇಶ್ವರನೊರ್ವದಲೊಳ್ ।
ಪರಿಹರಿಸಿದನಯ್ದುಮಂತರಾಯಂಗಳುಮಂ ॥೯೧

ಅಂತು ನಾಲ್ಕು ಘಾತಿಗಳಂ ಘಾತಿಸೆ ॥೯೨

ಉಪಮಾತೀತನಿಜಪ್ರಕಾಶಗುಣದಿಂ ಪ್ರತ್ಯಕ್ಷಮಪ್ಪಂತು ಪಾ ।
ಡಿ ಪದಾರ್ಥಂಗಳನೆಲ್ಲಮಂ ಘನತಮೋವಿಧ್ವಂಸನಂಗೆಯ್ದು ವ ॥
ಸ್ತುಪರೀಕ್ಷಾವಿದವಿಶ್ರುತಂ ಪಸರಿಸಿತ್ತುದ್ಯೋತಮಂ ಮಲ್ಲಿನಾ ।
ಥಪಯಸ್ಸಾಗರಸಂಭವಂ ಸಕಳದಿವ್ಯಜ್ಞಾನರತ್ನಾಂಕುರಂ ॥೯೩

ಕರಣಮನಾಸೆವಟ್ಟರದೆ ದೂರಮಿದೆನ್ನದೆ ಸಾರೆಯೆನ್ನದಂ ।
ತರಿತಮಿದೆನ್ನದೊರ್ವದಲೆ ವಸ್ತುಗಳಂ ಗುಣ[೧]ಪರ್ಯಯಂಗಳಂ ॥
ಪರಿವಿಡಿಯಿಲ್ಲದೇೞ್ [೨]ತೆಱನಾದುವನಪ್ಪುವನಾಗಲಿರ್ದವಂ ।
ಕರದೊಳಗಿರ್ದ ನೆಲ್ಲಿಗಣಿಯಾಗಿರೆ ಕಾಣ್ಬುದುಮಾಯ್ತುಜಾತನೊಳ್ ॥

ವಿಶ್ವಜನಾರಾಧ್ಯಂಗವಿ ।
ನಶ್ವರಮುನ್ಮೀಲಿಸಿತ್ತು ಕೈವಲ್ಯಜ್ಞಾ ॥
ನೈಶ್ವರ್ಯಂ ಪೂರ್ವಾಹ್ಣದೊ ।
ಳಶ್ವಿನಿಯೊಳ್ ಮಾರ್ಗಶಿರಸಿತೈಕಾದಶಿಯೊಳ್ ॥೯೪

ಆಸಮಯದೊಳ್ ॥೯೫

ಧರೆ ಪೊಸಸುಗ್ಗಿಯ [೩]ಪುಣ್ಣಮೆ ।
ಯಿರುಳಂತಿರೆ ತೀವಿ ತೊಳಗಿ ಬೆಳಗುವ ಸಸಿಯಿಂ ॥

೧. ಪರ್ಯ್ಯ. ಕ॥ ೨. ತೆಱದಾವ. ಕ॥ಗ॥ ೩. ಪುಣ್ಣಮಿ. ಗ॥

ಕರಮೆಸೆವ ನಯನನರ್ತನ ।
ಮರಕತರಂಗಂಬೊಲೇಂ ಮನಂಗೊಳಿಸಿದುದೋ ॥ ೯೭
ಸರಸಿಜವನಮೆಲ್ಲಂ ಸ ।
ತ್ಪುರುಷರ ಸಂಯೋಗದಂತೆ ತೆಳ್ಪಂ ತಳೆದೇಂ ।
ವರುಣಾನಿಯ ವೈಡೂರ್ಯದ ।
ಸಿರಿಗನ್ನಡಿಯೆನಿಪ ಗಾಡಿಯಂ ತಾಳ್ದಿದುವೋ ॥ ೯೮
ಮಂಗಳಶಿಖಿಗಳ್ ಜಾತ್ಯ ।
ಶ್ವಂಗಳವೋಲ್ತೊಳೆದು ದಕ್ಷಿಣಾವರ್ತವಿಳಾ ।
ಸಂಗಳನೇಂ ಧನದನ ರ ।
ತ್ನಂಗಳ ಪಸರಂಗಳಂತೆ ಜಲಜಲಿಸಿದುವೋ ॥ ೯೯
ಮಾರುತಮಂಡಳಮನಿತುಂ ।
ತಾರಾಪಥದಂತೆ ಮಂದಚಾರಂಬಡೆದೇಂ ।
ರಾರಾಜಿಸಿತ್ತೊ ವನಲ ।
ಕ್ಷ್ಮೀರಮಣಿಯ ವದನಸುರಭಿನಿಶ್ವಾಸದವೋಲ್ ॥ ೧೦೦
ಘನಪಥಮನಿತುಂ ಕಂದ ।
ರ್ಪನಂತಿರವಘನವಿಳಾಸಮಂ ತಳೆದು ದಿಗಂ ।
ಗನೆಯ ಕಡೆಗಣ್ಣ ಬಣ್ಣಮಿ ।
ದೆನಲೇಂ ಬೇಱೊಂದು ಕಾಂತಿಯಂ ಬೀಱಿದುದೋ ॥ ೧೦೧
ಅಂತು ಪಂಚಭೂತಪೂರ್ವವಿಭವಮನಪ್ಪುಕೆಯ್ಯೆ[3] ॥ ೧೦೨
ಸುರಪತಿಗಳ್ ಮೂವತ್ತಿ ।
ರ್ಪರ ಮಣಿಪೀಠಂಗಳೊಡನೆ ನಡುಗಿದುವಮರರ್ ।

೧, ಪೊಸೆಯೆ. ಕ॥ ೨, ರತ್ನಂ. ಕ॥ ೩, ಕೆಯ್ದು. ಕ॥

ಸುರಿಯುದೆಱುಂ ಪೂಮಱೆಗಳ್ ।
ಸುರಿದುವು ಭೋರ್ಗರೆದು ಕಲ್ಪವಲ್ಲೀವನದಿಂ ॥೧೦೩
ಅಸೆವೆಸದಿನಮರಪತಿಗಳ ।
ಮಿಸುಗುವ ಮಣಿಮಕುಟಮೊಱಗಿದುವು ದಿವಿಜರ್ ಬಾ ।
ಜಿಸದೆಯುಮಮರಾನಕರುತಿ ।
ಪಸರಿಸಿ ಪರ್ವಿದುವು ಸಕಳಭುವನಾಂತರಮಂ ॥೧೦೪
ಅವಿದಿತಪರಸ್ಪರೇಚ್ಛ ।
ವ್ಯವಹೃತಿ ತಂತಮಗೆ ವಿಸ್ಮಯಂ ಪುಟ್ಟುವಿನಂ ।
ಭವನಾಮರಭವನಮನು ।
ತ್ಸವ ಶಂಖನಿನಾದವಾದಮೆಂ ತೀವಿದುದೋ ॥೧೦೫
ಕುಳಗಿರಿಯೊಳ್ಮಾರ್ದನಿಗಳ್ ।
ಬಳೆವಿನೆಗಂ ನೀಳಮೇಘನಿರ್ಘೋಷದಿನ ।
ಗ್ಗಳಮೆನೆ ವಾನವ್ಯಂತರ ।
ನಿಳಯದೊಳುಣ್ಮಿತ್ತು ಭೂರಿ[3]ಭೇರೀವಿನದಂ ॥೧೦೬
ರವಿರಥತುರಗಂಗಳ್ಬೆ ।
ಚ್ಚುರ್ವಿನಂ ನಿಜಕರ್ಣತಾಳಮಂ ದಿಕ್ಕರಿ ಬೆ ।
ಚ್ಚುರ್ವಿನಂ ಘೀಂಕನೆ ಕಂಠೀ ।
ರವರವಮಾವರಿಸಿದತ್ತು ರೋದೋಂತರಮಂ ॥೧೦೭
ಪ್ರಣಯಕಲುಷತೆಯುರಚ್ಚರ ।
ಗಣಿಕೆಯರಮರ್ದಪ್ಪೆ ಭೀತಿಯಿಂದನಿಮಿಷರಂ ।

೧. ವನದೊಳ್. ಕ॥ ೨. ವಸತಿ. ಕ॥ ೩. ಭೇರಿನಿನಾದಂ. ಗ॥

ಮಣಿಘಂಟಾನಿನದಂ ತಿಂ।
ತಿಣಿಯೆನೆ ತೀವಿತ್ತು ದೇವಲೋಕಮನಾಗಳ್ ॥೧೦೮
ಆಧ್ವನಿಗಳ್ ನಿಜನಿಜಕ।
ರ್ಣಾಧ್ವಗಮೆನೆ ಜೈನಪೂಜೆಗಿತರೇಂದ್ರರ್ ನಾ।
ನಾಧ್ವನಿ[೧]ವೆರಸು ನೆರೆದು ಶ।
ತಾಧ್ವರಿಸೌಧರ್ಮನಲ್ಲಿಗಂದೆೞ್ತಂದರ್ ॥೧೦೯

ಆಗಳವಧಿಬೋಧದಿಂ ಸೌಧರ್ಮದ ದಿವಿಜಪತಿ ಜಿನಪತಿಯ ಕೇವಲಜ್ಞಾನೋತ್ಪತ್ತಿಯನಱಿವು ॥೧೧೦

ನಿಟಿಳತಟಘಟಿತಕರಸಂ।
ಪುಟಂ ನಿಜಾಸನದಿನೆರ್ದು ಜಿನಸಂಮುಖದಿ।
ಕ್ತ್ರುಟದತ್ತದೃಷ್ಟಿ ಮಂಗಳ।
ಪಟಹಂಗಳ್ಮೊಳಗೆ ವಿನತಮಸ್ತಕನಾದಂ ॥೧೧೧

ಆಗಿ ಸ[೨]ಮವಶರಣಮಂಡಳಮಂ ಸಮವಂತು ಜೆಸಸುವುದುಂ ಪ
ಮುಜಿನಪತಿಯ ॥೧೧೨

ತನುಘಾತಿಕ್ಷಯದಿಂ ನಭಕ್ಕೆ ನೆಗೆದಂಗೋಪಾಂಗಮಂ ಪೆತ್ತು ಮಿಂ
ಚಿನಪೋಲಿಪ್ಪುದುಮಾಗಳಾಯೆಡೆಗೆ ಸೌಧರ್ಮೇಂದ್ರನಾದೇಶದಿಂ।
ಧನದಂ ನಿರ್ಮಿಸಿದಂ ಸಭಾಸದನಮಂ ಲೋಕತ್ರಯೀನೇತ್ರಮಂ।
ಡನಮಂ ಧರ್ಮವಿನಿರ್ಮಿತಾಭ್ಯುದಯಲಕ್ಷ್ಮೀಲಾಸ್ಯಮೆಂಬನ್ನೆಗಂ।

ಆಗಳಾಧನಪತಿಯುಂ ಸಂಕಲ್ಪಕಲ್ಪಲತೆಯ ಸಫಳಮಾದಂತೆ ॥೧೧

ಧರೆಗೈಸಾಸಿರಬಿಲ್ಲಂ।
ತರದೊಳ್ ಪರ್ವಿದುದು ನೀಲಮಣಿಭೂಮಿ ನಭೋಂ।

೧. ಧ್ವನಿವೆರಸುಂ, ಕ॥ ೨. ಸಮವಶರಣಮಂಡಪಮಂ, ಕ॥

ತರಮುಂ ದ್ವಾದಶಯೋಜನ ।
ವಿರಾಜಿತಂ ಕಂತುಕವಯುರಂ ಬೀಸಿದವೋಲ್ ॥೧೧೫

ಅಲ್ಲಿ ॥೧೧೬

ಸುರುಚಿರವಿಚಿತ್ರವಸ್ತ್ರದೆ ।
ಸುರಪತಿ ತೆರೆಸುತ್ತಿದಂತೆ ಹರಿನೀಳಶಿಳಾ ॥
ಪರಿಕಲಿತಂ ಸ್ವಭಾನುವ ।
ಪರಿವೇಷಮನಿೞಿಸಿದತ್ತು ದೂಳೀಶಾಳಂ ॥೧೧೭

ಅರ್ಕೇಂದುಸಂಪದಂಗಳ ।
ನಿರ್ಕೆರ್ಳ್ವ ಕರಂಗಳಂ ನಭೋವಲ್ಲಭೆಯುಂ ॥
ತರ್ಕಯಿಸಿ ನಾಲ್ಕು ದೆಸೆಯೊಳ ।
ಮಿರ್ಕುಂ ವಿಂಶತಿಸಹಸ್ರಸೋಪಾನಂಗಳ್ ॥೧೧೮

ಆನಾಲ್ಕುಂ ಸ್ಥಾನದ ಸೋ ।
ಪಾನದ ಮೇಲಿರ್ದ ಪಾದಲೇಪಂ ನಿಮಿಷ ॥
ಕ್ಕೇನುಯ್ವುದೊ ಮೇಗಣ ಸೋ ।
ಪಾನದ ಮೇಗಣ್ಗೆ ಚೋದ್ಯಮೆನಲೆನ್ನರುಮಂ ॥೧೧೯

ಆಸೋಪಾನಂಗಳಗ್ರಭಾಗದೊಳ್ ॥೧೨೦

ತುಂಗಂಗಳಾಗಿಲ್ಲಾ ।
ಡಂಗಳ್ ಮಣಿಕಿರಣಜಾಳಜಟಿಳತಬಹುಭೂ ॥
ಮಂಗಳ್ ಭಾಸುರಹೇಮಮ ।
ಯಂಗಳ್ ನಾಲ್ಕೆಸೆದುವರುಣಮಣಿಕಳಶಂಗಳ್ ॥೧೨೧

ಅವಱೊಳಗಣ ಪೊಱಗಣ ಜಗ ।
ಲಿವಿಡಿದು ನವನಿಧಿಯುಮಷ್ಟಮಂಗಳಮುಮೆನಿ ॥
ಪ್ಪುವು ಬೇಱೆವೇಱೆ ನೂಱೆಂ ।
ಟವಿರಳವಾಗಿರ್ಪುವೀಕ್ಷಣಾನಂದಂಗಳ್ ॥೧೨೨
ಮಿಡುಕದೆ ನಾಲ್ಕುಂ ಬಾಗಿಲ ।
ಪೆಡೆಗಳೊಳಂ ಜ್ಯೋತಿರಮರವತಿಗಳ್ ಗದೆಯಂ ॥
ಪಿಡಿದಿರ್ಕುಮವರ ಮಕುಟದ ।
ಕುಡುಮಿಂಚೆಂಬರದೊಳಾಡುಗುಂ ಪೆಕ್ಕಣಮಂ ॥೧೨೩
ಬಾಗಿಲ್ನಾಲ್ಕಱ ಪೊಱಗಣ ।
ಭಾಗದೊಳಲ್ಲಲ್ಲಿ ಮಕರತೋರಣಶತಮಿಂ ॥
ಬಾಗಿ ಬಗೆಗೊಳಿಕುಮೊಳಗಣ ।
ಭಾಗದೊಳವಱನಿತೆ ರತ್ನತೋರಣಮೆಸೆಗುಂ ॥೧೨೪
ಆವಿಚಿತ್ರತೋರಣಮೆ ತಮಗಲಂಕಾರಮಾಗೆ ॥೧೨೫
ಜಿನನಾಡಿಪೀಠನಿಕಟಾ ।
ವನಿವರೆಗಂ ನಾಲ್ಕುವೀಧಿ ನೀಳ್ದುವು ತದ್ವೀ ॥
ಧಿನಿಕಾಯದುಭಯಪಾರ್ಶ್ವಾ ।
ವನಿಯೊಳ್ ರಂಜಿಸಿದುವೆಣ್ಟು ಪಳಕಿನ ಕೇರ್ಗಳ್ ॥೧೨೬
ಆನಾಲ್ಕುಂ ವೀಧಿಗಳೊಳ್ ।
ಮಾನಸ್ತಂಭಂಗಳುನ್ನತಂಗಳ್ ಮಣಿಘಂ ।
ಟಾನಿಚಿತಂಗಳ್ ಮಿಥ್ಯಾ ।
ಜ್ಞಾನಮನೋಡಿಪ್ಪುದು ದೂರದಿಂ ನೋಡಲೊಡಂ ॥೧೨೭

೧. ಮಿಡುಕಳೆ, ಗ॥ ೨. ಪೆಡಿ, ಗ॥

ಮಾನಸ್ತಂಭದ ಜಗತಿಗ ।
ಳೇನೆಸೆದುವೊ ನಾಲ್ಕು ದೆಸೆಯೊಳರೆ ಕಾಂಚನಸೋ ॥
ಪಾನು ಚತುರಶ್ರವದ ।
ಸ್ಥಾನಂ ಸಮವೃತ್ತಮೆನೆ ನಿಜಾಗ್ರಸ್ಥಾನಂ ॥೧೨೮

ಕುಂಡಂಗಳೆರಡು ಸರಸಿಜ।
ಷಂಡಂ ಪದಿನಾಱು [1]ಕೋಟೆ ಮೂಱುೞರಾಱುಂ ॥
ಮಂಡಳಿಸೆ ಗೋಪುರಂ ಬಗೆ ।
ಗೊಂಡಿರ್ಕುಂ ಬೇಱುವೇಱು ಮಾನಸ್ತಂಭಂ ॥೧೨೯

ಭಾಸುರಮಣಿ[2]ಪೀಠತ್ರಿತ।
ಯಾಸೀನಸುವರ್ಣಮಯಜಿನಪ್ರತಿಕೃತಿಭಾ ॥
ಭಾಸುರಮಾನಸ್ತಂಭವಿ ।
ಳಾಸಂಬಣ್ಣಿಸುವೆನೆಂಬ ಮಾನವನಳವೇ ॥೧೩೦

ಆನಾಲ್ಕುಂ ಮಾನಗಂಬಂಗಳ ನಡುವೆ ಸುಧಾಸದ್ಮಮಯಾದ್ದೊಡ ಕ್ಕುಂ । ಜೈನೇಂದ್ರಾವಾಸವೊಂದೀಕ್ರಮದೊಳೆ ಬಳಸಿರ್ದೊಪ್ಪುಗುಂ ಚಕ್ರ[3]ವಾಳ ॥ ಸ್ಥಾನಂ ಪ್ರಾಸಾದಚೈತ್ಯಾವನಿತಳಮದಱೊಳ್ಪಟ್ಟವಿ ಟ್ಟಂತಿರಿರ್ಕುಂ । ನಾನಾಕೂಪಂ ಬನಂ ತೀವಿದ ನವನಿಧಿಗಳ್ ಕುಂಡ ಮಂಭೋಜಷಂಡಂ ॥೧೩೧

ಆಪ್ರದೇಶಮರ್ಧ[4]ಯೋಜನಮಕ್ಕುಮಲ್ಲಿಂದೊಳಗೆ ॥೧೩೨
ಪರಿಪಾಳಿಸೆ ತಮ್ಮಂ ಜ್ಯೋ ।
ತಿರಮರರುತ್ತುಂಗರಜತರೂಪಚತುರ್ಗೋ ॥

೧. ಕೋಟಿ. ಗ॥ ೨. ಪೀಠಂದಾಯಾಸೀ. ಕ॥ ೩. ವಾಳಾ. ಕ॥
೪. ಯೋಜನಮಲ್ಲಿಂ. ಕ॥

ಪುರವಷ್ಟಾಪದವೇ[೧]ದೀ ।
ಪರಿವೃತವೊದವಿಪುದು ದೆಸೆಗೆ ಬೆಳ್ವಸೆದನವಂ ॥೧೩೩
ಅಲ್ಲಿಂ ಪಂಚರತ್ನಸೋಪಾನರುಚಿವಿತಾನದಿಂ ಪುದಿದು ॥೧೩೪
ಸಲಿಲಕ್ರೀಡಾ[೨]ರತಸರ ।
ಲಲನಾಸ್ತನಭರವಿಲಿಪ್ತಕುಂಕುಮರಸದೊಳ್ ॥
ಕಲಸಿ ಪಿಶಂಗಪ್ರಭೆಯಿಂ ।
ಜಲಖಾತಿಕೆ ಸಿದ್ಧರಸದ ಕಾಟ್ಪುರ[೩]ವೆನಿಕುಂ ॥೧೩೫
ಚಿತ್ರಿಸಿದಂತೆವ್ರೊಲಿರೆ ಶತ ।
ಪತ್ರವನಂ ಸವಮುಶರಣಲಕ್ಷ್ಮಿಯ ಕಾಂಚೀ ॥
ಸೂತ್ರಮಿದೆನೆ ಸುರವನಿತಾ ।
ನೇತ್ರೋತ್ಸವಹೇತುವಾಯ್ತು ಪರಿಖಾಕ್ಷೇತ್ರಂ ॥೧೩೬
ಪಲವಂದದ ನೀರ್ವಕ್ಕಿಗ ।
ಳುಲಿ ನೀರಾಟಕ್ಕೆ ಬರ್ಪ ದೇವಿಯರುಡೆನೂ ॥
ಲುಲಿ ಬಂಬಲ್ದೆರೆಯುಲಿ ಕಿವಿ ।
ಗೊಲವಂ ಪುಟ್ಟಸುವುವ್ರೊಡನೆ ನೀರ್ಗಾ[೪]ಡಿಗೆಯೊಳ್ ॥೧೩೭
ಆನೀರ್ಗಾಡಿಗೆಯುಮರ್ಧಯೋಜನಮಲ್ಲಿಂದೊಳಗೆ ॥೧೩೮
ಕನಕಮಯವೇದಿಕಾವಂ ।
ಡನಮೆನಿಸಿದ ರಜತಮಯಚತುರ್ಗೋಪುರದೊಳ್ ॥
ಕನಕಗದಾಹಸ್ತರ್ ದ್ವಾ ।
ರನಿಯುಕ್ತರ್ ಜ್ಯೋತಿರಮರನಾಯಕರಿರ್ಪರ್ ॥೧೩೯
ಅಲ್ಲಿ ॥೧೪೦

೧. ವೇದಿಕೆ. ಕ॥ ೨. ರತ್ನಂ ಸುರ. ಕ॥ ೩. ವೆುಸೆಗುಂ. ಕ॥ ೪. ಗಳ್. ಕ

ಇಲ್ಲಿಂದೋಗರಗಂಪುಗ ।
ಳಲ್ಲಿನಿಪ್ಪುವು ಪೂಗಳಂಗಜಂ ಬರೆದೊಡಮೇ ॥
ನಿಲ್ಲಿ ತ್ರಿಭಂಗಶುದ್ಧಿಗ ।
ಳಲ್ಲಿನಿಪ್ಪುವು ಲತೆಗಳಲ್ಲಿ ವಲ್ಲೀವನದೊಳ್ ॥೧೪೧

ಸುಮನೋಮಂಜರಿಯಿಂ ತೊಡರ್ಪ ಸುರಕಾಂತಾಲೋಲನೇತ್ರಕ್ಕೆ ಪು । ಷ್ಪಮಧುಸ್ಯಂದದಿನುರ್ವರಾವಧುಗೆ ನೀರಾಟಂ ಗತಿಸ್ತಂಭಮು ॥ ದ್ಗಮಮಾಂಸೂತ್ಕರಭಾರದಿಂದೆಲರ್ಗೆ ಪುಷ್ಪಾವೋದದಿಂದಾದುದ । ಳ್ಕುಮೆ ಭೃಂಗಕ್ಕೆನೆ ತಾಂಗದಾರ ಬಗೆಯಂ ತತ್ಪುಲ್ಲವಲ್ಲೀವನಂ ॥೧೪೨

ಜಿನಸಭೆಯೆಂದು ಬಂದು ಪುಗಲುಂ ಪೊಸಪೂಗಳನಾಯಲುಂ ಭಯಂ । ಜನಿಯಿಸೆ ಗಾಳಿಯಿಂ ಪೊಣಗೆ ಸೂಸಿದುವಂ ಕಱುಪೂವನಾಯ್ದುವೋ ॥ ಹನಶರಮಂ ಸ್ಮರಂ ಸಮೆದು ಲೋಕಮನುಜಿಪನೆಂದೊಡಾಲತಾ । ವನದ ವಿಳಾಸಮಂ ವನಜಸಂಭವನುಂ ಪೊಗೞಲ್ ಸಮರ್ಥನೇ ॥೧೪೩

ಪೊರ್ಕುಳಿಯಾಡಿದುವಲರೊಳ್ ।
ನಿರ್ಕಲಿಸಿದವಬ್ದ ಬಂಡಿನೊಳ್ ತನಿಗಂಪಿಂ ॥
ದಲ್ಕುಮೆವಟ್ಟವು ಕುಡಿಯೆಡೊಳ್ ।
ದರ್ಕುಂದಲೆವಾಯ್ದುವಲ್ಲಿ ಮದಮಧುಪಂಗಳ್ ॥೧೪೪

ಆನಲ್ಲೀಕ್ಷೇತ್ರವೊಂದು ಯೋಜನಮಲ್ಲಿಂದೊಳಗೆ ॥೧೪೫

೧. ಅಲ್ಲಿಂದೊಳಗರಗಂಪುಗ । ಲಿಲ್ಲನಿ. ಕ॥ ೨. ತ್ರಿಭಂಗಿ. ಗ॥
೩. ಳಲ್ಲನಿ. ಗ॥ ೪. ಪೋಗಿ. ಕ॥ ೫. ಕೆಳಿ. ಗ॥

ಕಿಸುವೊನ್ನಕೋಂಟೆಯಿಂ ರಂ।
ಜಿಸುಗುಂ ಜಯಪ್ರಾಮರೇಂದ್ರದೌವಾರಿಕರಿಂ ॥
ದೆಸೆಗುಂ ರಜತಮಯಂ ನಾ।
ಲ್ದೆಸೆಗಂ ತೊಡವೆನಿಪ ನಾಲ್ಕು ಬಾಗಿಲ್ಮಾಡಂ ॥೧೪೬

ಬಾಗಿಲ್ಮಾಡಂಗಳ ಕೆಲ।
ಭಾಗದ ಮೂನೆಲೆಯ ಮಾಡಮೆರಡೆರಡವಱೊಳ್ ॥
ರಾಗದಿನಾಡುವರಮರಿಯ।
ರಾಗಡುಮೋರೊಂದು ನೆಲೆಯೊಳರ್ದಿನೆಱುವರ್ ॥೧೪೭

ಆಪಡಿನಾಱುಂ ನಾಟ್ಯಗೃಹದ ॥೧೪೮

ಪ್ರಘಣಂಗಳೊಳರ್ಕರ್ದಂ ದೂ।
ಪಘಟಂಗಳ್ ನಾಟ್ಯಶಾಲೆಗೋರೊಂದೊಗೆದ ॥
ಲ್ಲಿ ಘನಾಧ್ವಮುಮಂ ಪುದಿಗುಂ।
ಮಘವನಿವಾಸಮುಮನಗುರುಧೂಮಸ್ತೋಮಂ ॥೧೪೯

ವಿಕಚದಶೋಕವನಂ ಪ।
ಣ್ತ ಕದಳಕಾವನಸಮನೂನಫಳಭರನವಾ್ರ ॥
ಮ್ರಕುಜಾತವನಂ ನವಚಂ।
ಪಕವನಮೀನಾಲ್ಕುಮುಪವನಂ ಸೊಗಯಿಸುಗುಂ ॥೧೫೦

ಇನಿಯುವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ ಸ...
ರಾಂ। ಗನೆಯುರ ಕೇಶಮುಂ ನವಿಲ ಪಿಂಡುಗಳುಂ ಕುರುಳುಂ ಮುದ...
ಳಯುಂ ॥ ಸ್ತನಯುಗಮುಂ ರಥಾಂಗಯುಗಮುಂ ನಡೆಯುಂ ಕಳ...

೧. ಭರವಾಮ್ರ. ಕ॥

ಹಂಸಯಾನಮುಂ । ತನತನಗೊಂದನೊಂದು ತಡವಿಕ್ಕುಗುಮೆಕ್ಕೆಯಿ
ನಾಬನಂಗಳೊಳ್ ॥೧೫೧

ಫಳಭಾರಾನತಮಾಗಿ ನೇತ್ರಶಫರೀಜಾಳಂಬೊಲಿಂಬಾದ ವೃ ।
ಕ್ಷಲತಾವೀಥಿಗಳಂ ಮನಂಗೊಳಿಸಿ ಕೀರೋತ್ತಾರದಿಂ ಚಕ್ರಮುಂ॥
ಜಾಳಚೀತ್ಕಾರದಿನುತ್ಕಹಂಸಮಿಥುನವ್ಯಾಹಾರದಿಂ ಭೃಂಗಸಂ ।
ಕುಳಝುಂಕಾರದಿನುಂಟುಮಾಳ್ಪುದು ಬನಂ ಕರ್ಣಾಮೃತಾಸಾರಮಂ॥

ಜಿನಬಿಂಬಂ ಪ್ರಾತಿಹಾರ್ಯಾಂಚಿತಮಿರೆ ಮಣಿಪೀಠತ್ರಯಾಧಿಷ್ಠಿ
ತಂ ತಾಂ । ಚನಕೂಟಂ ಸುತ್ತೆ ಶಾಳಾತ್ರಯಮೆಸೆವುವು ಚೈತ್ಯಾವ
ನೀಜಂಗಳಾವಾ ॥ ವನಭೂಜಾತಂಗಳಂ ತಮ್ಮೊಳಗೆ ತಳೆದ ನಾಲ್ಕುಂ
ದಿಶಾಭಾಗದಿಂ ಯೋ । ಜನವಿಸ್ತಾರಂ ವಿಳಾಸಂಬಡೆದು ಪವನಸಂಕ್ಷೇತ್ರ
ಮಾಳೋಕಪಾತ್ರಂ ॥೧೫೩

ಅಲ್ಲಿಂದೊಳಗೆ ॥೧೫೪

ಪ್ರತಿಹಾರಕರುಂ ಗೋಪುರ ।
ಚತುಷ್ಕಮುಂ ಪುದಿದ ಶಾಳಮುಂ ಪೂರ್ವೋಕ್ತ ॥
ಸ್ಥಿತಿಯಿಂ ಕಣ್ಗಂ ಬಗೆಗಂ ॥
ಪ್ರತೀತಿಯುಂ ಪಡೆಪು ಪಡೆದುವಧಿಕೋತ್ಸವಮಂ ॥೧೫೫

ಅಲ್ಲಿ ॥೧೫೬

ಹರಿಕರಿವೃಷಶಿಖಿಮಾಳಾಂ ।
ಬರಹಂಸಾಂಭೋಜಚಕ್ರಗರುಡಧ್ವಜಮುಂ ॥
ಬರಮುಂ ಚುಂಬಿಸಿ ಕಾರ್ತೆ ।
ಸ್ವರಕೀರ್ತಿಸ್ತಂಭಶಿಖರದೊಳ್ ನರ್ತಿಸುಗುಂ ।೧೫೭

೧. ವಿರ್ಕುಗು. ಕ॥   ೨. ಶಾಳ. ಕ॥

ಅಂತು ಪತ್ತುಂ ಕುಲದ ಮಹಾಧ್ವಜಂಗಳೊರೊಂದರ್ಕೆ ನೂ
ಱುಟಾಗೆ ಬೇಱೆ ಬೇಱೆ ನಾಲ್ಕುಂ ದೆಸೆಯೊಳಂ ॥೧೫೮

ಗಗನಾಂಭೋರಾಶಿಯು ವೀ ।
ಚಿಗಳೆನೆ ಮಿಳ್ಳಿಸುವುವಲ್ಲಿ ನಾಲ್ಸಾಸಿರದಿಂ ॥
ಮಿಗಿಲೆನೆ ಮುನ್ನೂಱುವರ್ಪ ।
ತ್ತೆಗೆಯ್ದ ಮುಖ್ಯಧ್ವಜಂಗಳುದ್ಬದ್ಧಂಗಳ್ ॥೧೫೯

ಮತ್ತಮಾಧ್ವಜಂಗಳೊರೊಂದರ್ಕೆ ನೂಱುಟಾಗೆ ॥೧೬೦

ತುಱುಗಿದ ನಾಲ್ಕುಂ ಲಕ್ಕೆಯು ।
ಮಱುವತ್ತಱುಸಾಸಿರಂಗಳಂ ಮೇಲಯ್ನೂ ॥
ಱುವತ್ತು ಪಧ್ವಜು ಕ್ಕೈ ।
ನಿಱದವು ಭಾರತಿಕನಾಗೆ ಮಂದಸಮೀರಂ ॥೧೬೧

ಆಧ್ವಜಾವನೀವಳಯವೊಂದು ಯೋಜನಮುಕ್ಕುಮಲ್ಲಿಂದೊಳಗೆ ॥

ನಾಗರ ಕಾಪಿನ ನಾಲ್ಕುಂ ।
ಬಾಗಿಲ್ಗಳನೆಸೆವ ರಜತಗೋಪುರದಿಂದಿಂ ॥
ಬಾಗಿಪ್ಪುದಾತ್ತಗಗನಾ ।
ಭೋಗಂ ಶಾಳಂ ವಿಶಾಳಮರ್ಜುನವರ್ಣಂ ॥೧೬೩

ಅಲ್ಲಿಂ ಮುನ್ನಿನನಿತೆ ನಾಟಕಶಾಲೆಗಳುಮಂ ಧೂಪಘಟಂಗಳುಮ
ತಳೆದು ॥೧೬೪

ಕಲ್ಪಕುಜಭೂಮಿಯೋಜನ ।
ಕಲ್ಪಿತಮೊಳಕೊಂಡು ಸಿದ್ಧಚೈತ್ಯದ್ರುಮಮಂ ॥

೧. ಗಳೊಳೊರೊಂ. ಗ॥ ೨. ತ್ತುಗೆಯ್ದು. ಕ॥ಗ॥ ೩. ಗಳಂಮಯ್ನೂ.
೪. ನಿತ್ಯನಾಟಕ. ಕ॥

ಮಾೞ್ಪುದು ನೇತ್ರೋತ್ಸವಮಂ ।
ಕಲ್ಪಾಮರಖಚರಮಿಥುನಶತಸಂಕೀರ್ಣಂ ॥೧೬೫

ಅಲ್ಲಿಂದೊಳಗೆ ॥೧೬೬

ಕನಕಮಯವೇದಿಯಿಂ ಲೋ ।
ಚನಮಂ ಸೆಱೆಗೆಯ್ವ ನಾಲ್ಕು ಬೆಳ್ಳಿಯ ಬಾಗಿ ॥
ಲ್ವನೆ ಫಣಿಪತಿಗಳ ಕಾಪಿಂ ।
ಜಿನಮಹಿಮೋನ್ನತಿಗೆ ತಾನೆ ತಾಯ್ವನೆಯೆನಿಕುಂ ॥೧೬೭

ಅಲ್ಲಿ ॥೧೬೮

ಎಡೆಯೆಡೆಯೊಳ್ಮಣಿತೋರಣ ।
ವೆಡೆಗಿಱಿದಿರೆ ಪರಮಜಿನಪತಿಪ್ರತಿಕೃತಿಗ ॥
ಳ್ಗೆಡೆಗೊಟ್ಟು ನಾಲ್ಕು ಬೀದಿಯ ।
ನಡುವಿರ್ಪುದು ಬೇೞೆ ನವನವಸ್ತೂಪಂಗಳ್ ॥೧೬೯

ಅವಱ ಕೆಲಂಬಿಡಿದು ಸುತ್ತ ॥೧೭೦

ಗೃಹದೀರ್ಘಿಕೆಯಿಂ ಬಳಸಿದ ।
ಗೃಹವನದಿಂ ಚೈತ್ಯಪೂಜೆಯಿಂ ನಯನಸುಖಾ ॥
ವಹಮಾದುದರ್ಧಯೋಜನ ।
ವಿಹಾರಭೂವಳಯಮಖಿಳಮಣಿಮಯನಿಳಯಂ ॥೧೭೧

ಭವನಾಮರಭವನಂಗಳ್ ।
ಭವನಾಂಗದ್ರುಮವಿಳಾಸಭವನವನಂಗಳ್ ॥
ಭವನಂಗಳ ಚೆಲ್ವಿಂದಭಿ ।

೧. ದಿ. ಕ॥ ೨. ಕೃತಿಗಳ್ । ಗೆ. ಗ॥ ೩. ಪು. ಕ॥
೪. ಯು. ಕ॥ ೫. ಳ್ವಭವವನಂಗಳಚೆಲ್ವಿಂದಭಿ । ಭವಭೂಮಿಗಳೆನಿಸುವದಱ.ಕ॥

ನವಭೂಮಿಗಳೆನಿಪ್ಪವದಱ ಮಣಿಭವನಂಗಳ್ ‖೧೩೨

ಆಡುತ್ತುಂ ಪಾಡುತ್ತುಂ ।
ಮಾಡುತ್ತುಂ ಜಿನಮಹಾಭಿಷವಮಂ ನಾನಾ ‖
ಕ್ರೀಡೆಗಳಿಂದಲ್ಲಿಯ ಮಣಿ ।
ನೀಡಂಗಳೊಳಪ್ಪರ್ಪವಖಿಳಸುರದಂಪತಿಗಳ್ ‖೧೩೩

ಆಭವನಭೂಮಿಯಿಂದೊಳಗೆ ‖೧೩೪

ನವನಿಧಿಯಿನಷ್ಟಮಂಗಳ ।
ನಿವಹಂಗಳನೆಸೆವ ನಾಲ್ಕು ಬಾಗಿಲ್ಗಳುಮಂ ‖
ದಿವಿಜರ್ ದೌವಾರಿಕವೃ ।
ತ್ತಿವೆತ್ತು ಕಾವರ್ ಬೃಹದ್ಗದಾದಂಡಧರರ್ ‖೧೩೫

ಆಕಾಶಸ್ಫಟಿಕಮಯ ।
ಪ್ರಾಕಾರಂ ನೀಳಮುಱುಚತುರ್ಗೋಪುರಮು ‖
ಪ್ರಾಕೃತಗಣಭೂಮಿಗಣ ।
ವ್ಯಾಕೀರ್ಣಂ ಸುಕೃತಕೋಶವೇಕಕೋಶಂ ‖೧೩೬

ಅಲ್ಲಿ ‖೧೩೭

ಆದಿಯ ನಾಲ್ಕು ಬೀದಿಯೆರಡುಂ ಕೆಲವಾಗದ ಭಿತ್ತಿ ತಮ್ಮೊಳೆ ।
ಣ್ಟಾದುವು ಬೀದಿಯಂ ಕಳೆದು ಮತ್ತೆರಡೊಂದೆಸೆಗಾಗೆ ಮತ್ತವೆ ‖
ಣ್ಟಾದುವು ಚಂದ್ರಕಾಂತಮಣಿಭಿತ್ತಿಗಳಂತವಱಂತರಾಳಮಂ ।
ದ್ವಾದಶಕೋಷ್ಠಮಂ ಪೊಗೞಲಿನ್ನಳವೇ[1] ಗಣಭೂಮಿಭಾಗಮಂ ‖

ಅಲ್ಲಿ ವಿಶಾಖಾಚಾರ್ಯರ್ ಮೊದಲಾಗಿರ್ಪತೆಣ್ಬರ್ ಗಣಧರರುಂ ಅಯ್ನೂಱಯ್ವತ್ತಿಂಬರ್ ಪೂರ್ವಧರರುಂ ಇರ್ಪತೊಂಬಯ್ಸಾಸಿರ್ವರ್

1. ಗೆಲ್ವಿತೆ. ಕ॥

ಶಿಕ್ಷಕರುಂ ಇರ್ಛಾಸಿರದಿನ್ನೂರ್ವರವಧಿಜ್ಞಾನಿಗಳುಂ ಇರ್ಛಾಸಿರ ದೊಂಬಯ್ನೂರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಸಾಸಿರದಿನ್ನೂಱಯ್ವತ್ತೆಂಬರ್ ಮನಃಪರ್ಯಯಜ್ಞಾನಿಗಳುಂ ಸಾಸಿರದ ನಾನೂರ್ವರ್ ವಾದಿಗಳುಂ ಅಸಂಖ್ಯಾತದೇವಿಯರುಂ ಮಧುಷೇಣಾರಿಕೆಯುವ್ಮೊದಲಾಗೆ ಅಯ್ವತ್ತು ಸಾಸಿರ್ವರ್ ಜೀಯರುಂ ಮೂಱುಂ ಲಕ್ಕೆ ಶ್ರಾವಕಿಯರುಮೆನಿಪ್ಪ ॥೧೭೯

ಮುನಿಜನಮುನಿಮಿಷಕಾಂತಾ।
ಜನಮಾರ್ಯಶ್ರಾವಿಕಾಜನಂ ಪರಿವಿಡಿಯಿಂ॥
ಜಿನವಲ್ಲಭಪ್ರದಕ್ಷಿಣ।
ಮೆನಿಸಿರ್ಪುದು ಮೊದಲ ದೆಸೆಯ ಕೋಷ್ಠತ್ರಯದೊಳ್॥

ಆಕೋಷ್ಠದಿಂ ಪ್ರೊಱಗೆ ಮಹಾವೀಥಿಯಕ್ಕುಂ ॥೧೮೧

ಮನವೊಸೆದಿರ್ಪರ್ ಜ್ಯೋತಿ।
ರ್ವನಭವನಾಮರಿಯರಲ್ಲಿ ತರತರದಿಂದಂ॥
ಜಿನಪತಿಗೆ ಮುಗಿದ ಕೈವೆರ।
ಸನಿಬರುಮೆರಡನೆಯ ದೆಸೆಯ ಕೋಷ್ಠತ್ರಯದೊಳ್॥೧೮೨

ಅಲ್ಲಿಂ ಪ್ರೊಱಗೆ ಮಹಾವೀಥಿಯಕ್ಕುಂ ॥೧೮೩

ಅವನತಶಿರಸ್ಸರೋಜಂ।
ಭವನವನಜ್ಯೋತಿರಮರನಿಕರಂ ಕ್ರಮದಿಂ॥
ದವತರಿಸಿರ್ಕುಂ ಪರಮೋ।
ತ್ಸವದಿಂ ಮೂಱನೆಯ ದೆಸೆಯ ಕೋಷ್ಠತ್ರಯದೊಳ್॥೧೮೪

ಅಲ್ಲಿಂ ಪ್ರೊಱಗೆ ಮಹಾವೀಥಿಯಕ್ಕುಂ ॥೧೮೫

೧. ಪ್ರಾಪ್ತರು. ಗ॥ ೨. ದೆಱ್ನೂಱ. ಗ॥ ೩. ಚರ. ಕ॥

ಕ್ರಮದಿಂ ಕಲ್ಪಜಭೂಪಾ ।
ದಿಮನುಷ್ಯಮೃಗೇಂದ್ರಸಹಿತಮೃಗಗಣಮಿರ್ಕು೦ ॥
ತಮತಮಗೆ ಮನೋರಾಗಂ ।
ಸಮನಿಸೆ ನಾಲ್ಕನೆಯ ದೆಸೆಯ ಕೋಷ್ಠತ್ರಯದೊಳ್ ॥

ಅಲ್ಲಿಂ ಪೊಱಗೆ ಮಹಾವೀಧಿಯಕ್ಕುಂ. ಇಂತೀಗಣಭೂಮಿಯಿಂದೊಳಗಣಿಂದ್ರನೀಳಮಯಗೋಪುರಚತುಷ್ಟಯಂ ಕಲ್ಪಾಮರಪ್ರತೀಹಾರಕರಿಂ ಸ್ಫಟಿಕಮಯವೇದಿಕೆಯಿಂದೆಸೆವುದು. ಅಲ್ಲಿಂದೊಳಗೇೞುನೂರಯ್ವತ್ತು ಧನುರ್ವಿಸ್ತಾರಮುಂ ಅಷ್ಟಚಾಪೋತ್ಸೇಧಮುಮನಪ್ಪ ಕೆಯ್ದು॥ ೧೮೩

ಮುತ್ತಿನ ಪೊನ್ನ ಮಾಣಿಕದ ನೀಲದ ವಜ್ರದ ರಾಸಿ ಸುತ್ತಲುಂ । ಸುತ್ತಿರೆ ಮಂಗಳೋಪಕರಣಾರ್ಚನೆಗಳ್ ತೆಱಪೇನುಮಿಲ್ಲೆನಲ್ ॥ ಮುತ್ತಿರೆ ನಾಲ್ಕುಮೆಯ್ವಿಡಿದು ಯಕ್ಷರನಕ್ಷರಧರ್ಮಚಕ್ರಮುಂ । ಪೊತ್ತಿರೆ ಮುಖ್ಯಪೀಠಮೆಸೆವತ್ತು ವಿಡೂರಮಣಿಪ್ರಭಾಪ್ರಣ್ಣತೆಂ ॥೧೮೪

ಮತ್ತಮಪೂರ್ವಪ್ರಣುತಾ[1]ಯಮಾನಮುಂ ಚತುರ್ದಶದಂಡೋತ್ಸೇಧಮುಮನಪ್ಪ ಕೆಯ್ದು ॥೧೮೫

ಎರಡನೆಯ ಕನಕರುಚಿವಿ ।
ಷ್ಟರಮಷ್ಟಮಹಾಧ್ವಜಂಗಳಿಂ ಬಹುಪೂಜಾ ॥
ಪರಿಕರದಿನೀವ್ರದೀಕ್ಷಣ ।
ಸರೋಜವಿಕಸನಮನಂಶುಬಾಳಾತಪದಿಂ ॥೧೯೦

ಅಲ್ಲಿಂ ಮೇಲೆ ಚತುರ್ದಶದಂಡೋತ್ಸೇಧಮನಪ್ಪ ಕೆಯ್ದು ॥೧೯೧

೧. ಪ್ರಣಿತಾ. ಗ॥

ಮೂಱುಂ[1] ಕಾಮನ ಬಿಲ್ಲಂ।
ಬೀಱುತ್ತುಂ ಪಂಚರತ್ನರುಚಿಲೇಖೆಗಳಂ[2]॥
ಮೂಱನೆಯ ರತ್ನಪೀಠಂ।
ಮೂಱುಂ ಲೋಕಕ್ಕೆ ತಿಳಕಮಿರ್ದಂತಿರ್ಕುಂ॥೧೯೨

ಅಲ್ಲಿಂ ಮೇಲೆ॥೧೯೩

ನವಶತದಂಡಮಾಭವನದುನ್ನತಿ ವಿಸ್ತರವಲ್ತೆ ನೀಳದಂ।
ತೆವೊಲಱುನೂಱುದಂಡವೆನಲಾರ್ಪರೆ ಭಂಗುರಪತ್ರಭಂಗಮಿ॥
ನ್ನವು ಬಹುವಿದ್ಧಮಿನ್ನವುಪಶಾಖೆಗಳಿನ್ನವು ಮುಖ್ಯಶಾಖೆಯಿ।
ನ್ನವು ಮಣಿಕೂಟಮಿನ್ನವೆನಲಾರ್ಪರೆ ಪದ್ಮಜನುಂ ಫಣೀಂದ್ರನುಂ॥
ಚಿತ್ತಮೆ ಸೂತ್ರಧಾರನೆನೆ ಸೂತ್ರಿಸಿದಂ ಸುರರಾಜನಾಜ್ಞೆಯಿಂ।
ವಿತ್ತಪನಿನ್ನವಿಲ್ಲೆನಿಪ ರನ್ನದಿನೆಂಬ ಜಗದ್ವಿಚಿತ್ರಸು॥
ಪತ್ತಿಗೆ ನೋಂತ ಗಂಧಕುಟಿಯಂ ಪೊಗೞಲ್ಬಗೆದರ್ದರ್ದಮೋಂ।
ಚಿತ್ತದ ಗೊತ್ತು[3] ಕಣ್ಣ ಪದಪೇನೊಳಕೊಳ್ಳದೆ[4] ಮೌನಮುದ್ರೆಯುಂ॥

ಆರತ್ನಾತ್ಮಕಮಪ್ಪ ಗಂಧಕುಟಿಯೊಳ್ ತಂತಮ್ಮ ಗಂಧಂಗಳಂ।
ಸಾರಂಗುಂದಿಸೆ ಜೈನದಿವ್ಯತನುಗಂಧಂ ಬೆಳ್ಮೊಗಂ ಬಿರ್ದರ್ಕ॥
ಪ್ಪೊರ್ದರಂ ಭೃಂಗಮನೆಯ್ದಿದತ್ತು ಮಧುಬಿಂದುವ್ಯಾಜದಿಂ ಮಾಲೆಗಳ್।
ನೀರಾಗುರ್ಕಿದುಮೋಡಿ ಪೋಯ್ತಗರುಧೂಪಂ ವ್ಯೋಮಸೀಮಂ
ಬರಂ॥೧೯೪

ಅಂತನತಿಶಯಮೆನಿಪ ಲಕ್ಷ್ಮೀಮಂಡಪಮಧ್ಯದೊಳ್॥೧೯೫

೧. ನೂಱುಂ. ಗ॥ ೨. ರುಚಿಯಿಂದೆಳಗಂ. ಕ॥ ೩. ಪೊತ್ತು. ಗ॥
೪. ಪದಪೆಂದೊಳಕೊಳ್ಳದೆ ಮೋನ. ಗ॥

ಪದಪಿಂಗಾಶ್ರಯಮೆಂಬ ಕಣ್ಗೆ ನೆಲೆಯೆಂಬೀಚೆಲ್ವಿನೊಳ್ನಿಂದುದ |
ಲ್ತಿದು ಚಿಂತಾಮಣಿ ಕಾಮಧೇನುವಿದೆ ಬೇಱೊಂದಿಲ್ಲೆನಲ್ ಪೆರ್ಮೆವೆ ॥
ತ್ತಿದು ನಿಷ್ಟಪ್ತಸುವರ್ಣಕಾಂತಿಕಮನೀಯಂ ನಾಲ್ವೆರಲ್ಮಿಟ್ಟಡಿ |
ರ್ಪುದು ಸಿಂಹಾಸನದೇಶಮಂ ಚರಮದೇಹಂ ದೇವದೇವೇಶನಾ ॥

ತನುಸೌಂದರ್ಯದೊಳಂ ಪರಾಭವಿಸಿದಂ ಕಂದರ್ಪನಂ ಮೆಯ್ಯ
ಕಂ | ಪಿನೊಳಂ ಬೀಱಿದನಂಗರಾಗಸುರಭಿದ್ರವ್ಯಂಗಳಂ ತನ್ನ ಪ್ರ ॥
ರ್ವಿನೊಳಂ ಕರ್ಬಿನ ಬಿಲ್ಲ[3]ಕೆಚ್ಚನುಡಿದಂ ಮೆಯ್ವೆರ್ಚಿದಂಗಾಲ ಕೆಂ |
ಪಿನೊಳಂ ರಾಗಮನಿಕ್ಕಿ ಮೆಟ್ಟಿದನುದಾರಂ ಮಲ್ಲಿಭಟ್ಟಾರಕಂ ॥ ೧೯೯

[4]ಅನವದ್ಯಂ ತಳೆದಂ [5]ಮನೋಜ್ಞಮೆನಿಸಲ್ ಸಾಲಾದ್ಯಸಂಸ್ಥಾನ
ಸಂ | ಹನನಂ ಸುಂದರಲಕ್ಷಣಂ ಸುಭಗರೂಪಂ ನಿರ್ಮಳತ್ವಂ ಹಿತ ॥
ಸ್ವನಮಸ್ವೇದಮನಂತವೀರ್ಯತೆ ಸಿತಾಸೃಗ್ದಿವ್ಯಗಂಧಂಗಳೆಂ |
ಬಿನಿತುಂ ಕಾಯಿಕಮಂ ದಶಾತಿಶಯಮಂ ಶ್ರೀಮಲ್ಲಿಭಟ್ಟಾರಕಂ ॥ ೨೦೦

ಚತುರಾಸ್ಯತ್ವಮಭುಕ್ತಿಕೇಶನಖಸಾಮ್ಯಂ ನಿರ್ನಿಮೇಷಂ ನಭೋ |
ಗತಿ ವಿದ್ಯಾವಿಭವಂ ನಿರಸ್ತವದತುತ್ಸೇನೋಪಸರ್ಗಂ ಚತು ॥
ಶ್ಶತಗವ್ಯೂತಿಸುಭಿಕ್ಷತಾವಿಭವ[6]ಮಚ್ಛಾಯತ್ವಮೆಂದಿಂತಿವಂ |
ಕೃತಕೃತ್ಯಂ ತಳೆದಂ ದಶಾತಿಶಯಮಂ ಶ್ರೀಮಲ್ಲಿಭಟ್ಟಾರಕಂ ॥ ೨೦೧

ಆಗಳಾತ್ರಿಭುವನೈಕವಲ್ಲಭಪ್ರಭಾಮಂಡಳಮಂ ಮಂಡಳಿಸಿ ಚತುಷ್ಷಷ್ಟಿಧವಳಚಾಮರಂಗಳಾಗಳಾಗಳೊಗೆವ ತಿಂಗಳ ಕೆಂಗದಿರ್ಗಳೆನಿಸೆಯುಂ ತೋಱುಮುತ್ತಿನ ಮುಕ್ಕೊಡೆ ಪೊಂದಾವರೆಯುರಲ ಡವಕೆಯೆನಿಸೆಯುಂ ವಿಕಚದಶೋಕಲತೆ ವಿದ್ಯುಲ್ಲತೆ ಮಡಲ್ತುದೆನಿಸೆಯುಂ ಸುರವ

೧. ತ್ತಿದು. ಕ॥ ೨. ನು. ಗ॥ ೩. ಬಿಚ್ಚ. ಕ॥
೪. ಅನವದ್ಯಂತಮಹಾ. ಕ॥ ೫. ಮನೋದ್ಯ. ಕ॥ಗ॥ ೬. ಮತ್ಸಾಯ. ಕ॥

ಟಕಪೇಟಕಂ ಹೇಮಾಭ್ರಕಧೃತಿಯಿನಣ್ಕೆಗೆಯ್ದುದೆನಿಸೆಯುಂ ಸುರಕುಸುಮವೃಷ್ಟಿ ರೈವೃಷ್ಟಿಯೆನಿಸೆಯುಂ ಶೋಣಮಣಿಸಿಂಹವಿಷ್ಟರಂ ಕನಕವಿಷ್ಟರಮೆನಿಸೆಯುಂ ಕುಸುಮದೆಸಳ ಸೊವಡಿಂಗೆಱಗುವ ಮಱಿದುಂಬಿ ಪೊಂದಾವರೆಯ ರಜದೊಳ್ ಪೊರೆದ ತುಂಬಿಯೆನಿಸೆಯುಂ ರನ್ನದ ಸೂಸಕಂ ಪೊನ್ನಸೂಸಕಮೆನಿಸೆಯುಂ ಮರಕತಮಣಿತೋರಣಂ ವಿಡೂರಮಣಿತೋರಣಮೆನಿಸೆಯುಂ ಪೊಳೆವ ಪಳಕಿನ ಭಿತ್ತಿ ಪೊಂಬಟ್ಟೆಯಿಂ ತೆರೆ[೧]ಸುತ್ತಿದುವೆನಿಸೆಯುಂ ಸಿತಪತಾಕೆ ಪೊಮ್ಮುಗಿಲ ತೆರೆಗೇಱ್ಗಿಯೆನಿಸೆಯುಂ ನೀಳಮಣಿಭೂಮಿ ಪೊಂಗಾಜಿನ ಭೂಮಿಯೆನಿಸೆಯುಂ ದೆಸೆಗಳೆಲ್ಲಂ ಕೊಸಗಲರ್ದುವೆನಿಸೆಯುಂ ಅಮರಕಾಮಿನೀಸಮಿತಿ [೨]ಸೌದಾಮನೀಕಾಮಿನಿಯರೆನಿಸೆಯುಂ ಯಕ್ಷಾಮರಕರಕಳಿತಧರ್ಮಚಕ್ರಮೆಳನೇಸಱೆನಿಸೆಯುಂ ಸಭಾಸದರೆಲ್ಲಂ ಧರ್ಮಾನುರಾಗರಸಪ್ರವಾಹದೊಳವಗಾಹಮಿರ್ದರೆನಿಸೆಯುಮನನ್ಯಸಾಮಾನ್ಯಮೆನಿಸಿ ॥೧೦೨

ಪೊರೆಯೆತ್ತಿದ ಕುಡುಮಿಂಚಿನ ।
ತಿರುಳಂ ಮಸೆದಂತೆ ಮೆಯ್ಯ ಬಣ್ಣಂ ಬಂಬ ॥
ಲ್ದೊರೆಮಸಗೆ ಗಂಧಕುಟಿಯೊಳ್ ।
ಕರಮೆಸೆದಂ ಭುವನವಲ್ಲಭಂ ಮಲ್ಲಿಜಿನಂ ॥೧೦೩

ಅನ್ನೆಗಮಿತ್ತಲ್ ॥೧೦೪

ಭವನಾವಾಸದವರ್ ಪದಿಂಬರಮರೇಂದ್ರರ್ ವ್ಯಂತರಾವಾಸಸಂ ।
ಭವರೆಣ್ಬರ್ ಶಶಿಸೂರ್ಯರಿರ್ವರುಱಿದರ್ ಪನ್ನಿರ್ವರಿಂದ್ರರ್ ನಭೋ ॥
ವಿವರಂ ತಮ್ಮ ಬಲಕ್ಕೆ ಸಾಲದೆನೆ ಮೂಱುಂ ಲೋಕಮೊಂದಾಗಿ ಬ ।

೧. ಸುತ್ತಿದವೇಮಿಯೆನಿಸೆ, ಗ॥ ೨. ಸೌದಾಮಿನೀಪತಿಸೌದಾಮನೀಕಾಮಿನಿಯು, ಕ॥

ರ್ಪಮೊಲೇಂ ಬಂದರೊ ಮಾಳ್ಪ ಕೌತುಕದಿನಾಕೈವಲ್ಯಮಾಂ
ಗಲ್ಯಮಂ ॥೨೦೫॥

ಆಗುಳ ಪುಟ್ಟ[೧] ನೋಟಕರ ದಿಟ್ಟಿಗೆ ಲೆಕ್ಕಿಪ ತಕ್ಕುಗೆಟ್ಟು ಗೆಂ।
ಟಾಗೆ ಮನಕ್ಕೆ ಚೆಕ್ಕಸದ ತೆಂದಲಗುಂದಲೆಯಾಗೆ ಕಾಲಿಡ।
ಲ್ಕಾಗಸಮೇನುಮೆಯ್ದದೆನೆ [೨]ಬೇಸಱ್ ನೇಸಱ ಕೇಱ ಗಾಳಿಗಳ್ ।
ಪೋಗೆಡೆಗೆಟ್ಟು ಬಂ[೩]ದುದು ಚತುರ್ವಿಧದೇವನಿಕಾಯಸೈನಿಕಂ ॥

ಮಿಂಚಂ ಮೇಣರೆದುಯ್ದನಾಗಸದೊಳುದ್ಯೋತಂಗಳಂ ಮೇಣ
ಜಂ । ಸಂಚಂ ಮಾ[೪]ಡಿದನಲ್ಲದಂದು ಬಿಸುಪಂ ಬಿಟ್ಟಾತಪಂಬಿಟ್ಟ
ತ ॥ ಣ್ಪಂ ಚಂದ್ರಾತಪಮೊಡ್ಡುಗೊಂಡುದೆನೆ ನಾನಾಭೂಷಣಚ್ಛಾಯೆ
ಯುಂ । ಚಂಚದ್ದೇಹಮರೀಚಿಯುಂ ಬೆಳಗೆ ಚೆಲ್ವಾದತ್ತು ದೇ
ವಾಗಮಂ ॥೨೦೬॥

ಅಂತು ಸಮವಶರಣಮಂಡಳಪರಿಸರಂ ಮಹೀಮಂಡಳಕ್ಕವತರಿಸಿ॥

ಧವಳಚ್ಛತ್ರಂಗಳಂ ಕೇತನವಿತತಿಗಳಂ ರಾಜ್ಯಚಿಹ್ನಂಗಳಂ ರ।
ತ್ನವಿಮಾನಶ್ರೇಣಿಯಂ ದೂರದೊಳರಿಸಿ ಜಗನ್ನಾಥನಾಸ್ಥಾನಮಂ
ನೋ ॥ ಡುವಲಂಪಿಂ ಕಲ್ಪಕಾಂತಾಸಮಿತಿವೆರಸು ಸೌಧರ್ಮಕಲ್ಪಾಮ
ರೇಂದ್ರಂ । ನವರತ್ನೋತ್ತಾನಸೋಪಾನಮನಡಿದಳ*ರ್ಗಂಪಿಂದಮಂದ
ಣ್ಕೆಗೆಯ್ದಂ ॥೨೦೭॥

ಅಂತು ಸೋಪಾನಪಙ್ಕ್ತಿಯನೇಱ ಪಂಚರತ್ನಧೂಳೀಶಾಳದಿಂ ಪರಿವೇಷಂಗೊಂಡ ಸಮವಶರಣಮಂಡಳಮಂ ಪುಗುವ ಸಹಸ್ರಾಕ್ಷನ ಸಹಸ್ರಲೋಚನಮರೀಚಿಗಳಖಿಳದಿವಿಜನಾಯಕರ ದಿಟ್ಟಗಳುಮನಚ್ಚರಗಣಿಕೆಯರ ದಿಟ್ಟಗಳುಮನೊಡನೆ ಕೂಡಿಕೊಂಡು ಚಕ್ರವಾಳ

೧. ಬೇವಸದ. ಕ॥ ೨. ಬೇಸಱ. ಕ॥ ೩. ಮುಯ್ವನಾ. ಗ॥ ೪. ಮೋಡು. ಕ॥

ಭೂಮಿಯ ಚಿತ್ರದಂಚೆಯೊಡನೆ ನೆಱಲಂಚೆಯಾಡಿಯುಂ ಜಳಖಾತಿಕಾ ಭೂಮಿಯ ನೀರ್ವಕ್ಕಿಗಳೊಡನೆ ನೀರಾಟವಾಡಿಯುಂ ವಲ್ಲೀವನ ಭೂಮಿಯ ಮಱಿದುಂಬಿಯ ಬಂಬಲೊಡನೆ ಪರಿಮಱಿಯಾಡಿಯುಂ ಉಪವನಭೂಮಿಯ ಗಿಳಿಗಳೊಡನೆ ಗಿಲಿಗಿಲಿಗಂಬವಾಡಿಯುಂ ಧ್ವಜ ಭೂಮಿಯ ಪಱಿಯಿಗೆಗಳೊಡನೆ ಪೆಕ್ಕಣವಾಡಿಯುಂ ಕಲ್ಪಭೂಮಿಯ ಕೋಗಿಲೆಗಳೊಡನೆ ತಳಿರುಯ್ಯಲಾಡಿಯುಂ ಭವನಭೂಮಿಯ ಪಾರಿವಂಗಳೊಡನಡಂಗುಱುಚಾಡಿಯುಂ ಗಣಭೂಮಿಯ ಗೋಪುರಮಣಿಕಳಶಮರೀಚಿಪಲ್ಲವದೊಡನೆ ಚೆಲ್ಲವಾಡಿಯುಂ ತಣಿಯದೆ ಮತ್ತುಂ ॥೨೧೦

ಬಗೆಯೊಳ್ ಕೌತೂಹಳಂ ಕೈಮಿಗೆ ಪುಳಕಿಸೆ ಮೆಯ್ಯಾಮ್ರನಗಂಬಾಗಳಂ ನಾ । ಟ್ಯಗೃಹಗ್ರಾಮಂಗಳಂ ಧೂಪಘಟಕಟಕಮಂ ಸಿದ್ಧಚೈ[1]ತ್ಯದ್ರುಮಶ್ರೇ ॥ ಣಿಗಳಂ ಸ್ತೂಪಂಗಳಂ ತೀವಿದ ನವನಿಧಿಯಂ ಮಂಗಳದ್ರವ್ಯಮಂ ದ್ವಾ । ರಗೃಹಸ್ತೋಮಂಗಳಂ ಸುತ್ತಿದುವು ಸುೞಿದು ಸುತ್ರಾಮನೇತ್ರಾಂಶುಕಂಗಳ್ ॥೨೧೧

ಅಂತು ಸಮವಶರಣಭೂಮಿಗಳಂ ನೋಡಿ ಮೆಚ್ಚುತ್ತುಂ ಬಂದು ॥

ಚರಣನಖಾಂಶು ನೀರ್ದಳಿಯೆ ಪಾದತಳಂ ಕುಸುಮೋಪಹಾರಮಂ । ವಿರಚಿಸೆ ಪದ್ಮರಾಗಮಣಿಮುದ್ರಿಕೆ ತೆಣ್ಜಡರೆತ್ತೆ ಮೌಕ್ತಿಕಾ ॥ ಭರಣಮರೀಚಿಮಾಳೆ ಗುಡಿಗಟ್ಟೆ ಗೃಹಾರ್ಚನೆ ಪುಟ್ಟೆ ಮೂಱು ಸೂೞ್ । ಸುರಪತಿ ಮಲ್ಲಿನಾಥಸಭೆಯಂ ಬಲಗೊಂಡನುದಾತ್ತಭಕ್ತಿಯಿಂ ॥೨೧೨

೧. ಚೈತ್ರ. ಕ॥ ೨. ಸುದಾರ, ಕ॥

ಅಂತು ಬಲಗೊಂಡು ॥೨೧೪

ಎವೆಯಿಕ್ಕದ ನಯನಂಗಳ ।
ಸಮುದಾಯಂ ಮಲ್ಲಿಜಿನನ ಪೆಸಱಕ್ಕರದಂ ॥
ತಮರ್ದಿಱರೆ ನಿಂದಂ ಬಾಗಿಲೊ ।
ಳಮರೇಂದ್ರಂ ರತ್ನಶಾಸನಸ್ತಂಭದವೊಲ್ ॥೨೧೫

ಅಂತು ನಿಂದು ನಮೇರುಮಂದಾರಪಾರಿಜಾತದಲರನುತ್ತಾನಿತಕರಕಿಸಲಯಪುಟಂಗಳೊಳ್ ತೆಕ್ಕನೆ ತೀವಿಕೊಂಡು ॥೨೧೬

ಅಮರಸ್ತ್ರೀಜನಮರ್ಚನೋಪಕರಣದ್ರವ್ಯಂಗಳಂ ತಾಳ್ದಿ ಜಂ ।
ಗಮವಲ್ಲೀವನಲೀಲೆಯಿಂ ಬರೆ ಸಹಸ್ರಾಕ್ಷಂ ಮನಂಗೊಂಡು ಜಂ ॥
ಗಮನೀಳೋತ್ಪಳಷಂಡದಂತೆ ಪುಗುತಂದಂ ಭಂಗುರಾಸ್ಥಾನರಂ ।
ಗಮನಾಗಳ್ ಪರಿಷದ್ವಿಳೋಚನಮುದಾಳಿಶ್ರೇಣಿ ಮೇಲ್ವಾಯ್ವಿನಂ ॥

ಅಂತು ಬಂದು ಜಗತ್ತ್ರಯಪತಿಯ ಪಾದಪೀಠೋಪಕಂಠದೊಳ್ ಪುಷ್ಪಾಂಜಳಿಕ್ಷೇಪದೊಡನೆ ಸರ್ವಾಂಗಪ್ರಣಾಮಮನೊಡರ್ಚಿ ಕಿಂಚಿ[1]ನ್ನಮಿತಮಣಿಮಕುಟನುಂ ಮುಕುಳಿತಕರಪುಟನುಮಾಗಿ ॥೨೧೮

ಆತಪಬಾಧಾರಹಿತಂ ।
ಗಾತಪವಾರಣದೊಳೇಂ ಜಗತ್ತ್ರಯನಾಥ ॥
ಖ್ಯಾತಿಗೆ ನಿಮಿತ್ತಮಿರ್ಕುಂ ।
ಶ್ವೇತಾತಪವಾರಣತ್ರಯಂ ನಿನಗೆ ಜಿನಾ ॥೨೧೯

ಸ್ಯಾದ್ವಾದಶ್ರೀರಮಣ ಭ ।
ವದ್ವಿಭವಮನಱಿಪುವಂತೆ ಘೋಷರ್ಗಳಿಮಪ್ಪ ಶ ॥

೧. ಕಿಂಚಿದುನ್ನಮಿತ. ಗ॥

ಬ್ದಾದ್ವಿಕೃತವೆಂಬಿನಂ ಸಾ।
ರ್ಧದ್ವಾದಶಕೋಟವೇವದುಂದುಭಿಯ ರವಂ ॥ ೭೦
ಪ್ರಸಿವ ಪಿಸುಣಾಡುವಳಿವಂ।
ಪೊಸಯಿವ ಪೊಲದೆಡೆಗೆ ದೇವ ವರಭಾಷೆಯನೇ ॥
ಱಸಿ ದಿವ್ಯಭಾಷೆ ಜಿನ ನಿನ।
ಗೆಸೆವುದು ಸಾರ್ಥಂ ಪ್ರಸನ್ನಸಕಳವದಾರ್ಥಂ ॥ ೭೧
ಪರಮಶ್ರೀಸುಂದರಿಯೊಳ್।
ಪರಿಣಯನೋತ್ಸಾಹದವಾಗೆ ಲಾಜಾಂಜಳಿಯಂ ॥
ಸುರಿವಂತೆ ದೇವ ನಿನಗೇಂ।
ಕರಮೆಸೆವುದೊ ಪಾರಿಜಾತಕುಸುಮಾಸಾರಂ ॥ ೭೨
ಆತಪದಿಂ ತಾಪಂ ಚೆಂ।
ದ್ರಾತಪದಿಂದೈಕಿಲಪ್ಪ ದಿಪ್ಪ ವರಪೀಡಾ ॥
ಹೇತುಗಳಿರುಳುಂ ಪಗಲುಂ।
ದ್ಯೋತಿಪ್ಪವೆನಿಪ್ಪವು ಜಿನೇಂದ್ರ ನಿಜಭಾವಳಿಯುಂ ॥ ೭೩
ಪೆಱಪೆಱಪ್ಪ ಪೀಠಮುಕ್ಕಂ।
ಪೆಱಪೆಱಗೆ ಜಿನೇಂದ್ರ ಮೋಹಮದಗಜಮಂ ನೀ ॥
ನಱಿಯಟ್ಟೆದುದರ್ಕಿದೆ ಪೆ।
ಗಱಿಪನೆ ನಿನಗೆಸೆವುದಲ್ತೆ ಗಪರಿಪ್ರಕೀಠಂ ॥ ೭೪
ಅಪವರ್ಗಶ್ರೀಯ ಕಟಾ।
ಕ್ಷಪಾತವೆಂತಂತೆ ಚಂದ್ರಿಕಾಧವಳಂಗಳ್ ॥
ಚಪಳಂಗಳ್ ಜಿನಪತಿ ನಿನ।

ಗೆ ಪೊಳೆವ್ರುದಱುಪತ್ತು ಸಾಲ್ಕು ಚಮರರುಹಂಗಳ್ ‖ ೨೨೫

ಜವನಿಂ ಶೋಕಾಕ್ರಾಂತಂ ।
ಭುವನಂ ಜಿನ ನಿನಗಶೋಕಲಾಂಛನವಾಯ್ತು ।
ಜವನಂ ಗೆಲ್ದುದಱಿಂದೆಂ ।
ಬವೊಲುಲಿದುದು ಚಂಚರೀಕರವದಿನಶೋಕಂ ‖ ೨೨೬

ಎಂದು ನಿರ್ಭರಭಕ್ತಿಯಿಂ ಸ್ತುತಿಯಿಸಿ ‖ ೨೨೭

ಚರುವಮಣಿಪರ್ಯಾಣಕ್ಕೆ ಬಿಡುಮುತ್ತಿನ ಸೇಸೆಗೆ ಧೂಪಭಾಜನ।
ಕ್ಕರುಣಮಣಿಪ್ರದೀಪಿಕೆಗೆ ಕಲ್ಪಫಳಕ್ಕೆ ಸಮೇರುಪುಷ್ಪಮುಂ ‖
ಜರಿಗೆ ಸುಗಂಧಶುಕ್ತಿಕೆಗೆ ಪುಣ್ಯನದೀಜಳಪೂರ್ಣರತ್ನಭಾ।
ಸುರಕಳಶಕ್ಕೆ ಮೇರೆ ಪವಣಿಲ್ಲೆನೆ ಪೂಜಿಸಿದಂ ಸುರಾಧಿಪಂ ‖ ೨೨೮

ಎನಿತೊಳವಾತಪವಾರಣ ।
ವೆನಿತೊಳವು ವಿಚಿತ್ರಪಲ್ಲವಾಂಚಿತಮಣಿಕೇ ‖
ತನವೆನಿತೊಳವಾಭರಣಮ ।
ವನಿತಱೊಳಂ ದೇವರನಿಬರುಂ ಪೂಜಿಸಿದರ್ ‖ ೨೨೯

ಪೂವಲಿಯುಂ ಪರಕಲಿಸುವ ।
ದೇವಾಂಗವಿತಾನಮುಂ ತೊಡರ್ಚುವ ನವಮು ‖
ಕ್ತಾವಳಿಯುಂ ಕಟ್ಟುವ ಡಿ ।
ಗ್ದೇವಿಯರೇಂ ರಾಗರಸದೊಳೋಲಾಡಿದರೋ ‖ ೨೩೦

ಅಗರುವ ಧೂಮಲತಾಶಾ ।
ಖೆಗಳೆಳಗಾಯ್ತುದುಗಲೆಂದು ಬಗೆ ಬೆದಱುವಿನ್ನ ‖

೧. ಪುದಱು. ಕ‖ ೨. ಪೊಲಿರ್ದುದು. ಕ‖

ಮುಗಮುಗಿಸುವ ತನಿಗಂಪಿಂ।
ಗಗಲದೆ ಮೊಗಸಿದುವು ಮಧುಕರಪ್ರಕರಂಗಳ್ ॥೨೩೧
ಮರಕತಕಳಶಂಗಳ್ ಕೇ।
ಸರಿಪೀಠಮನುದ್ಗತಾಂಶುಲೇಖಾದೂರ್ವಾಗ್ರಂ॥
ಕುರದಿಂ¹ದರ್ಚಿಸಿ ಮುಕ್ತಾ।
ಭರಣಮನರ್ಚಿಸಿದುವಂಶುಜಳಧಾರೆಗಳಂ ॥೨೩೨

ಅಂತಮರಪತಿಗಳರ್ಚಿಸಿ ತಂತಮ್ಮ ಕೋಷ್ಠಂಗಳೊಳ್ ಕುಳ್ಳಿರ್ಪನ್ನೆವಂ ಮಲ್ಲಿಜಿನವಲ್ಲಭನಭಿಮುಖದೊಳಿರ್ದ್ದ ವಿನತಮಸ್ತಕನುಂ ಮುಕುಳಿತಹಸ್ತನುಮಾಗಿ॥೨೩೩

ಅತಿಶಯಮಪ್ಪ ನಾಲ್ಕಮಳಬುದ್ಧಿಗಳಿಂದಳವಟ್ಟ ²ಋದ್ಧಿಸಂ।
ತತಿಗಳನೊಂದಿ ಸಂಧಿಸಿದ ಬೋಧಚತುಷ್ಟಯದಿಂ ತ್ರಿಳೋಕವಿ॥
ಶ್ರುತನೆನಿಸಿರ್ದ್ದ ಸಪ್ತಮುನಿಮುಖ್ಯವಿಶಾಖಗಣಾಧಿಪಂ ಜಗ।
ತ್ಪ್ರತಿಯನನಂತಬೋಧನಿಧಿಯಂ ಬೆಸಗೊಂಡನಶೇಷತತ್ತ್ವಮಂ॥

ಅಂತು ಬೆಸಗೊಳ್ವುದುಂ ॥೨೩೪

ನಿರುಪಾಧಿಪ್ರಸರಂ ನಿರಸ್ತಪುನರುಕ್ತಂ ದ್ರವ್ಯಪರ್ಯಾಯಗೋ।
ಚರಮವ್ಯಾಕುಳಮೇಕಯೋಜನಜನಾಪ್ತಂ ಸರ್ವಭಾಷಾತ್ಮಕಂ॥
ಸುರವೃಂದಾರಕಚಕ್ರವರ್ತಿಗಣಪ³ಪ್ರಶ್ನಾನುಗಂ ಸ್ಯಾತ್ಪದ।
ಸ್ಫುರಿತಂ ಪೊಣ್ಮಿದುದಂತನಂತಮಹಿಮಂ ದೇವಂಗೆ ದಿವ್ಯ⁴ಸ್ವನಂ॥

ಅಂತಪಗತತಾಲ್ವೋಷ್ಠಪುಟವ್ಯಾಪಾರಮೆನಿಪ ದಿವ್ಯಧ್ವನಿಯೊಳರ್ಹತ್ಪರಮೇಶ್ವರಂ ಬೆಸಸುವುದು⁵ಮುತ್ತಂಸಿತಜಿನಚರಣಚಂದ್ರಲೇ

೧. ದರ್ಚಿಸೆ. ಕ॥ ೨. ವೃದ್ಧಿ. ಕ॥ ೩. ಪ್ರಸ್ನಾನ. ಕ॥
೪. ಸ್ವನಂ. ಕ॥ ೫. ಮತ್ತಂ ಶ್ರಿತ. ಕ॥

ಖನುಮುನ್ಮೂಲಿತಸಂಸಾರವಿಟಪಿಶಾಖನುಮಪ್ಪ ವಿಶಾಖಗಣಪ್ರಮುಖಂ ಮಾರ್ಗಶಿರಸಿತೈಕಾದಶಿಯ ಪೂರ್ವಾಹ್ಣದೊಳ್ ದ್ವಾದಶಾಂಗದರ್ಥಂಗಳುಮನಪರಾಹ್ಣದೊಳ್ ಚತುರ್ದಶಪೂರ್ವ[೧]ದರ್ಥಪದಂಗಳುಮನವಧಾರಿಸಿ ಪ್ರಥಮಾನುಯೋಗಂ [೨]ಕರಣಾನುಯೋಗಂ ಚರಣಾನುಯೋಗಂ ದ್ರವ್ಯಾನುಯೋಗಮೆಂಬ ನಾಲ್ಕುಂ [೩]ಕಲ್ಪಮಾಗೆ ಗ್ರಂಥರಚನೆಯುಂ ಮಾಡಿ ಸಭಾಜನಹೃದಯಮಣಿಭಾಜನದೊಳ್ ಧರ್ಮಾಮೃತಮಂ ತೀವೃತ್ತುಮಿರ್ಪುದುಮಾಗಳ್ ॥ ೨೩೭

ಹಿತಮಂ ವಿಶ್ರುತಮಂ ದಯಾಮಹಿತಮಂ ಸ್ಯಾದ್ವಾದವಿದ್ಯಾಸಮ।
ನ್ವಿತಮಂ ಸನ್ಮತಮಂ [೪]ನಿಯೋಜಿಸಿ ವಿನೇಯಶ್ರೇಣಿಯುಂ ಕೂಡಿ ನಿ।
ರ್ವೃತಿಯಂ ಪೊರ್ದಿಸಲಿರ್ದ ದೇವಗಮನಾಭಿಪ್ರಾಯಮಂ [೫]ತತ್ಸಭಾ।
ಪತಿ ದಿವ್ಯಾವಧಿಬೋಧದಿಂದಮಱಿದಂ ಸೌಧರ್ಮಕಲ್ಪಾಧಿಪಂ ॥ ೨೩೮

ತದನಂತರಂ ॥ ೨೩೯

ಸದಯಸ್ವಾಂತಮಯೂರನೀರದರವಂ ದುರ್ಮೋಹಸಂದೋಹಶೈ।
ಲದರೀವಜ್ರರವಂ ದಯಾಮೃತನದೀಕಲ್ಲೋಲಮಾಲಾರವಂ ।
ಮದನವ್ಯಾಳಗಜೇಂದ್ರಸಿಂಹರವಮೆಂಬನ್ನಂ ಮರುದ್ವಾದಿತಂ ।
ಪುದಿದತ್ತಂಬರಮೆಲ್ಲಮಂ ಜಿನಸಭಾಪ್ರಸ್ಥಾನಭೇರೀರವಂ ॥ ೨೪೦

ಆಗಳ್ ॥ ೨೪೧

ಕುನಯಕ್ಷೋಣಿಧ್ರಮಂ ಚೂರ್ಣಿಸೆ ನಿಜಮತವಜ್ರಪ್ರಹಾರಂ ತ್ರಿ
ಲೋಕೀ। ಜನಮೋಹಧ್ವಾಂತಮಂ ಸಂಹರಿಸೆ ನಿಜತನುಚ್ಛಾಯೆ

೧. ರ್ಥರಿಪದ. ಕ॥ ೨. ಚರಣಾ...ಕರಣಾ. ಗ॥ ೩. ವಿಕಲ್ಪ. ಗ॥
೪. ವಿಯೋಜಿಸ॥. ಗ ೫. ತಚ್ಛಚೀಪತಿ. ಗ॥

ದುವೃತ್ತ್ರಕೀನಾ॥ ಶನ ಸೇನಾಚಕ್ರಮಂ ಚಾಳಸೆ ನಿಜವಿಜಯಾರಂ
ಭಗಂಭೀರಭೇರೀ। ಧ್ವನಿ ಧರ್ಮಾನುಗ್ರಹಾರ್ಥಂ ನಿಜಮೆನೆ ತಳರ್ದಂ
ಧರ್ಮಚಕ್ರಾಧಿನಾಥಂ ॥೨೪೨

ಪಾಡೆ ಮಱುದುಂಬಿ ಕೈನಿಱಿ।
ದಾಡೆ ಲತಾಪಲ್ಲವಂ ಲತಾಂತಾಸವದೊಳ್॥
ಮೂಡಿ ಮುಳುಗಾಡಿ[೧] ತಣ್ಣನೆ।
ತೀಡಿದನನುಕೂಳಮಂದಮಾರುತನಾಗಳ್॥೨೪೩

ಪರೆಯೆ ಘನತಿಮಿರಪಟಳಂ।
ನಿರಸ್ತಮೆನಿಸಿರೆ ರಜೋವಿಕಾರಂ ಯೋಗೀ॥
ಶ್ವರಹೃದಯದಂತೆ ರೋದೋಂ।
ತರಮುಂ ದೆಸೆಯುಂ ಪ್ರಸನ್ನಮೆನಿಸಿದುವಾಗಳ್॥೨೪೪

ಗಿಡುಬಳ್ಳಿಮರಂಗಳ್ ದಾಂ।
ಗುಡಿಯಿಂ ತಳಿರಿಂದರಲ್ಗಳಿಂ ಪಣ್ಪಳದಿಂ॥
ಪಡೆದುವು ಚೆಲ್ವಂ ಜಿನಪತಿ।
ನಡೆವೆಡೆಯೊಳ್ ನೆಲಸೆ ತಮ್ಮೊಳಾಱುಂ ಋತುಗಳ್॥೨೪೫

ಮರಕತದ ಜಗಲಿವೋಲು।
ರ್ವರೆಯೆಲ್ಲಂ ಸರ್ವಸಸ್ಯದಿಂ ನಯನಮನೋ॥
ಹರಮೆನೆ ವಸುವ್ರ್ವೆತ್ತುದು।
ಪರಮಜಿನೇಶ್ವರನ ಗಗನಗಮನೋತ್ಸವದೊಳ್॥೨೪೬

ಮಣಿದರ್ಪಣಸಮಮೆನೆ ಧಾ।
ರಿಣಿ ರತ್ನದ್ಯುತಿಯಿನೆಸೆಯೆ ತಂತಮಗೆ ಮರು॥

೧. ಮುಳುಕಾಡಿ. ಗ॥ ೨. ಪಿಶಾಸಂ. ಗ॥

ದ್ಗಣಮಲ್ಲಿ ಧೂಳಿಕಂಟಕ ।
ತೃಣಕೀಟಕಶರ್ಕರೋಪಲಮನು[1]ಪಶಮಿಪರ್ ॥೧೪೭॥
ಘನಸಾ[2]ರವಿಮಿಶ್ರಿತಚಂ ।
ದನರಸಮಂ ತಳಿದರೊಂದು ಯೋಜನದ[3]ನಿತಂ ।
ಸ್ತನಿತಕುಮಾರರೆನಲ್ ಪೊಗ ।
ಳ್ವಿನಳವೆ ಜಿನಪತಿಯ ವಿಭವದತ್ಯುನ್ನತಿಯಂ[4] ॥೧೪೮॥
ನೆನೆದಂಗೆ ನಿರ್ವೃತಿಶ್ರೀ ।
ಯುನೀವ ಜಿನಚರಣಸರಸಿಜಂ ನಡೆವೆಡೆಯೊಳ್ ।
ತನಗಿಂದ್ರಂ ಕೆದಱಿದ ಕೋ ।
ಕನದಂಗಳ ಸಿರಿಯನಪ್ಪುಕೆಯ್ದುವು ಪಿರಿದುಂ ॥೧೪೯॥
ಸುರರೋರೊರ್ವರನೊರ್ವರ್ ।
ಕರೆವ ರವಂ ಕಿವುಡುವಿಡ್ವಿನಂ ದೆಸೆ ರೋದೋಂ ।
ತರಮಂ ತೀವಿದುದಾಗಳ್ ।
ತೆರೆಮಸಗುವ ತೋಯನಿಧಿಯ ರವಮೆಂಬಿನೆಗಂ ॥೧೫೦॥
ಪರಮದಯಾನಿಧಿಯೆನಿಸಿದ ।
ಪರಮನ ಸನ್ನಿಧಿಯಿನಖಿಳದೇಹಿಗವಾಗಳ್ ।
ದೊರೆಕೊಂಡತ್ತಾನುದಂ ।
ವಿರೋಧಮಂ ಪತ್ತುವಿಟ್ಟು ಮೈತ್ರೀಭಾವಂ ॥೧೫೧॥
ಮಂಗಳಪರಿಕರಮಂ ದೇ ।
ವಾಂಗನೆಯರ್ಪಿಡಿದು ಮುಂದೆ ನಡೆವವಸರದೊಳ್ ।

೧. ಶಮಿಸಿರ್ಪರ್. ಕ॥ ೨. ಸಾರಮಿಶ್ರಿತಂ ಚಂದ. ಕ॥
೩. ಮನಿತಂ. ಕ॥ ೪. ಯಾ. ಕ॥

ಜಂಗಮಕಲ್ಪಲತಾನಿವ ।
ಹಂಗಳ ಚೆಲ್ವಿಂಗೆ ಭಂಗಮಂ ಪುಟ್ಟಿಸುವರ್ ॥ ೧೫೧

ಪರಿವೇಷಂಗೊಂಡವೋಲ್ಕಣ್ಗೊಳಿಸೆ ಬಳಸಿ ಕಾಲ್ಗಿಪಿನೊಳ್ಪುರ್ವ ಯುಕ್ತಾ । ಮರಸೇನಾಚಕ್ರಚೂಡಾಮಣಿಕಿರಣಮನಾ ಶಾರ್ಕಭಾಚಕ್ರ ದೀಕ್ಷಾ ॥ ಗುರು ಧರ್ಮದ್ರೋಹಚಕ್ರಂ ಸುಗಿದು ಪುಗೆ ದಿಶಾಚಕ್ರ ಮಂ ತತ್ಸಭಾಗ್ರೇ । ಸರಮೇನುದ್ಯೋತದಿಂ ಬಾಸಣಿಸಿದುದೊ ವಿ ಯಚ್ಚಕ್ರಮಂ ಧರ್ಮಚಕ್ರಂ ॥ ೧೫೨

ಅಂತು ಸುರವಿರಚಿತಚತುರ್ದಶಾತಿಶಯಮೆಸೆಯೆ ಸಮವಶರಣ ವಿಹಾರಮಹಾಮಹಿಮೆಯಂ ಮೆಱೆಯುತ್ತುಂ ॥ ೧೫೩

ನೀಡುತ್ತುಂ ಕುಮತಕ್ಕೆ ತೇಜದೞಿವಂ ವಿಖ್ಯಾತಿಯಂ ತಾಳ್ದದೊ। ಳ್ನಾಡಂ ಕೂಡೆ ತೊಱಬ್ದು ಭವ್ಯಜನಮಂ ರತ್ನತ್ರಯಾಳಂಕೃತಂ ॥ ಮಾಡುತ್ತುಂ ಡೆಸೆವೆತ್ತ ಧರ್ಮವಿಜಯಶ್ರೀಕೇಕರಾಳೋಕನಂ ॥ ಕ್ರೀಡಾಮಂಡನಮಾಗೆ ಮಲ್ಲಿಜಿನಪಂ ಸಂಮೇದಮಂ ಮುಟ್ಟಿದಂ ॥

ಅಂತು ಬಂದು ಕಾಯಸ್ಥಿತಿಕಾಲಮೇಕಮಾಸಮೆನೆ ವಿನೇಯಜನ ವಿಹರಣವಿಕ್ರಿಯಾವಿಭೂತಿಯಂ ವಿಸರ್ಜಿಸಿ ಪಂಚಸಹಸ್ರಪರಮ ಯೋಗೀಂದ್ರರಿಂ ಪರಿವೃತನಾಗಿ ॥ ೧೫೪

ಕ್ಷಿತಿಭೃನ್ಮೂರ್ಧಾಭಿಷಿಕ್ತಂ ಬಲಮೆನಿಸಿದ ಸಮ್ಮೇದಶೈಳೇಂದ್ರ ದೊಳ್ ಕ । ಲ್ಪತರುಸ್ತೋಮಂಗಳಿಂ ಮಂಡಳಿಸಿದ ಕನಕಾಂಭೋಜ ಷಂಡಂಗಳಿಂ ಮಂ ॥ ಡಿತಮಾದತ್ಯಂತಶುದ್ಧಸ್ಫಟಿಕಮಣಿಶಿಳಾಪಟ್ಟ ದೊಳ್ ಮಲ್ಲಿನಾಥಂ । ಪ್ರತಿಮಾಯೋಗಪ್ರಯೋಗಂ ಗುಣಭವನಮಣಿ ಸ್ತಂಭಮಿರ್ಪಂತಿರಿರ್ದಂ ॥ ೧೫೫

---

೧. ಕ॥ ಪುಸ್ತಕದಲ್ಲಿಲ್ಲ.

ಅಂತಿರ್ದು ಸೂಕ್ಷ್ಮಶರೀರಯೋಗದಿಂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಪರಮಶುಕ್ಲಧ್ಯಾನದೊಳ್ ನೆಲಸಿ ಲಘುಕರ್ಮಪರಿಪಾಚನಶಕ್ತಿಪ್ರಾಪ್ತಿನಿಮಿತ್ತಂ ದಂಡಕವಾಟಲೋಕಪೂರಣಾಪ್ರತರಾಕ್ರಿಯೆಗಳೊಳಂ ಪ್ರತಿಸಮಯಂ ಪ್ರಯೋಗಿಸಿ [೧]ನಾಲ್ಕುಮಘಾತಿಕರ್ಮಸ್ಥಿತಿಕಾಲಮಂ ಸದೃಶಂಮಾಡಿ ಮೂಲಶರೀರಪರಿಣಾಮದೊಳ್ ನಿಂದು ವಾಙ್ಮನಃಕಾಯಯೋಗಮನಡಂಗಿಸಿ ಸಕಳಬಂಧಾಸ್ರವನಿರೋಧದಿನಯೋಗಕೇವಳಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾನಿವೃತ್ತಿ ಧ್ಯಾನಪ್ರವೃತ್ತನಾಗಿ ॥ ೨೫೮

ಪರಿಪೂರ್ಣಮೆನಿಸೆ ಗುಣಪರಿ ।
ಕರಂ ಯಥಾಖ್ಯಾತಚರಿತನಾಗಿ ಜಿನಂ ಮು ॥
ಕ್ತಿರಮಾಕಚಗ್ರಹಸ್ತನ ।
ಪರಿರಂಭಾರಂಭಕೇಳಿಗುತ್ಸುಕನಾದಂ ॥ ೨೫೯

[೨]ಆಗಿ ತದುಪಾಂತಸಮಯದೊಳನ್ಯತರ[೩]ವೇದನೀಯದೇವಗತಿತತ್ಪ್ರಾ
ಯೋಗ್ಯಾನುಪೂರ್ವ್ಯೌದಾರಿತಶರೀರತದ್ಬಂಧಸಂಘಾತಸಂಸ್ಥಾನಾಂ
ಗೋಪಾಂಗಸಂಹನನವರ್ಣಗಂಧರಸಸ್ಪರ್ಶಪ್ರಶಸ್ತಾಪ್ರಶಸ್ತವಿಹಾ
ಯೋಗತಿಗುರುಲಘೂಪಘಾತಪರಘಾತತಪ್ರೋದ್ಯೋತೋಚ್ಛ್ವಾಸಪ
ಯಾರ್ಪ್ತಿಪ್ರತ್ಯೇ[೪]ಕಶರೀರಸ್ಥಿರಾಸ್ಥಿರಶುಭಾಶುಭಸುಭಗದುರ್ಭಗಸು
ಸ್ವರದುಸ್ವರಾದ್ಯನಾದಿಯಶಸ್ಕೀರ್ತಿನಿರ್ಮಾಣ[೫]ನಿಜ್ಯೈರ್ಣತ್ರಯಂಗಳೆ
ಚೆಪ್ಪತ್ತೆರಡು ಪ್ರಕೃತಿಗಳಂ ದೂರೀಕೃತಂಮಾಡಿ ॥ ೨೬೦

೧. ನಾಲ್ಕುಘಾತಿ. ಕ॥ ೨. ಆಗಳಿಯುಪಾಂತ್ಯ. ಕ॥
೩. ತವೆಂದ. ಕ॥ ೪. ಅನಾದೆಯ. ಕ॥ ೫. ನಿಚ್ಛೈಗ್ಗೋತ್ರಂಗಳೆಂ. ಕ

ಪ್ರಕೃತಿಗಳಗಲ್ಕೆಯಿಂ ಶು ।
ಕ್ತಿಕೆಯಿಂ ಪೊಱಮಟ್ಟ ಮೌಕ್ತಿಕಂ ನೀರದಮಾ ॥
ಲಿಕೆಯಿಂ ತೊಲಗಿದ ಶಶಿ ಕಾ ।
ಳಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ ॥ ೨೬೧

ಅನಂತರಂ ಚರಮಸಮಯದೊಳ್ ಪರಿಶಿಷ್ಟಾನ್ಯತರವೇದನೀಯಮನುಷ್ಯಗತಿಪಂಚೇಂದ್ರಿಯಜಾತ್ಯಾನುಪೂರ್ವತ್ರಸನಾಮಬಾದರಪರ್ಯಾಪ್ತಕಸುಭಗಾದೇಯಯಶಸ್ಕೀರ್ತಿತೀರ್ಥಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲವಾಗೆ ಸಕಳಸಂಸಾರದುಃಖಘೋರಭಂಜನನುಂ ನಿರಂಜನನುಮೆನಿಸಿ ॥ ೨೬೨

ಕಿಡೆ ನಿಶ್ಶೇಷಮಘಾತಿ ಪಜ್ಜಳಿಸೆ ತನ್ನೆಣ್ಟುಂ ಗುಣಂ ಕೂಡೆ ನೇ । ರ್ಪಡೆ ದೀಪಾರ್ಚಿಗಳಂತಿರೂರ್ಧ್ವಗತಿ ಮೂಱುಂ ಲೋಕದಿಂ ಮೇಲೆ ಬೆ ॥ ಳೆಸ್ಗಡೆಯಿರ್ಪಂತೆಪ್ರೊಲಿರ್ದ ಸಿದ್ಧನಿಳಯಕ್ಕಾನಂದದಿಂ ಬಂದು ಕ್ಕೈ । ವಿಡಿದಂ ಶಾಶ್ವತಮಪ್ಪ ಮುಕ್ತಿವಧುವಂ ಶ್ರೀಮಲ್ಲಿಭಟ್ಟಾರಕಂ ॥

ಪರಮಂ ಫಾಲ್ಗುಣಶುದ್ಧದ ।
ಭರಣಿಯ ಪಂಚಮಿಯ ಪೂರ್ವರಾತ್ರದೊಳಪವ ।
ರ್ಗರಮಾವದನಾಂಭೋರುಹ ।
ಪರಿಮಳಮಂ ಪೀರ್ದನಂತಸುಖಮಯನಾದಂ ॥ ೨೬೪

ಆಗಳ್ ॥ ೨೬೫

ಪೊಮಱೆ ಕಱಿದತ್ತಖಿಳಾ ।
ಶಾಮುಖಮಂ ದೇವದುಂದುಭಿಧ್ವನಿ ತೀವಿ ॥

ತ್ತಾಮೋದಮತ್ತಮಧುಕರ।
ದಾಮಂ ತೀಡಿತ್ತು ಮಂದಮಂದಸಮೀರಂ ॥೨೬೬
ಇನಿತಮರಪಟಹಪೇಟಕ।
ಮಿನಿತಮರ ವಿಮಾನಪಟಳಮಿನಿತಮರಪತಾ॥
ಕಿನಿಯೆಂದು ನೆನೆಯಲರಿದೆನೆ।
ಜಿನಪೂಜೆಗೆ ಮಂದರಮರಪರಿವೃಢರಾಗಳ್ ॥೨೬೭
ಚಿತ್ರಾತಪತ್ರದಿಂ ಶತ।
ಪತ್ರವನಸ್ಥಳಿಯನಿಱಿಸೆ ಗಗನಂ ದೆಸೆಯುಂ॥
ಚಿತ್ರಿಸೆ ಕಿರೀಟಕಿರಣಂ।
ದ್ವಾತ್ರಿಂಶತ್ತ್ರಿದಶಪತಿಗಳಂದೆೞ್ತಂದರ್ ॥೨೬೮

ಅಂತು ನಿರ್ವಾಣಪೂಜೆಗೆ ನಿಖಿಳಗೀರ್ವಾಣಪತಿಗಳೆೞ್ತರ್ಪರ್ಗಳ್॥

ಪಳಕಿನ ಕೊಡದೊಳ್ ಗಂಗಾ।
ಜಳಂಗಳಂ ತೀವಿ ತರ್ಪ ಸುರವನಿತೆ ಘನೋ॥
ಪಳಮುಂ ತಾಳ್ದಿದ ವಿದ್ಯು।
ದ್ವಿಳಾಸಮಂ ನಿಜವಿಳಾಸದಿಂ ಮಸುಳಿಸಿದಳ್ ॥೨೬೯
ಚಂದನಕರ್ದಮಶುಕ್ತಿಕೆ।
ಕೆಂದಳದೊಳ್ತಳರೊಳೆಸೆವ ಪೂಗೊಂಚಲೆನಲ್ ।
ಬಂದರ್ ತಾರಾಂತಃಪುರ।
ಸುಂದರಿಯರ್ ಪರಮಚರಮಪೂಜೋತ್ಸವದೊಳ್ ॥೨೭೦
[1]ಸಿತವಿಕಸಿತಾಬ್ಜದೊಳ್ ತೀ।
ವಿ ತಂದರೆಳವೆಱೆಯ ಕಡಿರ [2]ಮೊಳೆಯೆನಿಪ ಸಿತಾ॥

೧. ವಿಕಸಿತಸಿತಾ. ಕ॥ ೨. ಮೊನೆ. ಳ॥

ಕ್ಷತಮಂ ದಿಗ್ದೇವತೆಯರ್ ।
ಸಿತಲೋಚನರುಚಿ ದಿಗುಂತಮಂ ಬಳಸುವಿನಂ ॥೨೨

ಜ್ಞಾನಕೃಶಾನುವಿಂದಮುರಿದೞ್ಗಿದ ಕಾಮನ ಮೋಹನಾಸ್ತ್ರಸಂ।
ತಾನಶರಾಸನಾವಳಿಯನೀಕೆಗಳೊಪ್ಪಿಸಲೀಜಿನೇಂದ್ರನಾ ॥
ಸ್ಥಾನಿಗೆಬಂದರಕ್ಕುಮೆನೆ ರಂಜಿಸೆ ಕೆಂದಳದೊಳ್ ಲತಾಂತಮಾ ।
ಳಾನಿಕುರುಂಬಮಿಕ್ಷುಲತೆ ಬಂದುದು ಕಿನ್ನರಕನ್ಯಕಾಜನಂ ॥೨೩

ಕರೆಗಣ್ಮುವ ನಿಜಲಾವ ।
ಣ್ಯರಸಂ ಪರಿನಾಳಮಿಕ್ಕಿದತ್ತೆನೆ ತಂದಳ್ ॥
ಸುರಸುಂದರಿ ಚಂದನರಸ ।
ಭರಿತಾಯತಕೇತಕೀದಳದೊಣೆಗಳಂ ॥೨೪

ತಳೆದನಿಮಿಷವಧುವೆರ್ ಕ ।
ಣ್ಗೊಳಿಸಿದರುನ್ಮಿಷಿತಕರ್ಣಿಕಾರಲತಾಸಂ ॥
ಕುಳಮೆನೆ ಸುವರ್ಣಮಯಪ ।
ರ್‍ಯಳಮಂ ಭಕ್ಷೋಪದಂಶಚರುವಿಳಸನಮಂ ॥೨೫

ಪಡೆವರಲಾವುದೊ ರನ್ನದ ।
ಸೊಡರಾವುದೊ ಪೇೞಿಮೆಂಬಿನಂ ಸಂದೆಗದ ॥
ಚ್ಚುಡಿದಿರೆ ನಾಗಾಂಗನೆಯರ್ ।
ಗಡಣದೆ ಸಮ್ಮೇದಸಾನುವಂ ಸಾರ್ತಂದರ್ ॥೨೬

೧. ದೞ್ಗಿದ, ಕ॥ಗ॥ ೨. ವೀಕ್ಷಣಮೆ. ಕ॥ ೩. ದಂತೆನೆ. ಕ॥
೪. ವರ್. ಕ॥ ಗ॥ ೫. ಪರಿ । ಮಳಮಂ. ಕ॥

ಒಗೆದ ಕುಚಂ ಮೊಗಂಗುಡದೆ ಚೆಲ್ವಿನೊಳೇೞಿಸೆ ತತ್ಸಮೀಪದೊ ಳ್ । ಪೊಗೆಮೊಗವಾದವೊಲ್ ತಳೆದ ಧೂಪಘಟಂಗಳನುಣ್ಮಿ ಪೊಣ್ಮಿ ತ ॥ ಱ್ತಗುರುವ ಧೂಮಲೇಖೆ ಸುರಸುಂದರಿಯರ್ನಡೆತಂದರುಂದು ಸು । ಯ್ಯೊಗೆದಳಿಮಾಲೆ[1] ತಮ್ಮ ಲುಳಿತಾಳಕದೊಳ್ತಡವಾದುವೆಂಬಿನಂ ॥

ವಿವಿಧಫಳಮಾದು ಪ್ರೋರೆೊಂ[2] ।
ದು[3] ವಲ್ಲಿಗನೆ ಚೆಲ್ವುವೆತ್ತುವಮರೀಕರಪ ॥
ಲ್ಲವದೊಳ್ ಕಾಂಚನಕದಳೀ ।
ನವಾಮ್ರನಾರಂಗನಾಳಿಕೇರಫಲಂಗಳ್ ॥ ೨೭೮

ನಿರತಿಶಯಮೆನಿಪ ಧರ್ಮಾ ।
ನುರಾಗಮೀತೋರ್ಪುದೆಂಬಿನಂ ಸುರವನಿತಾ ॥
ಕರಕಿಸಲಯದೊಳ್ ಕುಂಕುಮ ।
ಪರಿಪೂರ್ಣಸುವರ್ಣಭಾಜನಂ ಕಣ್ಗೊಳಿಕುಂ ॥ ೨೭೯

ಅಂತಮರಸಮಿತಿ ಗಗನತಳದಿನವನೀತಳಕ್ಕವತರಿಸಿ ॥ ೨೮೦

ಜವನಂ ಮಿಱ್ಱಿಜಿನಂ ಜವಂಗಿಡಿಸಿ ಗೆಲ್ಲಂಗೊಂಡ ಸಂಮೋದಶ್ರೈ । ಳವಿಶಾಳಸ್ಫಟಿಕಸ್ಥಳೀನಿಕಟದಿಂ ದ್ವಾತ್ರಿಂಶದಿಂದ್ರರ್ಕಳು ॥ ತ್ಸವದಿಂದರ್ಚಿಸುವಾಗಳೆಂ ಕಱಿದುದೋ[4] ಕರ್ಣಾಮೃತಸಾರಮಂ । ವಿವಿಧಾತೋದ್ಯಲಯಾನುಗಂ ಸುರವಧೂಮಂಜೀರಿಕಾಸಿಂಜಿತಂ ॥ ೨೮೧

ಅಂತರ್ಚಿಸಿ ಚತುರ್ಣಿಕಾಯ[5]ನಿಳಿಂಪನಾಯಕನಿಕಾಯಂ ಕರಕಿಸಲಯಮುಂ ನೊಸಲ್ಗೆ ತಂದು ॥ ೨೮೨

೧. ಯ್ಯೊವೆಗೆದ. ಕ॥ ೨. ಪೋಲೊಂ. ಗ॥ ೩. ದೆ. ಗ॥
೪. ನಱೀ. ಗ॥ ೫. ಕಾಯಂಕರಕಿಸಲ. ಗ॥

(ಪೃಥ್ವೀವೃತ್ತಂ)

ಮರಲ್ದರಲ ಚಾಪಮುಂ ಗೊಲೆಗೆ ನೂಂಕಿ ಮಾಱಾಂಪ್ರದುಂ ।
ಸ್ಮರಂ ನಿಜಶರೀರಸೌರಭಕೆ ಸೋಲ್ತು ತದ್ವ್ಯಾಜದಿಂ ॥
ದ್ವಿರೇಫತತಿ ಚಾಪದಿಂ ತೊಲಗೆ ಬೆಕ್ಕಸಂಬಟ್ಟನಂ ।
ನಿರಾಯುಧನನೇಕೆ ಸುಟ್ಟೆ ಗಡ ಮಲ್ಲಿಭಟ್ಟಾರಕಾ ॥೨೮೩

ಮನೋಭವನಜನ್ಮಭೂಮಿ ಮನಮೆಂದು ನಿರ್ಬಂಧದಿಂ ।
ಮನಕ್ಕೆ ಲಯಮುಂ ವಿನಿರ್ಮಿಸಿ ಮನೋಭವಂಗಾಶ್ರಯಂ ॥
ವಿನಷ್ಟಮೆನಿಸಿತ್ತು ಮತ್ತೆ ಪೆಱರಾಪ್ತರೇನೀಯರೇ ।
ಮನೋಭವನುಮಂ ಮಹಾಪುರುಷ ಮಲ್ಲಿಭಟ್ಟಾರಕಾ ॥೨೮೪

ಪ್ರಿಯಪ್ರಮದೆಯಿಂದಗಲ್ದ ವಿಟರಂ ವಿಯೋಗಾರ್ತರಂ ।
ಭಯಂಗೊಳಿಸುಗುಂ ಮನೋಭವನ ಪೂವಿನಯ್ದಂಬುಗಳ್ ॥
ದಯಾಂಗನೆಯ ಸಂಗದಿಂ ಪರಮಸೌಖ್ಯಮಂ ಪೆತ್ತನಂ ।
ಭಯಂಗೊಳಿಸಲೇನವಾರ್ತಪ್ರವೆ ಮಲ್ಲಿಭಟ್ಟಾರಕಾ ॥೨೮೫

ಇನಪ್ರಭೆಯ ಭಂಗಿಯುಂ ಕಿಡಿಸಿ ದುಸ್ತಮಸ್ತೋಮಮುಂ ।
ಜಿನಪ್ರಭೆ ವಿಶಿಷ್ಟದೃಷ್ಟಿಗೆ ಪದಾರ್ಥಮಂ ತೋಱಿಯುಂ ॥
ಘನಕ್ಷುಭಿತದೋಷದೃಷ್ಟಿಗೆ ವಿಷಾದಮಂ ಬೇಱಿಯುಂ ।
ವಿನಶ್ವರಮೆ ಭಂಡಮೇ ಚಳಮೆ ಮಲ್ಲಿಭಟ್ಟಾರಕಾ ॥೨೮೬

ಇದೇಂ ಜಡರೊ ಮೈತ್ರಿಯುಂ ಕರುಣಮುಂ ಬಿಸುಟ್ಟನ್ಯರಂ ।

೧. ಅಕ್ಕರವೃತ್ತವೆಂದು ಗ॥ ಪುಸ್ತಕದಲ್ಲಿದೆ. ೨. ಲತಾಳ್ದಿರೆಪತತಿ. ಗ॥
೩. ಸೆ. ಗ॥ ೪. ಲೇಕಾರ್ತ. ಗ॥ ೫. ಭಂಗಯಿಂ. ಕ॥
೬. ತೋಱಿಯುಂ. ಕ॥ಗ॥ ೭. ಬಱಿದೆಯುಂ. ಕ॥ಗ॥
೮. ನಿನಗೆ. ಕ॥ ೯. ಜಳಮೆ. ಕ॥

ವಿದಾರಿಪ್ಪುದೆ ವೀರಮುಂಧರವಿಚಾರಚಾರಕೆಲರ್ ॥
ಚಿದಾತ್ಮಭವದುಃಖಕಾರಣಮನಿಂದ್ರಿಯಾರಾತಿಯುಂ ।
ವಿದಾರಿಸುವ ವೀರಮಂ ಮಱೆದು ಮಲ್ಲಿಭಟ್ಟಾರಕಾ ॥೨೮೭

ಚತುರ್ದಶಿಯೊಳಿರ್ದ ವಸ್ತುಗುಣಪರ್ಯಯಜ್ಞಾನದಿಂ ।
ಚತುರ್ಮುಖನೆನಿಪ್ಪನಿನ್ನೊಳಶರೀರಿಯೊಳ್ಗಾವಿಲರ್ ॥
ಚತುರ್ಮುಖಮನೇಕೆ ಕಲ್ಪಿಸಿದರೀವಿಪರ್ಯಸ್ತರೊಳ್ ।
ಮತಿಭ್ರಮೆಯನಾಗಲೀಯದಿರೆ ಮಲ್ಲಿಭಟ್ಟಾರಕಾ ॥೨೮೮

ಮೊದಲ್ಗಿಡಿಸಿ ಘಾತಿಕರ್ಮಮನಘಾತಿಕರ್ಮಂಗಳಂ ।
ಬಿದಿರ್ಚಿ ಗುಣಮೆಣ್ಟುಮಂ ತಳೆದನಾಕುಳಂ ಪೊರ್ದಿದೈ ॥
ಸದಾಶಿವನಿವಾಸಮುಂ ಚರಮದೇಹಮುಂ ಬಿಟ್ಟು ನೀಂ ।
ತ್ವದೀಯಪರಮತ್ವಮಂ ಪಿಡಿದೆ ಮಲ್ಲಿಭಟ್ಟಾರಕಾ ॥೨೮೯

ಎಂದು ವಸ್ತುಗುಣರೂಪಸ್ತವನಂಗಳಂ ಮಾಡಿ ॥೨೯೦

ಪರಮಾನಂದದಿನಾಡೆ ತಾಂಡವಮನೀಶಾನೇಂದ್ರನುತ್ಕರ್ಷಹ ।
ರ್ಷರಸಾಡಂಬರದಿಂ ಗಣಂ ಕುಣಿಯೆ ಲಾಸ್ಯಪ್ರೌಢಿಮಿಂ ದೇವಸುಂ ॥
ದರಿಯರ್ ಮೆಚ್ಚಿಸೆ ಮೆಚ್ಚಿ ಬಿಚ್ಚಳಿಸನಾವಂ ಸರ್ವಗೀರ್ವಾಣಭ ।
ಕ್ತಿರಸಾವೇಶಕೃತಾರ್ಚನಾತಿಶಯಮುಂ ನಿರ್ವಾಣಕಲ್ಯಾಣಮುಂ ॥

ಅಂತು ನಿರ್ವಾಣಪೂಜೆಯುಂ ನಿರ್ವರ್ತಿಸಿ ದೇವದೇವರೆಲ್ಲಂ ನಿಜನಿವಾಸಕ್ಕೆ ಪೋಪುದುಂ ॥೨೯೨

ಕುಸುಮಶ್ರೀಖಂಡಕೃಷ್ಣಾಗುರುವಿವಿಧಫಳಾದ್ಯರ್ಚನಾದ್ರವ್ಯದಿಂದ । ರ್ಚಿಸಿ ಮತ್ತಂ ತನ್ನ ಚಿತ್ತಂ ತಣಿಯದೆ ನಿರವದ್ಯಂ ಚಿರಸ್ಥಾಯಿ

೧. ಧೀರಮಂ. ಕ॥ ೨. ಕುಮುದ. ಗ॥

ನಿಚ್ಚಂ॥ ಪೊಸತೆಂಬೀ ಪೆರ್ಮೆಯಿಂ ಪಾವನಮೆನಿಸಿದ ವಾಕ್ಯೋಪ ಹಾರಂಗಳಿಂದ। ರ್ಚಿಸಿದಂ ಶ್ರೀಮಲ್ಲಿಭಟ್ಟಾರಕಪದಯುಗಮಂ ಭಾರ ತೀಕರ್ಣಪೂರಂ ॥೨೯೩

ಚರಿತಪುರಾಣಮಂ ನೆಱಿಯೆ ಪೇೞ್ದೊಡೆ ಪೇೞ್ಗೆಮ ದಿವ್ಯಭಾಷೆ ಯಿಂ। ಪರಮಜಿನೇಶ್ವರರ್ ಗಣಧರರ್ ಜಿನತತ್ವಮಹತ್ವಮನ್ಯಗೋ॥ ಚರಮೆ ರಸಾವಳಂಬಮೆನೆ ಮಲ್ಲಿಜಿನೇಂದ್ರಮಹಾಪುರಾಣಮಂ। ವಿರಚಿಸಿದಂ ಪ್ರಸಿದ್ಧಕವಿಪದ್ಧತಿಯಿಂ ಕವಿತಾಮನೋಹರಂ ॥೨೯೪

ಸಮುಚಿತ್ತರಪ್ಪ ವಿದ್ವ।
ತ್ತಮರಿರ್ದಾರಯ್ಯೆ ಸರಸಕವಿತಾರಸದೊಳ್॥
ಸಮನಕ್ಕುಮಧಿಕಮಕ್ಕುಂ।
ಸಮಸ್ತಕಾವ್ಯಕ್ಕೆ ಮಲ್ಲಿನಾಥಪುರಾಣಂ ॥೨೯೫

ಸತತಂ ಪರಿಭಾವಿಸೆ ಮು॥ ।
ಚತುರ್ದಶಂಗಳನಡಿಪ್ಪುಗುಂ ಚಿತ್ತಚಮ॥
ತ್ಕೃತಿ ಮಲ್ಲಿಜಿನಪುರಾಣಂ।
ಚತುರ್ದಶಾಶ್ವಾಸಮುಚಿತಪದವಿನ್ಯಾಸಂ ॥೨೯೬

ನಿಜವಿಭವೋದಯಂ ಸಫಳಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ। ವಿಜಯಪುರಕ್ಕಳಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮಂ॥ ಸುಜನಸಭಾವತಂಸಮೆನೆ ಪೇೞ್ದುದಿತೋದಿತಮಾಗೆ ಮಾಡಿದಂ। ನಿಜಕವಿತಾಗುಣೋದಯಮದೆಂಬಿನಮೀಕೃತಿ ನಾಗಚಂದ್ರನಾ ॥೨೯೭

ಗಂ. ದುಂ. ಗ॥

ಸುಕೃತಿಪ್ರೀತಿಲತಾಸಮುತ್ಕಳಿಕೆ ವಿದ್ವನ್ಮಂಡಳೀರತ್ನಕಂ ।
ಠಿಕೆ ಧರ್ಮಾಮೃತಮೇಘಮಾಳಿಕೆ ವಚಶ್ಶ್ರೀನರ್ತಕೀನೃತ್ಯವೇ ॥
ದಿಕೆ ಸಾಹಿತ್ಯಸರೋಜಕರ್ಣಿಕೆ ಯಶಶ್ಶ್ರೀಕೇಕರಾಳೋಕಚಂ ।
ದ್ರಿಕೆ ನಿಲ್ಕೀಕೃತಿ ಕಲ್ಪಕೋಟಿವರೆಗಂ ಭದ್ರಂ ಶುಭಂ ಮಂಗಳಂ ॥

'ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ ಮುನೀಂದ್ರ
ಚರಣನಖಕಿರಣಚಂದ್ರಿಕಾಚಕೋರಂ ಭಾರತೀಕರ್ಣಪೂರಂ
ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಚರಿತಪುರಾಣದೊಳ್
ಪರಿನಿರ್ವಾಣಕಲ್ಯಾಣವರ್ಣನಂ
ಚತುರ್ದಶಾಶ್ವಾಸಂ ಸಂಪೂರ್ಣಂ.




8. 3. 95.

